# ಪುಟ್ಟತಾಯಿ

(ಕಾದಂಬರಿ)

ನರೇಂದ್ರಬಾಬು

ಪ್ರಕಾಶಕರು :

ಡಿ. ವಿ. ಕೆ. ಮೂರ್ತಿ

ಕೃಷ್ಣಮೂರ್ತಿಪುರಂ

ಮೈಸೂರು

ಮೊದಲ ಮುದ್ರಣ : ೧೯೫೪



ಮುಖಚಿತ್ರದ ಕಲೆಗಾರಿಕೆ :

ಶ್ರೀ ಎಂ. ಎಚ್. ರಾಮು, ಮೈಸೂರು.

ಮುಖಚಿತ್ರದ ಪಡಿಯಚ್ಚುಗಳು ಮತ್ತು ಮುದ್ರಣ :

ವೆಸ್ಲಿ ಪ್ರೆಸ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು.

ಮುದ್ರಕರು :

ಪರಿಮಳ ಪ್ರೆಸ್,

ನೂರಡಿ ರಸ್ತೆ, ಮೈಸೂರು.

ಅಧಿಕೃತ ಮಾರಾಟಗಾರರು :

ಜೆ. ನಾನುಮಲ್ ಅಂಡ್ ಸನ್ಸ್,

ಸಯ್ಯಾಜಿರಾವ್ ರಸ್ತೆ, ಮೈಸೂರು.

# ಅರಿಕೆ

ಇದು ನನ್ನ ಎರಡನೆಯ ಹಳ್ಳಿಯ ಕಾದಂಬರಿ. ನನ್ನ ಮೊದಲನೆಯ ಕಾದಂಬರಿಯಾದ 'ನಾಲ್ಕನೆಯ ಮನೆ'ಯಂತೆಯೇ ಇದೂ ಕೂಡ ಯಾವುದೊಂದು ಹೊಸ ನೀತಿಯನ್ನಾಗಲೀ, ತತ್ತ್ವವನ್ನಾಗಲಿ, ಪ್ರತಿಪಾದಿಸಲು ಸಮರ್ಥವಾಗಿಲ್ಲ. 'ತಾಯಿ ತಂದೆಯರ ಕಷ್ಟಕ್ಕೆ ಹೆಣ್ಣು ಮಕ್ಕಳು ಆಗುವ ಹಾಗೆ ಗಂಡು ಮಕ್ಕಳಾಗುವುದಿಲ್ಲ' ಎಂಬ ಮಾತಿನ ಮೇಲಿನ ಊಹೆಗಳೇ ಈ ಕತೆಗೆ ಆಧಾರ. ಇದಕ್ಕಿಂತ ಹಳೆಯ ವಸ್ತುವಿನ್ನೊಂದಿಲ್ಲ—ಇದಕ್ಕಿಂತ ಹೊಸ ವಸ್ತುವೂ ಇನ್ನೊಂದಿಲ್ಲವೆಂಬುದು ನನ್ನ ಅಭಿಮತ. ಈ ಕತೆಯಲ್ಲಿ ಗೋಚರಿಸುವ ವ್ಯಕ್ತಿಗಳು, ಸನ್ನಿವೇಶಗಳು, ಚಿತ್ರಗಳು, ಸತ್ಯ ಜೀವನದ ಕಲಾ ಕೌಶಲ್ಯಕ್ಕೆ ಹೊರತಾಗಿಲ್ಲವೆನ್ನಿಸಿದರೆ ನಾನು ಧನ್ಯ. ಪ್ರಿಯ ಓದುಗರಲ್ಲಿ ಹೆಚ್ಚು ಮಂದಿಗೆ ಕಾದಂಬರಿಯಲ್ಲಿನ ಅಭಿಪ್ರಾಯಗಳೂ ಸಮಂಜಸವಾಗಿ ತೋರಿದರೆ ಅದು 'ಪುಟ್ಟತಾಯಿ'ಯ ಪುಣ್ಯ.

ನನ್ನ ಈ ಕೃತಿಯನ್ನು ಎಂದಿನ ವಿಶ್ವಾಸದಿಂದಲೇ ಇಷ್ಟು ಸುಂದರವಾಗಿ ಪ್ರಕಟಗೊಳಿಸುತ್ತಿರುವ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೂ, ಸೊಗಸಾದ ಮುಖ ಚಿತ್ರವನ್ನು ಸೃಷ್ಟಿಸಿಕೊಟ್ಟ ನನ್ನ ಗೆಳೆಯರೂ ಹಿತೈಷಿಗಳೂ ಆದ ಶ್ರೀ ಎಂ. ಎಚ್. ರಾಮೂರವರಿಗೂ ನನ್ನ ಕೃತಜ್ಞತೆಗಳು.

ಮೈಸೂರು
೨೨-೭-೫೪

ನರೇಂದ್ರಬಾಬು

# ಪುಟ್ಟತಾಯಿ

## ೧

ಹೆಂಗಸರ ಹಾಗೆ ಗಂಡಸು ರಾಗಿ ಕಲ್ಲು ಮುಂದೆ, ಒಂದು ಕಾಲನ್ನು ಚಾಚಿಕೊಂಡು ಕುಳಿತು ಬೀಸಲು ಮೊದಲು ಮಾಡಿದರೆ--ಅದೂ ಒಬ್ಬ ಹೆಂಗಸಿನ ಎದುರಿಗೆ—ಎಷ್ಟು ಚೆನ್ನ! ಸಿದ್ದಪ್ಪ ತಾನು ಮಾಡಿಕೊಂಡ ತಪ್ಪಿಗೆ ಹೀಗೆ ಮಾಡಬೇಕಾಯಿತು. ಹೆಂಡತಿಗೆ ಸುಮಾರು ಒಂದು ತಿಂಗಳಿನಿಂದಲೂ ಖಾಯಿಲೆ. ಅವಳು ಸದಾ ಮಣಕು ದಿಂಬನ್ನು ಹೊಟ್ಟೆಗೆ ಒತ್ತುಕೊಟ್ಟು ಮಲಗಿರುತ್ತಿದ್ದಳು. ಆಕೆಗೆ ಅಸಾಧ್ಯ ಹೊಟ್ಟೆ ನೋವು. ಅಡಿಗೆ ಸಿದ್ದಪ್ಪನದೆ. ಆದರೆ ಜೋಳ ಬೀಸುತ್ತಿದ್ದವಳು ಪುಟ್ಟತಾಯಿ. 'ಹಸಿಟ್ಟು' ತೀರಿ ಹೋಯಿತೆಂದು ಜ್ಞಾಪಕವಾಗಿ ತಿಳಿಸದೇ ಇದ್ದದ್ದು ಸಿದ್ದಪ್ಪನ ತಪ್ಪು. ಆದ್ದರಿಂದ ಮಗಳು ಪುಟ್ಟತಾಯಿ ತನ್ನ ಪಾಡಿಗೆ ತಾನು ಎಮ್ಮೆ ಹೊಡೆದುಕೊಂಡು ಹೋಗಿದ್ದಳು. ಅವಳು ಬರುವುದಕ್ಕೆ ಹೊತ್ತು ಬೀಳುವ ಸಮಯವಾಗಬೇಕು. ಅಲ್ಲಿಯವರೆಗೆ ಒಲೆಹಚ್ಚದಿದ್ದರೆ ಹುಡುಗ ಮಲ್ಲೇಶ ಮಾನವನ್ನು ಉಳಿಸುತ್ತಿರಲಿಲ್ಲ.

ರಾಗಿ ಕಲ್ಲು ತಿರುಗುವ ಶಬ್ದವಾಯಿತು. ಬೋರಲಾಗಿ ಬಿದ್ದಿದ್ದ ತಾಯಕ್ಕ ಮೆಲ್ಲಗೆ ಮುಖವನ್ನು ಕಲ್ಲಿನ ಕಡೆಗೆ ತಿರುಗಿಸಿನೋಡಿದಳು. ಗಂಡ, ಮೊರದಲ್ಲಿ ಒಂದು ಸೇರು ಜೋಳವನ್ನು ಹಾಕಿಕೊಂಡು ಹೆಂಗಸರಿಗಿಂತ ಚೆನ್ನಾಗಿ ಕೈ ಬದಲಾಯಿಸಿಕೊಳ್ಳುತ್ತ, ಕಲ್ಲನ್ನು ನಿಲ್ಲಿಸದೆ ಜೋಳವನ್ನು 'ಇಕ್ಕಿ' ಕೊಂಡು ಆಗಾಗ್ಗೆ ಕಲ್ಲೆತ್ತಿಕೊಳ್ಳುತ್ತಾ ಸರಾಗವಾಗಿ ಬೀಸುತ್ತಿದ್ದನು. ಈ ಕೆಲಸದಲ್ಲಿ ಗಂಡ ಅಷ್ಟು ಪಳಗಿದವನು ಎಂಬ ವಿಷಯ ತಾಯಕ್ಕನಿಗೆ ತಿಳಿಯದೇ ತಿಳಿಯದು. ಹಾಗೆ ನೋಡುತ್ತ ನೋಡುತ್ತ ಬೋರಲಾಗಿದ್ದವಳು ಮಗ್ಗುಲಾದಳು. ಸಿದ್ದಪ್ಪನ ಗಮನ ಅವಳ ಕಡೆಗೆ ಹೋಯಿತು. ಅವಳು ಪ್ರೀತಿಯಿಂದ ನಕ್ಕಳು. ಅವಳ ನಗುವಿನಲ್ಲಿ

ಕುಚೇಷ್ಟೆಯೂ ಇತ್ತು. ಸಿದ್ದಪ್ಪನಿಗೆ ಸುಮಾನದೊಡನೆ ತುಸು ಸುಳ್ಳು ಮುನಿಸೂ ಬಂದಿತು. ಅವನು ರಾಗವನ್ನೇ ಎತ್ತಿಬಿಟ್ಟನು

ಅಕ್ಕಿ ಬೀಸೋ ಕಲ್ಲೇ ಸಕ್ಕರೆ ಪುಡಿಗಲ್ಲೆ
ಅಪ್ಪಾಜಿಯ ಮನೆಯ ಪದಗಲ್ಲೆ
ಅಪ್ಪಾಜಿ ಮನೆಯ ಪದಗಲ್ಲೆ ಪಚ್ಚೇಕಲ್ಲೆ
ಮುತ್ತೀನ ಕಲ್ಲೇ ಕೊಡು ದನಿಯ................

ಎಂದು, ರಾಗಿಕಲ್ಲನ್ನು ಸ್ತೋತ್ರಮಾಡಿ ಗಂಟಲು ಸರಿಮಾಡಿ ಕೊಂಡನು. ಊರ ನಾಟಕಗಳಲ್ಲಿ ಆಗಾಗ್ಗೆ 'ಪಾಳ್ಟು' ಮಾಡುತ್ತಿದ್ದ ಸಿದ್ದಪ್ಪನ ದನಿ ಇಂಪಾಗಿತ್ತು. ತಾಯಕ್ಕ ಸಿಕ್ಕಾ ಬಟ್ಟೆ ನಗಲು ಮೊದಲು ಮಾಡಿದಳು. ಸಿದ್ದಪ್ಪ—

ಹೆಣ್ಣು ಹುಟ್ಟಿತು ಎಂದು, ಅಣ್ಣ ಚಿಂತಿಸಬೇಡ
ಹೆಣ್ಣುಂಡು ಪರರ ಮನೆಯಲ್ಲಿ
ಹೆಣ್ಣುಂಡು ಪರರ ಮನೆಯಲ್ಲಿ—ತವರೀನ
ಅಣ್ಣ ಬಾಳೆಂದು ಹರಸುವಳು................

ಎಂದನು. ತಾಯಕ್ಕನ ನಗು ಹೆಚ್ಚುತ್ತಲೇ ಹೋಗುತ್ತಿತ್ತು. ನಗು, ಕೆಮ್ಮಲಾಗಿ ತಿರುಗಿದಮೇಲೆ ಹಾಸ್ಯ ಕರಗುತ್ತಾ ಬಂದಿತು. ಕೊಂಚ ಹೊತ್ತು ಹಾಗೇ ಕೆಮ್ಮಿ ಕೆಮ್ಮಿ, ಹೊಟ್ಟೆ ಸಿಕ್ಕಿಕೊಂಡ ಹಾಗಾಗಿ ಹೊಟ್ಟೆ ನೋವು ಪ್ರಾರಂಭವಾಯಿತು. ಹೊರಳಾಡಲು ಮೊದಲು ಮಾಡಿದಳು. ಪುನಃ ಬೋರಲಾದಳು. ಸಿದ್ದಪ್ಪ ಪದಗಳನ್ನು ಬಿಟ್ಟು ಹಾಗೆಯೇ ಜೋಳ ವನ್ನು ಬೀಸಿಕೊಂಡು ಎದ್ದು ಅಡಿಗೆಯ ಮನೆಯೊಳಕ್ಕೆ ಹೋದನು.

ತಾಯಕ್ಕನಿಗೆ ತನ್ನ ಹೊಟ್ಟೆನೋವನ್ನು ವಾಸಿಮಾಡಿಕೊಳ್ಳುವುದಕ್ಕೇ ಹೆದರಿಕೆ—ಎಂದರೆ ಆಸ್ಪತ್ರೆಗೆ ಹೋದರೆ ವಾಸಿಯಾಗುವುದೆಂದೂ ಇಲ್ಲ ವಾದರೆ ಕಷ್ಟವೆಂದೂ 'ನಾಟಿ' ಪಂಡಿತರು ಕೆಲವರು ಅಭಿಪ್ರಾಯಪಟ್ಟಿದ್ದ ರಂತೆ. ಆಸ್ಪತ್ರೆಯಲ್ಲಿ ಇಂತಹ ಹೊಟ್ಟೇನೋವಿಗೆ ಹೊಟ್ಟೆಯನ್ನು ಕುಯ್ಯು ವುದೇ ಔಷಧಿಯೆಂದು ತಾಯಕ್ಕನಿಗೆ, ಮೈಸೂರಿಗೆ ಮದುವೆಯಾಗಿದ್ದ

ಕೆಂಪದೇವಿ ಹೇಳಿದ್ದಳು. ಆಯಸ್ಸು ತೀರುವವರೆಗೂ ಹೊಟ್ಟೇನೋವನ್ನು ಸಹಿಸಿಯೇ ಬಿಡುತ್ತೇನೆ ಎಂದು ತಾಯಕ್ಕ ಹಟ ಹಿಡಿದು ಬಿಟ್ಟದ್ದಳು. 'ನಾಟಿ' ಔಷಧಿಗಳಮೇಲೆ ಸಿದ್ದಪ್ಪನಿಗೆ ಮಾತ್ರ ನಂಬಿಕೆ ತಪ್ಪಿರಲಿಲ್ಲ. ಆದುದರಿಂದ ತಾಯಕ್ಕ ಅವುಗಳನ್ನು ಕುಡಿಯಲೇ ಬೇಕಾಗಿತ್ತು.

ಎಮ್ಮೆ ಮನೆಯೊಳಕ್ಕೆ ಬಂದಿತು. ಕರು, ಕುಳಿತಲ್ಲಿಂದಲೇ ಕತ್ತು ತಿರುಗಿಸಿ 'ವಯ್' ಎಂದಿತು. ಎಮ್ಮೆಯ ಹಿಂದೆ ಪುಟ್ಟತಾಯಿ ಬಂದಳು. ಎಣ್ಣೆ ಬಾಚಣಿಗೆಗಳನ್ನು ಕಾಣದ ತಲೆ, ತಾಯಕ್ಕನದೊಂದು ಕುಪ್ಪಸ. ಸೀರೆಯ ತುಂಡೊಂದರ ಲುಂಗಿ. ಇವು ಪುಟ್ಟತಾಯಿಯ ವೇಷ. ಅವಳ ಮುಖದಲ್ಲಿ ಅಂದವಾದವು ಎರಡು ಕಣ್ಣುಗಳು. ಅವುಗಳ ವಿನಃ ಇನ್ಯಾವ ಆಕರ್ಷಣೆಯೂ ಇರಲಿಲ್ಲ. ಅಂತೂ ಗಟ್ಟಿಮುಟ್ಟಿಯಾದ ಶರೀರದ ಕಷ್ಟಕಾರಿ ಹುಡುಗಿ.

ಎಮ್ಮೆ ಮನೆಯ ಎಡಭಾಗಕ್ಕೆ ಹೋಗುವುದರ ಬದಲು ಬಲಭಾಗಕ್ಕೆ ನುಗ್ಗಿತು. ಅಲ್ಲೇ ತಾಯಕ್ಕ ಮುಖತುಂಬಾ 'ದುಪಟಿ' ಹೊದೆದು ಬಿದ್ದಿದ್ದದ್ದು. ಎಮ್ಮೆಗೆ ಅಲ್ಲಿ ಮಲಗಿರುವವರು ಕಾಣದೇ ತುಳಿದು ಬಿಡುವುದರಲ್ಲಿತ್ತು. ಪುಟ್ಟತಾಯಿ ಓಡಿಬಂದು ಎಮ್ಮೆಯನ್ನು ಹಿಂದಕ್ಕೆ ಅಟ್ಟುವ ಸಂಭ್ರಮದಲ್ಲಿ ಅವಳೇ ತಾಯಕ್ಕನ ಕಾಲಿನ ಮೇಲೆ ಕಾಲಿಟ್ಟುಬಿಟ್ಟಳು. ತಾಯಕ್ಕ ಕೂಗಿಕೊಂಡು ತಟ್ಟನೆ ಮುಸುಗು ತೆಗೆದು ಪುಟ್ಟತಾಯಿಯನ್ನು ಚೆನ್ನಾಗಿ ಬೈದಳು. ತಾಯಿಯು ನೋವಿಗೆ ನರಳುವುದಕ್ಕೆ ಬದಲಾಗಿ ನಿಂದಿಸುತ್ತಿದ್ದಾಳೆಂಬುದು ಪುಟ್ಟತಾಯಿಗೆ ಹೇಗೆ ಗೊತ್ತಾಗಬೇಕು ? ತಾನು ಕಾಣದೇ ಮಾಡಿದ ತಪ್ಪಿಗೆ ಅಷ್ಟು ಬಯ್ಯುವುದು ತಾಯಿಯ ತಪ್ಪು ಎಂದವಳಿಗನ್ನಿಸಿ, ಅವಳೂ ತಾಯಿಯನ್ನು ಆಡಲು, ಮೊದಲು ಮಾಡಿದ್ದಳು.

"ನನ್ನ ಕಾಲು ಹೋಯ್ತಲ್ಲ ದೈಯ್ಯವೇ ! ಕಣ್ಣು ಕಾಣ್ನಿಲ್ವಾ ಮೂದೇವಿ !"

"ಐ ! ಕಾಣ್ನಿಲ್ಲಕಣ ಬಿದ್ಕವ್ವ ಸುಮ್ನೆ. ಯಾಕಂಗಾಡೀಯೆ"

"ಹಿಂತಿರಿಕಂಡು ಮಾತಾಡ್ತೀಯ. ಮಾಡದು ಮಾಡ್ಬುಟ್ಟು ? ನಾನು ಕಾಯ್ಲೆ ಬಿದ್ಕಳ್ಳಾಗಿ ನೀನು ಕುಲಗೆಟ್ಹೋಯ್ತಾ ಇದೀಯೆ ಪುಟ್ಟ"

"ಊ, ಕುಲಗೆಟ್ಟೋಯ್ತುರೆ! ನಿನಗ್ಯಾವಾಗಲೂ ಅದೇಗ್ಯಾನ"

"ತಿರಗಾನೋಡು ಹಿಂತಿರೀಕಂಡು........"

"ಸರೋಯ್ತು! ಈಗೇನಾಡ್ದ್ರವ್ವ ಆಡಬಾರದ್ದು?"

ತಾಯಕ್ಕ ಎದ್ದು ಕುಳಿತೇ ಬಿಟ್ಟಳು. ಪುಟ್ಟತಾಯಿ ಹೆದರಲಿಲ್ಲ. ಸಿದ್ದಪ್ಪ 'ಕೋಣೆ'ಯಿಂದ ಹೊರಗೆ ಬಂದು ಹೆಂಡತಿಗೂ ಮಗಳಿಗೂ ಮಧ್ಯೆ ನಿಂತನು. ಹೆಂಡತಿಯನ್ನೂ ಅಂದು, ಮಲಗಿಸಿದನು. ಮಗಳನ್ನೂ ಬೈದು ಕಳುಹಿಸಿದನು. ಅವನಿಗೆ ಇಬ್ಬರ ಮೇಲೂ ಕೋಪಬರಲಿಲ್ಲ. ಯಾವಾಗಲೂ ಹೀಗೆಯೆ. ಸಿದ್ದಪ್ಪನಿಗೆ ಹೆಣ್ಣನ್ನು ಕಂಡರೇ ವಿಶ್ವಾಸ. ತಾಯಿಯಾದ ಹೆಣ್ಣನ್ನು ಪೂಜಿಸಿದ್ದ, ಹೆಂಡತಿಯಾದ ಹೆಣ್ಣನ್ನು ಮೋಹಿಸಿದ್ದ, ಮಗಳಾದ ಹೆಣ್ಣನ್ನು ಪ್ರೀತಿಸಿದ್ದ. ಆದರೆ ಒಂದು ವಿಚಿತ್ರ. ಅವನ ತಾಯಿಗೆ ಅವನ ಹೆಂಡತಿಯನ್ನು ಕಂಡರಾಗುತ್ತಿರಲಿಲ್ಲ. ಅವನ ಹೆಂಡತಿಗೆ ಅವಳ ಮಗಳನ್ನು ಕಂಡರಾಗುತ್ತಿರಲಿಲ್ಲ. ಜಾತಿಗೆ, ಜಾತಿ ವೈರವೇನೋ? ಸಿದ್ದಪ್ಪ ಅದನ್ನು ಚೆನ್ನಾಗಿ ಯೋಚಿಸಿಕೊಂಡಾಗ ನಿಜವೆನ್ನಿಸುತ್ತಿತ್ತು. ವಂಶೋದ್ಧಾರಕನಾದ ಗಂಡುಮಗ ಮಲ್ಲೇಶನನ್ನು ಕಂಡರೆ ಸಿದ್ದಪ್ಪನಿಗೆ ಅಷ್ಟೇನೂ ಹುಚ್ಚು ಪ್ರೀತಿಯಿರಲಿಲ್ಲ.

ತಾಯಕ್ಕನಿಗೆ ಮಲ್ಲೇಶನೇ ಪ್ರಾಣ. ಸಿದ್ದಪ್ಪನಿಗೆ ಪುಟ್ಟತಾಯಿಯೇ ಸರಿ. ಪುಟ್ಟತಾಯಿಯ ಮೇಲೆ ತಾಯಕ್ಕ ರೇಗಾಡಿದಾಗಲೆಲ್ಲ ಸಿದ್ದಪ್ಪ ಹೆಂಡತಿಗೆ ಬುದ್ಧಿ ಹೇಳುತ್ತಿದ್ದನು. ವೃದ್ಧಾಪ್ಯದಲ್ಲಿ ತಂದೆತಾಯಿಗಳಿಗೆ ಹೆಣ್ಣುಮಕ್ಕಳೇ ಅನುಕೂಲವಾಗುವವರು ಎಂಬುದು ಸಿದ್ದಪ್ಪನ ವಾದ ಮತ್ತು ನಂಬಿಕೆ. ತಾಯಕ್ಕನಿಗೆ ಆ ನಂಬಿಕೆ ಬರುತ್ತಿರಲಿಲ್ಲ. ಅವಳು ಸುಮ್ಮನಾಗುತ್ತಿದ್ದುದು ಮಾತು ಬೆಳೆಯದಿರಲಿ ಎಂದು. ತಾನು ತನ್ನ ಅಪ್ಪ ಅಮ್ಮಂದಿರ ಸಮಯಕ್ಕೆ ಆಗುತ್ತಿದ್ದಂತೆ ತಾನೆ ತನಗೆ ಈ ಪುಟ್ಟ ತಾಯಿ ಮುಂದೆ ಆಗುವುದು? ಎಂಬುದೇ ಅವಳ ಅಭಿಪ್ರಾಯ.

ಅವಳ ಪ್ರೀತಿಯ ಮಲ್ಲೇಶನುಮನೆಯೊಳಕ್ಕೆ ಬಂದನು. ಅವನ ಕೈಹಿಡಿದು ಪಂಡಿತಪ್ಪನೂ ಬಂದನು. ಗುಡಿಬೀದಿಯಲ್ಲಿ ಯಾರಮನೆಗೋ

ಬಂದಿದ್ದ ತೆಂಕಳ್ಳಿಪಂಡಿತಪ್ಪನನ್ನು ಮಲ್ಲೇಶ ಕಂಡನಂತೆ. ತಾಯಿಗೆ ಖಾಯಿಲೆ ಎಂಬುದನ್ನು ಪಂಡಿತಪ್ಪನಿಗೆ ತಿಳಿಸಿದನಂತೆ. ಅವನೆಲ್ಲಿ ಮನೆಗೆ ಬರದೇ ಊರಿಗೆ ಹೊರಟುಬಿಡುವನೋ ಎಂಬ ಅಪನಂಬಿಕೆಯಲ್ಲಿ ಮಲ್ಲೇಶ ಅವನೊಡನೆಯೇ ಇಷ್ಟು ಹೊತ್ತು ಕಳೆದು ಕರೆದುಕೊಂಡು ಬಂದಿದ್ದನು. ಮಲ್ಲೇಶ ಎಂಟುವರ್ಷದ ಹುಡುಗ. ತಾಯಕ್ಕ, ಸಿದ್ದಪ್ಪನನ್ನು ಕರೆದು, ಮಲ್ಲೇಶನನ್ನೂ ಪುಟ್ಟತಾಯನ್ನೂ ಹೋಲಿಸಿ ತೋರಿಸಿದಳು. ಸಿದ್ದಪ್ಪನು ತನ್ನ ಸಮಸ್ಯೆಯನ್ನು ಪಂಡಿತಪ್ಪನ ಮುಂದಿಟ್ಟನು. ಪಂಡಿತಪ್ಪನ ಅನುಭವ ದಲ್ಲೂ ಹೆಣ್ಣುಮಕ್ಕಳ ಪ್ರಭಾವವೇ ಮೂಡಿ ನಿಂತಿದ್ದುದರಿಂದ 'ಹೆಣ್ಣು ಐಕಳೇ ಗಂಡುಐಕಳಿಗಿಂತ ವಾಸೆ' ಎಂದು ಅಭಿಪ್ರಾಯಪಟ್ಟನು. ತಾಯ ಕ್ಕನಿಗೆ ಅವನ ಔಷಧಿಯಲ್ಲೇ ನಂಬಿಕೆ ತಪ್ಪಿಹೋಗುವಷ್ಟು ಬೇಸರ ವಾಯಿತು.

ಸಿದ್ದಪ್ಪನು, ಹೆಂಡತಿಯ ಚಿಕಿತ್ಸೆಯೆಂದರೆ ಯಾವ ಪಂಡಿತರನ್ನೂ ಅಲಕ್ಷ್ಯಮಾಡುತ್ತಿರಲಿಲ್ಲ. ತೆಂಕಳ್ಳಿ ಪಂಡಿತಪ್ಪನಿಗೂ ಎಂಟಾಣೆ, ಎಲೆ ಅಡಿಕೆಗಳನ್ನು ಕೊಟ್ಟು 'ನನ್ನ ಹೆಂಡತಿಗೆ ವಾಸೆಮಾಡಿಕೊಡಿ' ಎಂದು ಕೇಳಿಕೊಂಡನು. ತಾಯಕ್ಕನ ದೇಹಸ್ಥಿತಿಯನ್ನುನೋಡಿಕೊಂಡ ಪಂಡಿತಪ್ಪ 'ಶಂಖಭಸ್ಮದಿಂದ ಈ ರೋಗದ ಹುಟ್ಟಡಗಿಸಿಬಿಡ್ತೀನಿ! ಎಂದು ತೊಡೆ ತಟ್ಟಿದನು. ಅದಕ್ಕೆ ಹೊಳೆಯ ಮರಳಿಗೆ ಹೋಗಿ ಒಂದು 'ಮಕ್ಕರಿ' ಶಂಖಗಳನ್ನು ಆರಿಸಿ ತಂದು ನಾಲ್ಕುದಿನ ನಾಲ್ಕುಪುಟಗಳನ್ನು ಕೊಟ್ಟು ಭಸ್ಮ ಮಾಡಬೇಕೆಂದೂ, ಇದಕ್ಕೆ ಏನಿಲ್ಲವೆಂದರೂ ಹದಿನೈದು ರೂಪಾಯಿಗಳ ವೆಚ್ಚವಾಗುವುದೆಂದೂ ಹೇಳಿದರು. ಖಂಡಿತ ವಾಸಿಮಾಡುತ್ತೇನೆಂದು ಪ್ರಮಾಣಮಾಡಿಬಿಟೆ ಪಂಡಿತಪ್ಪನ ಮಾತಿಗೆ ಸಿದ್ದಪ್ಪನು ಒಪ್ಪಿಕೊಳ್ಳ ಬೇಕಾಯಿತು. ಪಂಡಿತಪ್ಪ ಸಂತೋಷದಿಂದ ಮಲ್ಲೇಶನನ್ನು ಹೊಗಳಿ ಹೊರಟುಹೋದರು.

ಮಲ್ಲೇಶ ಬಲುಚುರುಕಾದ ಹುಡುಗ. ಮಾತಿನಮಲ್ಲ. ಸಣ್ಣ ಮೂಳೆಯ ಹುಡುಗರೇ ಹಾಗೆ. ಬಲುಸುಟಿ. 'ಇಸ್ಕೂಲು' ಅವನಿಗೆ ಬೇಜಾರು ತರುವವಿಷಯವಲ್ಲದಿದ್ದರೂ, ವಿದ್ಯಾಭ್ಯಾಸದ ಮೇಲೆ ಅವನಿಗೆ

ಅತಿಯಾಸೆಯಿರಲಿಲ್ಲ. ನಾಲ್ಕಾರು ದಿನಗಳು ಶಾಲೆಗೆ ತಪ್ಪಿಸಿಕೊಂಡಿದ್ದರೂ ಮರುದಿನವೇ ಹಿಂದಿನ ಪಾಠಗಳೆಲ್ಲವನ್ನೂ ನೋಡಿಕೊಂಡು ಬಿಡುತ್ತಿದ್ದನು. ಬೇಡದೇ ಹೋದರಂತೂ ತಿಂಗಳುಗಟ್ಟಲೆ ಪುಸ್ತಕವನ್ನೇ ಮುಟ್ಟದೇ ಹೊಲ ಗದ್ದೆ 'ಗೋಮಾಳ'ಗಳಲ್ಲಿ ಕಾಲಕಳೆದುಬಿಡುತ್ತಿದ್ದ. ಎಂಟು ವರ್ಷದ ಮಲ್ಲೇಶ ಹದಿನಾರುವರ್ಷದವನ ಮಾತನಾಡುತ್ತಿದ್ದ. ಆ ಬುದ್ಧಿಯೆಲ್ಲ ತನ್ನಿಂದಲೇ ಅವನಿಗೆ ಹೋಗಿದೆಯೆಂದು ತಾಯಕ್ಕನ ನೆಚ್ಚಿಗೆ. ಏಕೆಂದರೆ ಮಲ್ಲೇಶನ ಮುಖ ಆಕೆಯನ್ನೇ ಹೋಲುತ್ತಿತ್ತು.

ಇಷ್ಟಾದರೂ ಮಲ್ಲೇಶನಿಗೆ ಅಪ್ಪನನ್ನು ಕಂಡರೆ ಭಯವೆ. ಅವನ ಅಪ್ಪನಿಗೂ ಅಷ್ಟೆ.. ಮಗನನ್ನು ಕಂಡರೆ ಹೆದರಿಯೇ ನಡೆಯಬೇಕಾಗಿತ್ತು ಸಿದ್ದಪ್ಪ. ಮಗನಿಗೆ ಎಂದರೆ ಮಗನ ಬಾಯಿಗೆ. ರಾತ್ರಿ ಊಟಕ್ಕೆ ಕುಳಿತಾಗ ಅಕ್ಕ ತಮ್ಮಂದಿರಿಗೆ ಒಂದು ವಾಗ್ವಾದ ನಡೆಯಿತು. ವಾಗ್ವಾದದಲ್ಲಿ ಸೋತು ಅತ್ತವಳು ಪುಟ್ಟತಾಯಿಯಾದರೂ, ಆ ಸೋಲನ್ನು ಸಂಪೂರ್ಣವಾಗಿ ಅನುಭವಿಸಿದವನು ಸಿದ್ದಪ್ಪ. ಮಲ್ಲೇಶ ಹೊಟ್ಟೆ ಉರಿಯುವ ಮಾತುಗಳನ್ನು ಆಡಿ, ಹೆದರಿಸಿ ಗೆದ್ದಿದ್ದನು.

ಅಕ್ಕ ತಮ್ಮ ಇಬ್ಬರೂ ಒಂದೇ ಬಟ್ಟಲಲ್ಲಿ ಊಟಕ್ಕೆ ಕುಳಿತಿದ್ದದ್ದು.

"ಏನೇ ಒಂದು ಮುದ್ದೇನೂ ಒಂದು ಚಣೊತ್ತಿಗೆ ಮುಗೀಸ ಬುಟ್ಯಲ್ಲೆ. ನಾನುಂಡದ್ದು ನಾಕು, ಗುಳಕೊ ಐದೋ!"

"ಇನ್ನೊಸಿ ಇಕ್ಕಸ್ಕೋ ಮಲ್ಲು!"

"ಊ. ನಿನಗೇನು ಹೇಳು? ಜೋಳಾ ಈಸತಿ ನಾಕೇ ಪಲ್ಲ ಆಗಿರದು! ಅದೇನು ಹೊಟ್ಟೆಯಮ್ಮಿ ನಿಮ್ಮ ಹೆಂಕಳ್ದು"

"ನೀನೇ ಬ್ಯಾರೇ ಹರಿವಾಣ ಮಡೀಕಂಡು ಕೂತ್ಗೊ ಇನ್ಮೇಲೆ. ಔದು. ನಾನು ಕಾಡುತಿರಗೋಳು. ಒಸಿಜಾಸ್ತಿ ಉಣ್ತೇನಿ."

"ಉಂಡ್ಕೋ ಈ ವರಸ ಉಂಡ್ಕೊ ಹೊಟ್ಟೆ ಬಾಕಿ, ಮುಂದ್ಲೊರಸಾನೇ ಲಗ್ನಮಾಡಿ ಆಚೇಗೆ ಕಳಿಸ್ತೇವಿ, ನಿನ್ನ."

"ನೋಡಪ್ಪಜ್ಜಿ ಮಲ್ಲೂನ!"

" ಕಡಿಮೆ ಉಣ್ಣು ಮತ್ತೆ"

" ಅಂಗೇ ಆಗ್ಲಿ ಸರಿಯ ?"

ಪುಟ್ಟತಾಯಿ ಮಜ್ಜಿಗೆಗೆ 'ಇಕ್ಕಿಸಿ' ಕೊಳ್ಳದೇ, ಕಣ್ಣು ತೇವಮಾಡಿ ಕೊಂಡು ಎದ್ದೇ ಬಿಟ್ಟಳು. ಪುನಃ ಊಟಕ್ಕೆ ಕುಳಿತುಕೊಳ್ಳಲು ಸಿದ್ದಪ್ಪ ನಿಗೂ ಜಗ್ಗಲಿಲ್ಲ. ಆಗಲೂ ಒಂದು ಬಾರಿ ತಾಯಕ್ಕನಿಂದ ಅವಳಿಗೆ ಬೈಗುಳ ಬಿದ್ದವು. ಸಿದ್ದಪ್ಪ ಮಲ್ಲೇಶನನ್ನು ಬೈದನು.

ಈ ಮನೆಯಲ್ಲಿ ಹೀಗೆಯೇ ನಡೆಯುತ್ತಿತ್ತು. ಒಂದೊಂದೂ ಸನ್ನಿ ವೇಶಗಳು ನಡೆದಂತೆ, ತಂದೆಗೆ ಮಗಳ ಮೇಲೂ ತಾಯಿಗೆ ಮಗನ ಮೇಲೂ ಅಭಿಮಾನ ಹೆಚ್ಚುತ್ತಿತ್ತು. ಇದರ ಮೇಲೆ ಮಲ್ಲೇಶನು ಕರೆತಂದ ತೆಂಕಳ್ಳಿ ಪಂಡಿತಪ್ಪನ ಕೈಯಿನ, ' ಶಂಖ ಭಸ್ಮ' ಸುಮಾರಾಗಿ ಫಲಕಾರಿಯಾಗಿತು ಸದಾಮಲಗಿರುತ್ತಿದ್ದ ತಾಯಕ್ಕ ಒಂದೊಂದು ಗಳಿಗೆ ಗೋಡೆಯೊರಗಿ ಕುಳಿತು ಕೊಂಡಿರುತ್ತಿದ್ದಳು. ಅದು ಕೆಲವು ದಿವಸಗಳು ನಡೆದಮೇಲೆ ಕುಳಿತ ಕಡೆಯೇ ಕಾಳು ಸೋಸುವುದು, ಬಟ್ಟೆಯ ಹರಕುಗಳನ್ನು ಹೊಲೆಯುವುದು. ಕಾಯಿ ಸೊಪ್ಪು ಕತ್ತರಿಸಿಕೊಡುವುದು ಮುಂತಾದ ಚಿಕ್ಕಪುಟ್ಟ ಕೆಲಸ ಗಳನ್ನು ಮಾಡುತ್ತಿದ್ದಳು. ಸೂರಿನಿಂದ ಬಿದ್ದ ಚೇಳನ್ನು ಚಚ್ಚಿ ಹಾಕುವ ಸಂಭ್ರಮದಲ್ಲಿದ್ದಾಗ ಒಂದು ದಿನ ಅವಳು ಎದ್ದು ನಿಂತಳು. ಮನೆಯ ಹೊರಗೆ ಬೀದಿಯಲ್ಲಿ ಬಿಸಿಲಿಗೆ ಹರಡಿದ್ದ ಹುಚ್ಚೆಳ್ಳಿಗೆ ಬೀದಿಯ ದನವು ಬಾಯಿ ಹಾಕಲಿರುವುದನ್ನು ಕಂಡು ಮತ್ತೊಮ್ಮೆ ಅವಳೇ ಎದ್ದು ಓಡಿ ಹೋಗಿ ಅಟ್ಟಿ ಬಂದಳು. ಹೀಗೆ ಮನೆಯವರಿಗೆ ಅತಿ ವ್ಯತ್ಯಾಸ ಕಾಣ ದಂತೆ ದಿನ ಕ್ರಮೇಣ ತಾಯಕ್ಕ ಗುಣ ಹೊಂದಿದಳು. ಗಂಡನನ್ನು ಅಡಿಗೆಯ ಮನೆಯಿಂದ ಬಿಡುಗಡೆ ಮಾಡುವ ದಿನವೂ ಬಂದಿತು. ಆದರೆ ಹೀಗಾಗಿ ಅವಳು ಅಡಿಗೆಯನ್ನು ವಹಿಸಿಕೊಳ್ಳಬೇಕಾದುದು ದುರ್ದೈವವೇ.

ಎರಡು ಎರಡೂವರೆ ತಿಂಗಳಿನಿಂದ ಹೆಂಡಿರುಮಕ್ಕಳ ಶುಶ್ರೂಷೆಯಲ್ಲಿ ತೊಡಗಿದ್ದ ಸಿದ್ದಪ್ಪನಿಗೆ, ಹೆಂಡತಿಯ ಮುಖವು ಕ್ರಮೇಣ ಗೆಲುವಾಗು ತ್ತಿರುವುದನ್ನು ಗಮನಿಸುತ್ತಿದ್ದ ಹಾಗೆಯೇ ಅವನಿಗೆ ತನ್ನ ಶ್ರಮ ಕಾಣಿಸಿ

ಕೊಳ್ಳತೊಡಗಿತು. ತಾಯಕ್ಕ ಅಡಿಗೆಗೆ ತಯಾರಾಗುವುದಕ್ಕೂ ಸಿದ್ದಪ್ಪನಿಗೆ ಜ್ವರ ಬರುವುದಕ್ಕೂ ಸರಿಹೋಯಿತು. ಪುನಃ ಗಂಡುಸಾಗಿ ಆತ ಒಂದು ಬಾರಿ ತನ್ನ ಹೊಲ, ತೋಟಗಳನ್ನು ಸುತ್ತಿಕೊಂಡು ಬರಲಾಗಲೇ ಇಲ್ಲ. ಹೆಂಡತಿ ಹಿಡಿದಿದ್ದ ಜಾಗದಲ್ಲೇ ತಾನೂ ಹಾಸಿಗೆ ಹಿಡಿದನು. ಜ್ವರ ಕೆಮ್ಮಲು, ಗಂಟಲುನೋವು. ಗಂಜಿ ಕುಡಿದರೂ ಗಂಟಲಲ್ಲಿ ಪ್ರಾಣಹೋಗು ವಷ್ಟು ನೋವಾಗತೊಡಗಿತ್ತು.

ತಾಯಕ್ಕ ದಿವಸಕ್ಕೆ ಎರಡು ಬಾರಿ ಬೆಲ್ಲ, ಸುಣ್ಣ, ತುಂಬೆಸೊಪ್ಪು ಸೇರಿಸಿ, ಅರೆದು ಗಂಡನ ಗಂಟಲಿಗೆ ' ಜಬ್ಬರ ' ಹಾಕುತ್ತಿದ್ದಳು. ಮಲ್ಲೇಶ ಪುನಃ ಒಂದು ದಿನ ತೆಂಕಳ್ಳಿಯ ಪಂಡಿತಪ್ಪನನ್ನು ಕರೆದು ತಂದೇ ತಂದನು. ಪಂಡಿತಪ್ಪನಿಗೆ ಖಾಯಿಲೆ ಅರ್ಥವಾಗಲಿಲ್ಲ. ತಾಯಕ್ಕನ ಔಷಧಿಗಿಂತ ಉತ್ತಮವಾದ , ಔಷಧಿ ಅವನ ನೆನಪಿನಲ್ಲಿರಲಿಲ್ಲ. "ವಾಲೇಗರಿ ಗ್ರಂಥ ನೋಡಿ ಹೇಳ್ತೀನಿ ; ಇದಕ್ಕೆ ಡಾಕ್ಟರುಗಳ ಹತ್ತರ ಹೋದರೆ ಕತ್ತೀಕತ್ತರಿಸಿ ಹಾಕುಬುಡ್ತಾರೆ." ಎಂದು ಹೇಳಿ ಪಂಡಿತಪ್ಪ ತನ್ನ ಊರಿಗೆ ಹೊರಟು ಹೋದನು.

ಸಿದ್ದಪ್ಪನ ಸಂಸಾರದ ಸಂದರ್ಭದಲ್ಲಿ ಗಂಡಸು ಹಾಸಿಗೆ ಹಿಡಿದರೆ, ಹೆಂಗಸು ಹಾಸಿಗೆ ಹಿಡಿದಷ್ಟು ತೊಂದರೆಯಾಗುವುದಿಲ್ಲ. ಹಳ್ಳಿಯ ಹೆಂಗಸರಿಗೆ ಮನೆಯ ಹೊರಗಿನ ವ್ಯವಹಾರಗಳೂ ಅಲ್ಪಸ್ವಲ್ಪ ಗೊತ್ತಿರುವುದರಿಂದ ಅನುಕೂಲ. ತಾಯಕ್ಕ ಅಡಿಗೆ, ಮಕ್ಕಳು, ದನ, ವ್ಯವಸಾಯ, ರೋಗಿಯ ಉಪಚಾರ ಎಲ್ಲವನ್ನೂ ನೋಡಿಕೊಳ್ಳಬಲ್ಲವಳಾಗಿದ್ದಳು. ಸಿದ್ದಪ್ಪನ ಮನೆವಾರ್ತೆಯಲ್ಲಿ ಹೀಗಿರಲಿಲ್ಲ. ಹೆಣ್ಣುಗೆಲಸಗಳಲ್ಲಿ ಅವನು ಎಷ್ಟೋ ನಿಪುಣನಾಗಿದ್ದರೂ ಅವ್ಯವಸ್ಥೆ ಇದ್ದೇ ಇರುತ್ತಿತು. ಅಡಿಗೆಮನೆಯ ಅವಾಂತರದಲ್ಲಿ ಹೊಲತೋಟಗಳ ವಿಷಯದಲ್ಲೂ ಅನಾಸಕ್ತಿ ಇರುತ್ತಿತ್ತು. ಈ ವ್ಯತ್ಯಾಸ ಅವನಿಗೆ ಎರಡೇ ದಿನಗಳಲ್ಲಿ ಗೊತ್ತಾಗಿ ಹೋಯಿತು. ಅದನ್ನು ಹೆಂಡತಿಗೆ ಹೇಳಿಯೂ ಹೇಳಿದನು.

" ನಾನು ತಿಳ್ಕಂಡಿದ್ದದು ತಪ್ಪು ಕಣೆ. ಹೆಮ್ಮಕಳಂತೆ ಮನೇ ನಡೀ

ಸಕ್ಕೆ ಗಂಡಸನ ಕೈಲಾಗಕ್ಕಿಲ್ಲ."

"ಏನು ಹೆಮುಕಳೋ! ಏನು ಬಾಳೋ........ಎಷ್ಟು ದುಡಿದರೇನು ಬಂತು. ಗಂಡುಜನ್ಮವೇ ಜನ್ಮ"

"ಇಲ್ಲ ಕಣೇ. ನೀನು ಗಂಡಸಲ್ದೇ ಹೋದ್ರೂ ನಡೀಸ್ಕಂಡೋಯ್ತೀಯೆ"

"ಅಂಗಂದ್ರೆ ಏನು ನೀವು ಮಾತಾಡ್ತಾಇರದು ?"

ಊಹು ಇನ್ನೇನೂ ತಿಳ್ಕಬೇಡ. ಈಗ ನೋಡು, ನಾನು ಹುಸಾರು ತಪ್ಪಿ ಮಲಗಿದ್ರೂ—ಪುಂಡನ ಹೊಲದ ಕಳೇನೂ ಕೀಳಸದೆ. ಮನೇ ಪಾತ್ರೆ ಪದಾರ್ಥಗಳೂ ಬೆಳ್ಳಗವೆ. ನನ್ನ ಯಜಮಾನತನಲ್ಲಿ ಎರಡೂ ಇಲ್ಲ."

"ಆಗೋ ಕೆಲಸಗಳು ಯಾರಿದ್ರೂ ಅಗೇ ಆಯ್ತವೆ. ಅವೆಲ್ಲ ನಿಮ್ಮ ಎಸರಲ್ಲೇತಾನೇ ಆಗದು"

"ಕೆಲಸ ಮಾಡ್ಸೋರು ಮುಕ್ಯ ಕಣೇ. ಎಲ್ಲಾ ಒಬ್ನ ಎಸರಲ್ಲೇ ಆಗದು. ಶಿವನ ಎಸರಲ್ಲಿ"

"ಹೋಗ್ಲೀ ಬುಡಕ್ಕಿಲ್ವಾ ? ಗಂಟಲು ನೋಯ್ತದೇ ಅಂತೀರಿ ಇಷ್ಟು ಮಾತಾಡ್ತೀರಿ. ಬ್ಯಾಡಿ ಸುಮ್ಮನೆ ಮಲೀಕಳಿ"

ತಾಯಕ್ಕನಿಗೆ ಗಂಡನ ಆಲೋಚನೆಯಲ್ಲಿ ಅಮಂಗಳದ ಛಾಯೆಯಿದ್ದ ಅನುಭವವಾಯಿತು. 'ಮಾತಾಡಬೇಡಿ' ಎಂದವಳು ಕಟ್ಟಪ್ಪಣೆ ಮಾಡಿದ ಮಾರನೆಯ ದಿನದಿಂದಲೇ ಸಿದ್ದಪ್ಪನಿಗೆ ನಿಜಕ್ಕೂ ಮಾತನಾಡಲು ಆಗಲೇ ಇಲ್ಲ. ನೋವಿಗಾಗಿ ನರಳಿದರೂ ನೋವಾಗುತ್ತಿತ್ತು

ಎಂಟು ಹತ್ತು ದಿನಗಳು ಕಳೆದೇಹೋದವು. ಪಂಡಿತಪ್ಪನ 'ವಾಲೇ ಗರಿಗ್ರಂಥ' ಏನೂ ಸಹಾಯಮಾಡುವಂತೆ ತೋರಲಿಲ್ಲ. ಸಿದ್ದಪ್ಪನ ಗಂಟಲು ಎರಡು ಕಡೆಯಿಂದ ಮುಚ್ಚಿಕೊಂಡು ಬರುತ್ತಿತ್ತು. ಸ್ಫಟಿಕದ ದ್ರಾವಣವನ್ನು ಮುಕ್ಕಳಿಸುವುದರಿಂದ ಸ್ವಲ್ಪ ಹಾಲು ಕುಡಿಯಲು ಅವಕಾಶವಾಗುತ್ತಿತ್ತು. ಹಾಲು ಕುಡಿದಾದಮೇಲೆ ಒಂದು ಐದು ನಿಮಿಷ ನಾಲ್ಕಾರು ಮಾತುಗಳನ್ನಾಡುವಷ್ಟು ಆಸ್ಪದವಿರುತ್ತಿತ್ತು.

ಅಂತಹ ಸಮಯದ ಒಂದು ದಿನ ಮಧ್ಯಾಹ್ನದಲ್ಲಿ ತಾಯಕ್ಕ ಜೋಳ ಬೀಸಲು ಕಲ್ಲಿನ ಬಳಿಗೆ ಬಂದಳು. ನೆರೆಹೊರೆಯಲ್ಲೂ ಎಲ್ಲೋ ಒಂದು ಬೀಸುವ ಕಲ್ಲಿನ ಶಬ್ದವು ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ಬೀಸುವಕಲ್ಲಿನ ಗೂಟಕ್ಕೆ ಕಟ್ಟಿದ್ದ ಎಮ್ಮೆಕರುವನ್ನು ಬಿಚ್ಚಿ ದೂರದ ಕಂಬಕ್ಕೆ ಕಟ್ಟಿದಳು. ಕಸವನ್ನು ಗುಡಿಸಿ, ಮೊರವನ್ನು ಮಗ್ಗುಲಲ್ಲಿಟ್ಟು ಕುಳಿತುಕೊಂಡಳು. ಬಟ್ಟಿಯಲ್ಲಿ ಕಲ್ಲನ್ನು ಗುಡಿಸಲು ಮೇಲಿನ ಕಲ್ಲನ್ನು ಕೆಳಗಿಳಿಸಿದಾಗ ಶಬ್ದವಾಯಿತು. ಅದರ ಜೊತೆಗೆ ಎಮ್ಮೆಯಕರುವೂ ಕೂಗಿತು. ಸಿದ್ದಪ್ಪನು ಮೆಲ್ಲಗೆ ಮುಖವನ್ನು ತಾಯಕ್ಕನ ಕಡೆಗೆ ತಿರುಗಿಸಿದನು. ಹಿಂದಿನ ಸನ್ನಿವೇಶವೇ ! ವ್ಯಕ್ತಿಗಳ ಬದಲಾವಣೆಮಾತ್ರ. ಇಂದು ಬೀಸಲು ಬಂದಿರುವ ತಾಯಕ್ಕ ಅಂದು ಮಲಗಿದ್ದಳು. ಇಂದು ಮಲಗಿದ್ದ ಸಿದ್ದಪ್ಪನೇ ಅಂದು ಬೀಸಲು ಬಂದಿದ್ದದ್ದು. ಅದೇ ಹೊತ್ತು. ಆದಿನವೂ ಬಿಸಲು 'ಕಲಗಚ್ಚು'ನ್ನು ಮೀರಿ ಮುಂದೆ ಬಿದ್ದಿತ್ತು. ಇದು ತಾಯಕ್ಕನ ಗಮನಕ್ಕೂ ಬಂದಿತೇನೋ! ಅವಳು ಮೆಲ್ಲನೆ ಗಂಡನ ಕಡೆಗೆ ತಿರುಗಿನೋಡಿದಳು. ಸಿದ್ದಪ್ಪನೂ ಅವಳನ್ನೇ ನೋಡುತ್ತಿದ್ದುದರಿಂದ ಇಬ್ಬರಿಗೂ ನಗುಬಂತು. ತಾಯಕ್ಕ ಗಂಡ ಹಾಡಿದ್ದ ಕಲ್ಲಿನ ಸ್ತೋತ್ರವನ್ನೇ ಹಾಡಿ, ಮುಂದಕ್ಕೆ ಗಂಡನು ಹೇಳಿದ್ದ ಹೆಣ್ಣುಮಕ್ಕಳ ಮೇಲಿನ ಹಾಡನ್ನೇ ಹಾಡಿದಳು. ಅದು ಮುಗಿದ ತಕ್ಷಣ ಸಿದ್ದಪ್ಪ ಹೆಂಡತಿಯನ್ನು ಸಂಜ್ಞೆಮಾಡಿ ಹತ್ತಿರಕ್ಕೆ ಕರೆದನು. ಸಿದ್ದಪ್ಪ ಆಗತಾನೇ ಹಾಲುಕುಡಿದಿದ್ದುದರಿಂದ ಏನೋ ಒಂದೆರಡು ಮಾತುಗಳನ್ನಾಡಬೇಕೆಂದು ಗಂಡ ಕರೆಯುತ್ತಿದ್ದಾನೆ ಎಂಬುದು ತಾಯಕ್ಕನಿಗೆ ತಿಳಿದು ಬೀಸುವುದನ್ನು ಬಿಟ್ಟು ಗಂಡನ ಹತ್ತಿರಕ್ಕೆ ಬಂದು ಕುಳಿತುಕೊಂಡಳು. ಸಿದ್ದಪ್ಪ ಗಂಟಲು ಸರಿಮಾಡಿಕೊಂಡು ಹೇಳಿದನು.

" ಹೆಣ್ಣು ಹುಟ್ಟಿತು ಎಂದೂ....ಪದ ಅದ್ಯಲ್ಲಾ ! ಆ ಪದದ ಅರ್ತ ಗೊತ್ತುತಾನೆ !"

" ಊ, ಗೊತ್ತು. ಯಾಕೆ ?"

" ನಾನು ಯಾಕೆ ಆವತ್ತು ಆ ಪದ ಏಳ್ದಿ ಗೊತ್ತಾ ? ನಿನಗೆ ನಮ್ಮ ಮಲ್ಲೇಸನ ಮೇಲಿರೋ ಅಷ್ಟು ಪೀರಿತಿ ಪುಟ್ಟತಾಯಿಮೇಲಿಲ್ಲ—"

" ಹ್ಞೂ ನಿಮಗ್ಗೊತ್ತು. ಯಾಕೆ? ಅವಳು ನಾಹೆತ್ತ ಮಗಳಲ್ಲ ವೇನೋ ?"

" ಆದರೂ ನಿನಗೆ ಮಲ್ಲೇಶನ ಕಂಡರೇ ಹುಚ್ಚು. ಅದು ಹುಚ್ಚಿ ! ಈಯಿಸ್ಯ ನಿನಗೆ ಸರಿಯಾಗಿ ಏಳಬೇಕೂ ಅಂತಿದ್ದೆ. ಈವತ್ತು ಹೇಳಕ್ಕೆ ಸರಿಯಾದ 'ಸವಳು' ಸಿಕ್ಕಿದೆ. ಕೇಳು. ಯಾವತ್ತಿದ್ದರೂ ಗಂಡು ಮಕ್ಕಳು ಅವ್ವೆಅಪ್ಪಂದರ ಕಷ್ಟಕ್ಕಾಗೋರಲ್ಲ. ಹೆಣ್ಣು ಮಕ್ಕಳೇ ಆಗೋರು. ಈ ಮಾತು ಮರೀಬೇಡ. ನಿನಗೆ ಪುಟ್ಟತಾಯಿ ಕಂಡರೆ ಅಷ್ಟು ಪಿರೀತಿ ಇಲ್ಲ. ಇನ್ಮೇಲೆ ಹಂಗೆ ಮಾಡಬೇಡ. ಇಬ್ಬರು ಮಕ್ಕಳನ್ನೂ ಒಂದೇ ಸಮಕ್ಕೆ ಕಂಡ್ಕೊ"

" ಸರಿ, ಇದ್ಕೇನಾ ನೀವು ಸನ್ನೆಮಾಡಿ ಕರದದ್ದು ? ಗಂಟಲುನೋವು ಹೆಚ್ತಾ ಹೆಚ್ತಾ ನಿಮಗೆ ಮಾತಾಡೋ ಚಪಲಾನೂ ಹೆಚ್ತಾಇದೆ."

" ಹಂಗಲ್ಲ ಕಣಮ್ಮಿ. ನನ್ನ ಮಾತು ಕೇಳು "

" ನನಗೆ ಯಾರೂ ಆಗದುಬೇಡ. ಇರೋವರ್ಗೆ ದುಡೀತೀನಿ, ಉಣ್ತೀನಿ. ಮಗನೂ ಬೇಡ ಮಗಳೂ ಬೇಡ. ಕೊನೆಗೆ ನಿಮ್ಮ ಹಂಗೂ ನನಗೆ ಬೇಡ."

" ಅಂತಾ ಗಟ್ಟಿಗಿತ್ತಿಯೇ ನೀನು ಸರಿ! ನಾನಿರೋವರ್ಗೆ ಹಂಗಂತೀಯೆ !—ಆಮೇಲೆ "

" ಥೂ, ಸುರುವಾಯ್ತು ಕೆಟ್ಟಮಾತು. "

" ನಾಯೇನುಮಾಡ್ಲೀ ಏಳು ? ಒಂದೊಂದ್ಸಲ ಗಂಟಲು ಮುಚ್ಕೇ ಹೋಗಿ ಉಸಿರಾಡಕ್ಕೇ ಆಗದೇ ಹೋಯ್ತದೆ. ಆಗ ನಾನು ಬದಕಕ್ಕಿಲ್ಲ ಅನ್ನಿಸ್ಬುಡ್ತದೆ. ಆಮೇಲೆ ನಿನ್ನ ಗತಿಯೇನು ಅಂತ ಯೋಚನೆ ಬತ್ತದೆ. ನೀನು ಧೈರ್ಯಗಾತಿ ಅನ್ನೋ ಸಮಾಧಾನಾನೂ ಬತ್ತದೆ. ಮಲ್ಲೇಶನ ಮಾತುಬಿಡು ನಿನ್ನ ಪಿರೀತಿ ಮಗ. ಪುಟ್ಟತಾಯಿ ಪಾಪ........"

" ಓದೌದು. ಅವಳಿಗೆ ಬಾಳ ಹಿಂಸೆ. ನೀವು ಮಾತಾಡೋದು ನಿಲ್ಲಿಸ್ತೀರೋ ಇಲ್ಲಾ ನಾನು ಎದ್ಹೋಗ್ಲೋ ?"

ನಿಲ್ಲಿಸೂ ಬುಡ್ತೀನಿ. ಶೀನೂ ಎದ್ದೋಗೂವಂತೆ. ಆದರೆ ಇದೇ ಕೊನೆಮಾತು. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳೇ ಶ್ರೇಷ್ಠ. ನೀನು ಪುಟ್ಟತಾಯೀಲೂ ಒಸಿ ಆಸೆ ಮಡಗು.”

ಅಲ್ಲಿಗೆ ಸಿದ್ದಪ್ಪ ಮಾತು ನಿಲ್ಲಿಸಿದನು. ತಾಯಕ್ಕ ಬೀಸುವುದಕ್ಕೆ ಎದ್ದುಹೋದಳು. ಕಲ್ಲು ತಿರುಗತೊಡಗಿತು. ಅವಳ ಬಾಯಿ ಹಾಡಲಿಲ್ಲ. ಜೋಳ ಪುಡಿಪುಡಿಯಾಗಿ ಕಲ್ಲಿನ ಸುತ್ತಲೂ ಉದುರುತ್ತ ಹೆಚ್ಚುತ್ತಿತ್ತು. ತಾಯಕ್ಕನ ತಲೆಯಲ್ಲಿ ಒಂದೇ ಯೋಚನೆ ಭೂತಾಕಾರವಾಗಿ ಬೆಳೆದು ನಿಂತಿತು. ಕಲ್ಲು ತಿರುಗುತ್ತಲೇ ಇತ್ತು. ಹೊತ್ತೂ ತಿರುಗಿತು ದಿವಸಕಳೆಯಿತು.

ಆದರೆ, ಹೆಚ್ಚು ದಿವಸ ಕಳೆಯಲಿಲ್ಲ. ಸಿದ್ದಪ್ಪನ ಖಾಯಿಲೆ ಪಂಡಿತಪ್ಪನ ಹತೋಟಿಗೆ ಸಿಕ್ಕಲಿಲ್ಲ. ಅದು ಏನೂ ಎನ್ನುವುದೇ ಯಾರಿಗೂ ಗೊತ್ತಾಗಲಿಲ್ಲ. ತಾಯಕ್ಕ ಕೆಟ್ಟಳು. ಸಿದ್ದಪ್ಪ ಹೋಗಿಯೇಬಿಟ್ಟನು.



೨

ರೇಶ್ಮೆಗೂಡನ್ನು ತಾನೇ ಕೊಳ್ಳೆಗಾಲದವರೆಗೂ ಹೋಗಿ ಮಾರಿಬರ ಬೇಕಾದಾಗ ಸಿದ್ದಪ್ಪ ಹತ್ತು ದಿನಗಳವರೆಗೂ ಊರನ್ನು ಬಿಟ್ಟಿರುತ್ತಿದ್ದು ದುಂಟು. ಆಗ ಮನೆ ಹೇಗಿರುತ್ತಿತ್ತೊ ಈಗಲೂ ಹಾಗೆಯೇ ಇದೆ. ಪುಟ್ಟ ತಾಯಿ ಮಲ್ಲೇಶರ ಮನಸ್ಸಿನಲ್ಲಂತೂ ತಂದೆ ಊರಲ್ಲಿಲ್ಲವೆಂಬ ಭಾವನೆಯೆ. ತಾಯಕ್ಕನಿಗೂ ಹಾಗೆಯೇ ಭಾಸವಾಗುತ್ತಿತ್ತು. ಅವನು ಹೊದೆಯುತ್ತಿದ್ದ ಕಂಬಳಿಯನ್ನು ನೋಡಿದಾಗ ಮಾತ್ರ ದುರ್ಭರ ಸತ್ಯವು ತಾಯಕ್ಕನನ್ನು ಅಳಿಸುತ್ತಿತ್ತು.

ಅವಳು, ಗಂಡನ ಎಲ್ಲಾ ಬಟ್ಟೆಗಳನ್ನೂ, ದಾನಮಾಡಿ ಕಣ್ಮರೆಮಾಡಿ ದ್ದಳು. ಕಂಬಳಿಯನ್ನು ದಾನಮಾಡುವಷ್ಟು ಯೋಗ್ಯತೆ ಅವಳಿಗಿರಲಿಲ್ಲ. ಬಲುಗಟ್ಟಿಯಾದ, ನಾಜೂಕಾದ, ವಿಶಾಲವಾದ ಬಿಳಿಯ ಕಂಬಳಿಯದು. ಅದರಿಂದಾಗಿ ಚಳಿಗಾಲದ ಕಷ್ಟವೇ ಆ ಸಂಸಾರಕ್ಕೆ ಗೊತ್ತಿರಲಿಲ್ಲ. ಆ ಮನೆ ಯಿಂದ ಅವರಿಗೆ ಎಷ್ಟು ರಕ್ಷಣೆದೊರೆಕಿತ್ತೋ ಆ ಕಂಬಳಿಯಿಂದಲೂ ಅಷ್ಟೇ ರಕ್ಷಣೆಯಿರುತ್ತಿತ್ತು. ರಾತ್ರಿಯಹೊತ್ತು ಅವರು ನಾಲ್ಕು ಜನರಿಗೂ ಅದು ಹೊದಿಕೆಯಾಗುತ್ತಿದ್ದರೂ ಅದು ಸಿದ್ದಪ್ಪನದು. ಏಕೆಂದರೆ ಬೆಳಿಗ್ಗೆ ದನ ಬಿಡುವವರೆಗೂ, ಸಂಜೆ, ಹೊತ್ತು ಬಿದ್ದಮೇಲೆ ಊಟದಹೊತ್ತಿನವರೆಗೂ ಉಪಯೋಗಿಸುತ್ತಿದ್ದವನು ಸಿದ್ದಪ್ಪನೇ.

ಆದುದರಿಂದಲೇ ತಾಯಕ್ಕನಿಗೆ ಆ ಕಂಬಳಿಯನ್ನು ಕಂಡಾಗಲೆಲ್ಲಾ ಗಂಡನ ಜ್ಞಾಪಕ ಬರುತ್ತಿತ್ತು. ರಾತ್ರಿ ಮಲಗಿದಮೇಲಂತೂ ಅವನ ನೆನಪು ಅವಳನ್ನು ಹಿಂಡಿ ಹಿಂಸಿಸುತ್ತಿತ್ತು. ಬಲಗಡೆ ಮಲ್ಲೇಶ ಎಡಗಡೆ ಪುಟ್ಟತಾಯಿ ಮಿಕ್ಕ ಪ್ರಪಂಚದಂತೆಯೇ ನಿರ್ಯೋಚನೆಯಿಂದ ನಿದ್ರಿಸು ತ್ತಿದ್ದರು. ಕಂಬಳಿಯಿಂದ ಹೊರಟ ತಾಯಕ್ಕನ ವಿಚಾರ ಸರಣಿ ಸಿದ್ದಪ್ಪ ಹೇಳಿಹೋಗಿದ್ದ ಕೊನೆಯಮಾತಿನವರೆಗೂ ಬೆಳೆಯಿತು. ಪುಟ್ಟತಾಯಿ ಯನ್ನು ಮುಟ್ಟಬೇಕೆನ್ನಿಸಿತವಳಿಗೆ. ಕಂಬಳಿಯೊಳಗೆ ಕೈಯಾಡಿಸಿದಳು. ಪುಟ್ಟತಾಯಿಯ ತಲೆಯನ್ನು ನೇವರಿಸಬೇಕೆಂದ ಅವಳ ಕೈಗೆ, ಹೇಗೋ

ಮಲಗಿದ್ದ ಮಗಳ ಕೈ ಸಿಕ್ಕಿತು. ತಾಯಕ್ಕ ಅದನ್ನೇ ಪ್ರೀತಿಯಿಂದ ತಡವಿದಳು. ಬಲು ಒರಟಾಗಿತ್ತು. ಮಗಳು ಮಾಡುತ್ತಿದ್ದ ದಿನಗೆಲಸವನ್ನೆಲ್ಲಾ ಮನಸ್ಸಿಗೆ ತಂದುಕೊಂಡಳು. ಅವಳಿಗೆ ಕನಿಕರ ಉಂಟಾಯಿತು.

ತನ್ನ ಗಂಡನ ಪ್ರೀತಿಪಾತ್ರಳಾದ ಪುಟ್ಟತಾಯಿಯನ್ನು ಇನ್ನುಮೇಲೆ ಹೆಚ್ಚು ಅಕ್ಕರೆಯಿಂದ ನೋಡಿಕೊಳ್ಳಬೇಕೆಂದು ಮನಸ್ಸು ಮಾಡಿಕೊಂಡಳು. ಸಾಮಾನ್ಯವಾಗಿ ತಾಯಿಯರಿಗೆ ಹೆಣ್ಣುಮಕ್ಕಳ ಮೇಲೆ ಮಮತೆ ಹೆಚ್ಚಾಗಿರಬೇಕಾಗಿದ್ದು ತನಗೇಕೆ ಇಷ್ಟುದಿನ ಹಾಗಿರಲಿಲ್ಲ ಎಂದು ಯೋಚಿಸಿಕೊಂಡಳು. ಅಷ್ಟರಲ್ಲಿ ಮಲ್ಲೇಶ ನಿದ್ದೆಗಣ್ಣಿನಲ್ಲಿ ತಾಯಿ ಬಳಿಗೆ ಸರಿದು ಬಂದು ತಬ್ಬಿದನು. ಅವನ ಉಸಿರು ತಾಯಕ್ಕನ ತೋಳನ್ನು ಬಿಸಿಮಾಡುತ್ತಿತ್ತು. ಅವಳಿಗೆ ಬಿಸಿಯುಸಿರಿನಿಂದ ಅವನ ಮೂಗಿನ ಜ್ಞಾಪಕ ಬಂತು ಆ ಮೂಗು ತಾಯಿಯದೇ ಎಂದು ಅವರಿವರು ಹೇಳುತ್ತಿದ್ದುದು ನೆನಪಾಯಿತು. ತನ್ನನ್ನು ಹೋಲುವ ಮಲ್ಲೇಶ ತನ್ನ ಗಂಡನ ವಂಶೋದ್ಧಾರಕ! ಅವನನ್ನು ಸಾಕಿ ದೊಡ್ಡವನನ್ನಾಗಿ ಮಾಡಿ, ಮದುವೆಮಾಡಿ ಅವನ ಮಕ್ಕಳನ್ನು ಕಣ್ಣಾರೆ ನೋಡುವುದೇ ತನಗುಳಿದ ಏಕೈಕ ಗುರಿ ಎಂಬುದು ತಾಯಕ್ಕನಿಗೆ ಮನವರಿಕೆಯಾಯಿತು. ಮಲ್ಲೇಶನೇನು ಪುಟ್ಟತಾಯಿಯೇನು? ಇಬ್ಬರೂ ತನ್ನ ಮಕ್ಕಳೇ. ಈಗ ತಾನು ಅವರಿಗೆ ತಾಯಿಮಾತ್ರವಲ್ಲ, ತಂದೆಯೂ ಆಗಬೇಕಾಗಿದೆ,

ಇಂತಹ ಸಹಸ್ರಾರು ಯೋಚನೆಗಳ ಭಾರ ಬಹಳ ಹೊತ್ತಿನಮೇಲೆ ತಾಯಕ್ಕನ ರೆಪ್ಪೆಗಳನ್ನು ಕೂಡಿಸುತ್ತಿದ್ದವು. ತುಂಬ ದಿನಗಳು ಹೀಗೆಯೇ ನಡೆಯಿತು. ಯಾವ ಒಂದು ಪ್ರಾಣಿಯ ಸಾವು ಮುಂಚೆ ಭಯಂಕರವಾಗಿ ತೋರುತ್ತಿತ್ತೋ, ಅದು ನಡೆದುಹೋದ ನಂತರ ಸಾಮಾನ್ಯವಾಗಿಹೋಯಿತು. ಸಿದ್ದಪ್ಪನ ಸಾವು ಕ್ರಮೇಣ ಆ ಮೂರು ವ್ಯಕ್ತಿಗಳ ಮೇಲಿನ ತನ್ನ ಪ್ರಭಾವವನ್ನು ಕಳೆದುಕೊಳ್ಳತೊಡಗಿತು.

ಹೊಲ ತೋಟಗಳಲ್ಲಿ ಇತರ ಕಂಬಳದ ಆಳುಗಳ ಜೊತೆಗೆ ಸಿದ್ದಪ್ಪನೂ ದುಡಿಯುತ್ತಿದ್ದನು. ಅದೊಂದು ಈಗ ಇಲ್ಲ. ಮಿಕ್ಕ ಎಲ್ಲ ಕೆಲಸ

ಗಳೂ ನಿಲ್ಲದೇ ಸಾಗಿತು. ಅವನೇ ಹೇಳಿದ್ದಂತೆ ಧೈರ್ಯಗಾತಿಯಾದ ತಾಯಕ್ಕನು 'ಆರಂಭ'ವನ್ನೂ ಸ್ವತಃ ನೋಡಿಕೊಳ್ಳತೊಡಗಿದಳು. ಅವಳ ಅಣ್ಣ ಬಸವಣ್ಣನು ಜಮೀನುಗಳನ್ನೆಲ್ಲಾ ಗುತ್ತಿಗೆಗೆ ಕೊಟ್ಟುಬಿಡೆಂದು ಬಹಳ ವಾಗಿ ಹೇಳಿದರೂ ತಾಯಕ್ಕ ಒಪ್ಪಿಕೊಳ್ಳಲಿಲ್ಲ. ಊರಿಗೆ ದೂರದಲ್ಲಿದ್ದ ಒಡೆ ಯನ ಹೊಲವನ್ನೂ ಕೊಡಲಿಲ್ಲ. ಮಳೆ ಬಿದ್ದ ತಕ್ಷಣ ಅವರಿವರ ಕೈಕಾಲು ಕಟ್ಟಿ ಎರಡು ಏರುಗಳನ್ನು ಕಟ್ಟಿಸಿಕೊಂಡು ಹೋಗಿ ಜೋಳವನ್ನು ತಾನೇ ಚೆಲ್ಲಿಬಂದಳು. ತಾನೇ ತೋಟದಲ್ಲಿದ್ದ 'ಮೆಣಸಿ' (ಕಾಯಿ) ಬೆಳೆಗೆ ನೀರು ಹಾಕಿ ಎರಡನೇ ಬೀಡಿನಲ್ಲಿ ಮೂರೂವರೆ ಕೊಳಗ ಮೆಣಸಿಹಣ್ಣನ್ನು ಬಿಡಿಸಿ ಕೊಂಡಳು. ಇವಳ ಕಷ್ಟವನ್ನು ನೋಡಲಾರದೇ ಬಸವಣ್ಣನೇ ರಾಗಿಗೆ ಬಿಟ್ಟಿದ್ದ ಊರುಮುಂದಿನ ಲಕ್ಕೀಹೊಲವನ್ನು ಊರಿಂದ ಏರುಕಟ್ಟಿಕೊಂಡು ಬಂದು ಉತ್ತುಕೊಟ್ಟು ಹೋಗಿದ್ದನು. ತೋಟದಲ್ಲಿ ಇಪ್ಪತ್ತೈದು ತೆಂಗಿನ ಕಾಯಿಗಳನ್ನು ಯಾರೋ ಕದ್ದರು. ಹಿತ್ತಿಲಿನ ರಾಗೀಹುಲ್ಲಿನ ಮೆದೆಯಲ್ಲಿ ಐದಾರು ಹೊರೆ ಹುಲ್ಲನ್ನು ಎಳೆದುಕೊಂಡರು. ಒಡೆಯನ ಹೊಲದಲ್ಲಿ ಹಾಕಿದ್ದ ಹಿಪ್ಪನೇರಳೇ ಬೆಳೆಯಲ್ಲಿ ಒಂದೆರಡು 'ಮೊಟ್ಟೆ'ಗಳಷ್ಟು ಸೊಪ್ಪನ್ನು ಯಾರೋ ಊರಿಕೊಂಡರು. ಇವೆಲ್ಲ ಜನಗಳು ಗಂಡಸತ್ತ ಹೆಂಗಸಿನ ಮೇಲೆ ಆ ವರ್ಷ ತೋರಿಸಿದ ಪೌರುಷಗಳು.

ಇಷ್ಟರಿಂದ ತಾಯಕ್ಕ ಸ್ವಲ್ಪವೂ ಹೆದರಲಿಲ್ಲ. ಜನಗಳು ಕಿರುಕುಳ ಕೊಟ್ಟಾಗ ದೇವರು ದಯಾಪರನಾಗುತ್ತಾನೆ. ದೇವರು ಶಿಕ್ಷಿಸುತ್ತಿರುವಾಗ ಜನಗಳು ಸಹಾನುಭೂತಿ ತೋರಿಸುತ್ತಾರೆ ಎನ್ನುವಂತೆ ಆಬಾರಿ ಮಳೆಗಳು ಸಕಾಲಕ್ಕೆ ಬಂದಿತು. ಮೂರು ವರ್ಷದಿಂದಲೂ ಬರುತ್ತಲೇ ಇದ್ದ ಜೋಳದ 'ಕೆಂಪು ಮಾರು'ರೋಗ ಆ ವರ್ಷ ಬರಲಿಲ್ಲ. ಲಕ್ಷಣವಾಗಿ ತಾಯಕ್ಕನಿಗೆ ಐದುಪಲ್ಲ ಜೋಳವಾಯಿತು. ಅದನ್ನು ಬೀದಿಯಲ್ಲಿದ್ದ ಮನೆಯಮುಂದಿನ 'ಗುಳಿ'ಗೆ ತುಂಬಿಸಿದಳು. ಮನೆಯಲ್ಲಿ ರಾಗಿ ಬರುವವರೆಗೆ ಬಳಸಲು ಜೋಳ ವಿತ್ತು. ಸಾಕಾಗದಿದ್ದರೂ ಅದರಲ್ಲೇ ಸರಿಹೋಗಿಸಿಕೊಳ್ಳಬೇಕೆಂದು ಮನಸ್ಸುಮಾಡಿಕೊಂಡಿದ್ದಳು.

ಸಧ್ಯಕ್ಕೆ ಯಾವ ತೊಂದರೆಯೂ ಇಲ್ಲ ಎಂದು ತಾಯಕ್ಕ ತನ್ನ ನೆರೆಯ ಕಾಳಕ್ಕನೊಡನೆ ಮಾತನಾಡುತ್ತ ಜಗುಲಿಯಮೇಲೆ ಕುಳಿತಿದ್ದ ದಿನವೇ ಗುಜ್ಜಗೆರೆ ಪಟೇಲ ಚಿಕ್ಕಲಿಂಗಪ್ಪನವರು ಬಂದು ತಮ್ಮ ಮೀಸೆಯನ್ನು ಪ್ರೋತ್ಸಾಹಿಸುತ್ತಾ ತಾಯಕ್ಕನಲ್ಲಿ, ಕುಶಲಪ್ರಶ್ನೆ ಮಾಡಿದರು. ಬಾಯಿಬಿಟ್ಟು ಹಣವನ್ನು ಕೇಳಲಿಲ್ಲ. ತಾಯಕ್ಕನಿಗೆ ಜ್ಞಾಪಕ ಬಂದಿತು. ಗಂಡ ತನ್ನ ಖಾಯಿಲೆಯಲ್ಲೂ, ತಾನು ಗಂಡನ ಖಾಯಿಲೆಯಲ್ಲೂ ಮಾಡಿದ ಖರ್ಚಿನಿಂದಾಗಿ ಚಿಕ್ಕಲಿಂಗಪ್ಪನವರಬಳಿ ನೂರುರೂಪಾಯಿ ಸಾಲವಾಗಿತ್ತು. ಅದು ತನ್ನ ಗಮನದಲ್ಲಿದೆ ಎಂಬುದನ್ನು ಮೇಲಕ್ಕೆದ್ದುಮೈತುಂಬ ಸೆರಗು ಹೊದ್ದು, ತಲೆತಗ್ಗಿಸಿ ಗೌರವದಿಂದ ಒಂದೆರಡು ಮಾತನಾಡಿದುದರಲ್ಲೇ ತೋರಿಸಿದಳು. ಚಿಕ್ಕಲಿಂಗಪ್ಪನವರಿಗೆ ಅವಳು ಸಾಲವನ್ನು ಹಿಂತಿರುಗಿಸ ಬಲ್ಲಳೆಂಬ ಭಾವನೆ ಬಂದಿತೇನೋ. ಅವರು ತಮ್ಮ ಪಾಡಿಗೆ ತಾವು ಮುಂದೆ ಹೊರಟುಹೋದರು.

ತಾಯಕ್ಕ ಮಾತ್ರ ಪಟೇಲರ ಸಾಲವನ್ನು ಅಂದು ಮನಸ್ಸಿಗೆ ತಂದುಕೊಂಡಳು. ಅವರಬಳಿ ಲೇವಾದೇವಿ ಏಕೋ ಅವಳಿಗೆ ಒಗ್ಗುವಂತೆ ತೋರಲಿಲ್ಲ. ಹೇಗಾದರೂ ಮಾಡಿ ಸದ್ಯದಲ್ಲೇ ಅವರ ಸಾಲವನ್ನು ತೀರಿಸಬೇಕೆಂದು ತೀರ್ಮಾನಮಾಡಿಕೊಂಡಳು. ಇದಲ್ಲದೇ ಸ್ವತ್ತಿನಮೇಲೆ ಬಹಳ ಹಿಂದಿನಿಂದಲೂ ಇದ್ದ ಒಂದುಸಾವಿರ ರೂಪಾಯಿನ ಸಾಲವೂ ಇತ್ತು ಅದಕ್ಕಿಂತ ಚಿಕ್ಕಲಿಂಗಪ್ಪನವರ ಸಾಲ ಅವಳಿಗೆ ಹೆಚ್ಚಾಗಿ ತೋರಿತು. ಆ ನೂರು ರೂಪಾಯಿಯನ್ನು ಸಂಪಾದಿಸುವ ಮಾರ್ಗವನ್ನು ಯೋಚಿಸತೊಡಗಿದಳು. ಮಧ್ಯರಾತ್ರಿಯಲ್ಲಿ ಸಿಕ್ಕಿತು. ಅನಂತರ ನಿದ್ದೆ ಬಂದದ್ದು.

ಒಡೆಯನ ಹೊಲದ ಹಿಪ್ಪನೇರಳೇ ಕಡ್ಡಿಯನ್ನು ಕತ್ತರಿಸಿ ಪುನಃ ಚಿಗುರಲು ಬಿಟ್ಟುದಾಯಿತು. ಮನೆಯಲ್ಲಿ ತುಕ್ಕುಹಿಡಿಯಲು ತೊಡಗಿದ್ದ ಚೂರಿಯನ್ನು ಹರಿತ ಮಾಡಿಸಿದ್ದಾಯಿತು. ಹಳೆಯ ಬಿದಿರಿನ ತಟ್ಟೆಗಳನ್ನು ಸರಿಮಾಡಿಸಿ ಜೊತೆಗೆ ಎರಡು ಜೊತೆ ತಟ್ಟೆಗಳನ್ನು ಹೊಸದಾಗಿ ಕೊಂಡು ಸಾರಿಸಿಡಲಾಯಿತು. ಸೊಪ್ಪು ಹದವಾಗಿ ಚಿಗುರೊಡೆದ ತಕ್ಷಣ ಇನ್ನೂರು ರೇಶ್ಮೆಹುಳುವಿನ ಮೊಟ್ಟೆಗಳನ್ನು ಕೊಂಡುಕೊಂಡು ' ಚಾಕಿ '

ಕಟ್ಟಿದಳು. ಸೊಪ್ಪನ್ನು ಪುಟ್ಟತಾಯಿಯ ಸಮೇತ ಹೋಗಿ ಊರಿತರುತ್ತಿದ್ದಳು. ತಂದ ಸೊಪ್ಪನ್ನು ಕೊಂಚಕಾಲ ಹರವಿದ್ದು ಚೆನ್ನಾಗಿ ಒದರಿ ಆಯಾಯಾ ದಿನಗಳ ಹುಳುವಿನ ಮರಿಗಳು ತಿನ್ನಲು ಸುಲಭವಾಗುವಂತೆ ತನಗೆ ತಿಳಿದಷ್ಟುಟ್ಟಿಗೆ ಸಣ್ಣದಾಗಿ ಕತ್ತರಿಸಿ ಹಾಕುತ್ತಿದ್ದಳು. ದಿನಗಳು ಕಳೆಯುತ್ತ ಕಳೆಯುತ್ತ ಎಚ್ಚರಿಕೆ ಹೆಚ್ಚುತ್ತ ಹೋಗಬೇಕಾದ ದಂಧೆಯದು. ಬೆಳಗಿನವರೆಗೂ ನಿದ್ದೆಯಿಲ್ಲದೇ ಹುಳುಗಳನ್ನು ಕಾಪಾಡಬೇಕಾಗಿತ್ತು. ರಾತ್ರಿಯಲ್ಲಿ ಮೂರು ಬಾರಿ ತಟ್ಟೆಗಳಿಂದ ಹಳೆಯ ಸೊಪ್ಪು ಕಸವನ್ನು ತೆಗೆದು ಹೊಸಸೊಪ್ಪನ್ನು ಕತ್ತರಿಸಿ ಹಾಕಬೇಕಾಗುತ್ತಿತ್ತು.

'ನಾಲ್ಕನೇ ಜರ'ದಿಂದ ಮರಿಗಳು ಎದ್ದವು ಎಂದರೆ ಆ ಹುಳುಗಳು ಹುಟ್ಟಿ ಸುಮಾರು ಹನ್ನೆರಡು ದಿನಗಳಾಯಿತೆಂದರ್ಥ. ಇನ್ನೈದಾರು ದಿನಗಳ ಒಳಗೆ ಅವು ಒಂದೊಂದೂ ತಮ್ಮ ಸುತ್ತಲೂ ಗೂಡು ಕಟ್ಟಿಕೊಳ್ಳಲು ಪ್ರಾರಂಭಿಸುತ್ತವೆ. ಆಗ ಅವು ಹಣ್ಣಾಯಿತೆಂದು ಲೆಖ್ಖ. ಆ ಗೂಡುಗಳನ್ನು ರೇಷ್ಮೆಕಾರ್ಖಾನೆಯ ಕಡೆಯ ದಳ್ಳಾಳಿಗಳು ಬಂದು ಕ್ರಯಕ್ಕೆ ತೆಗೆದುಕೊಳ್ಳುತ್ತಾರೆ. ಆಗ ಮಣಕ್ಕೆ ಇಪ್ಪತ್ತೇಳು ರೂಪಾಯಿಗಳಿಂದ ಮೂವತ್ತೆರಡು ರೂಪಾಯಿಗಳವರೆಗೂ ಧಾರಣೆ ಇತ್ತು. ತಾಯಕ್ಕನಿಗೆ ಕೊನೆಪಕ್ಷ ಮೂರುಮಣ ರೇಷ್ಮೆಗೂಡಾಗುವುದೆಂಬ ನಂಬಿಕೆಯಿತ್ತು.

ಪಟೇಲ್ ಚಿಕ್ಕಲಿಂಗಪ್ಪನವರ ಋಣ ಸಧ್ಯದಲ್ಲಿ ಹರಿಯುವಂತಿರಲಿಲ್ಲವೇನೋ. ತಾಯಕ್ಕನ ಶ್ರಮವೆಲ್ಲ ವ್ಯರ್ಥವಾಯಿತು. ಏಕೋ ಏನೋ ಹುಳುಗಳು ಹಣ್ಣಾಗಲೇ ಇಲ್ಲ. ಹಳದೀಬಣ್ಣವಾಗಬೇಕಾಗಿದ್ದ ಹುಳುಗಳು ತಮ್ಮ ಬೂದಿಹಸಿರು ಬಣ್ಣವನ್ನು ಬಿಡಲೇಇಲ್ಲ. ದಿನೇದಿನೇ ದಪ್ಪನಾಗತೊಡಗಿದವೇ ಹೊರತು ಬಣ್ಣ ತಿರುಗಲಿಲ್ಲ. ತಾಯಕ್ಕ ನಿರಾಸೆಯಲ್ಲಿ ಆಸೆಯನ್ನು ತಂದುಕೊಂಡು ಎಂಟು ದಿನಗಳು ನೋಡಿದಳು. ಹುಳುಗಳು ಸೊಪ್ಪನ್ನು ಸಂಭ್ರಮದಿಂದ ಮೇಯ್ದು ಮುಗಿಸುತ್ತಿದ್ದವೇ ಹೊರತು ತಾಯಕ್ಕನ ಮೇಲೆ ಕರುಣೆಯಿಟ್ಟು ರೇಷ್ಮೆಯ ಬಣ್ಣಕ್ಕೆ ತಿರುಗಲೇ ಇಲ್ಲ.

ಬಂದು ನೋಡಿದವರೆಲ್ಲರೂ ತಾಯಕ್ಕನಿಗೆ ಭ್ರಾಂತಿ ಎಂದರು 'ತಿಪ್ಪೆಗೆ ಸುರಿದರೆ ಸೊಪ್ಪು ಲಾಭ' ಎಂದರು. ತಾಯಕ್ಕನ ಹೊಟ್ಟೆ

ಯುರಿಯುತ್ತಿತ್ತು. ಸುಮ್ಮನೆ ಸೊಪ್ಪನ್ನು ಕೊಟ್ಟುಬಿಟ್ಟದ್ದರೆ ಮೂವತ್ತು ನಲವತ್ತು ರೂಪಾಯಿಗಳಷ್ಟು ಸಿಕ್ಕುತ್ತಿತ್ತು. ಅದನ್ನು ನೆನೆಸಿಕೊಂಡಾಗ ತಾಯಕ್ಕನು ತನ್ನ ಅವಿವೇಕಕ್ಕಾಗಿ ತಾನೇ ನಾಚಿಕೊಳ್ಳುತ್ತಿದ್ದಳು. ಸಾಲ ಹಾಗೆಯೇ ಉಳಿಯಿತೆಂಬುದು ನೆನಪಿಗೆ ಬಂದಾಗ ನಿದ್ದೆಗೆಟ್ಟ ಕಣ್ಣುಗಳು ನೀರನ್ನು ತುಂಬಿ ಕೊಂಡವು. ಹುಳುಗಳನ್ನು ತಿಪ್ಪೆಗೆ ಸುರಿಯಲೇ ಬೇಕಾ ಯಿತು. ಹದ್ದು ಕಾಗೆಗಳ ಆನಂದವನ್ನು ನೋಡಿ ತಾಯಕ್ಕ ಅಸಹ್ಯಪಟ್ಟು ಕೊಂಡು ಮನೆಗೆ ಬಂದಳು.

ತಾಯಕ್ಕನಿಗೆ ಈ ನಷ್ಟ ಹೊಸದೇ ಹೊರತು, ಊರಲ್ಲಿ ಹೀಗಾಗು ತ್ತಿದ್ದುದು 'ಅಪರೂಪ'ವೇನಲ್ಲ. ಸಿದ್ದಪ್ಪನ ಕೈಗಳೇ ಎಷ್ಟೋ ಬಾರಿ ಹುಳು ಗಳನ್ನು ತಿಪ್ಪೆಗೆ ಸುರಿದಿದ್ದವು. ಆಗ ತಾಯಕ್ಕನಿಗೆ ಇಷ್ಟು ನೋವಾಗಿರಲಿಲ್ಲ. ಈ ಬಾರಿ ನಷ್ಟವಾದದ್ದು ತನ್ನ ಮೈಯಿನ ಶ್ರಮವಾದದ್ದರಿಂದ ಆಕೆಗೆ ಅದು ಅಷ್ಟು ಪ್ರಾಧಾನ್ಯವಾಗಿ ಕಂಡಿತು.

ಅವಳು ಅಂಜಿ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಪುನಃ ಸೊಪ್ಪನ್ನು ಕ್ರಯಕ್ಕೆ ಕೊಡದೇ ತಡೆದಳು. ಹುಳುವನ್ನು ಸಾಕುವ ಸಾಹಸವನ್ನು ಮುಂದುವರಿಸಿದಳು. ಏಕಾಂಗಿನಿಯಾದವಳಿಗೆ ಆ ಪ್ರಯತ್ನ, ನಿರ್ಧಾರ ಬರುವುದು ಅಸಹಜ. ಮಕ್ಕಳಿಗಾಗಿ ತಾಯಕ್ಕನಲ್ಲಿ ಈ ಕೆಚ್ಚು ಮೂಡಿರ ಬೇಕು. ಮಲ್ಲೇಶನ ಚಿಂತೆಯೇ ಅದರಲ್ಲಿ ಮೊದಲನೆಯದು.

ಹಳ್ಳಿಯ 'ಇಸ್ಕೂಲಿ'ನಲ್ಲಿ ಫೇಲಾಗುವ ಹುಡುಗರೇ ಇಲ್ಲ. ಅಂಥಹ ದರಲ್ಲಿ ಮಲ್ಲೇಶನಿಗೇನು ಚಿಂತೆ? ಇನ್ನು ಮೂರು ತಿಂಗಳು ಕಳೆದ ತಕ್ಷಣ ಅವನು ತಾಲ್ಲೋಕು ಮಿಡಲ್‌ಸ್ಕೂಲಿಗೆ ಹೋಗಬೇಕೆಂದಾಗಿ ಹೋಗಿತ್ತು. ಅವರೂರು 'ಕಿರೀಕಾಟೆ'ಯ ಪ್ರೈಮರಿ ಸ್ಕೂಲಿಗೆ ಅವನಿಗೆ ಪಾಠ ಹೇಳುವ ಯೋಗ್ಯತೆ ಇನ್ನಿರಲಿಲ್ಲ. ಇನ್ನು ಮೇಲೆ ಅವನು ಇಂಗ್ಲೀಷು ಓದುವ ಹುಡುಗ, ತಾಲ್ಲೋಕಿನ ಊರಿಗೆ ಹೋಗುವವ. ಅವನಿಗೆ ಒಳ್ಳೆ ಬಟ್ಟೆಗಳಾಗ ಬೇಕು. ಪುಸ್ತುಕಗಳಾಗಬೇಕು. ಆರು ತಿಂಗಳಿಗೊಂದಾವರ್ತಿ ಸ್ಕೂಲಿಗೆ ಅದೇನೋ 'ಫೀಸೆಂದು' ದುಡ್ಡು ಕಟ್ಟಬೇಕು. ತಾಯಕ್ಕನ ಇದೆಲ್ಲ ಸಡ

ಗರದ ಆಲೋಚನೆಯ ಮಧ್ಯೆ ಪುಟ್ಟತಾಯಿ ಒಂದು ಅನಾಹುತ ಮಾಡಿ ಕೊಂಡು ಅಳುತ್ತ ಮನೆಗೆ ಬಂದಿದ್ದಳು,

ಎಂದಿನಂತೆ ಪುಟ್ಟತಾಯಿ ಎಮ್ಮೆಯನ್ನು ಮೇಯಿಸಲು ಹೊಡೆದು ಕೊಂಡು ಹೋಗಿದ್ದಳು. ಊರಿಗೆ ದೂರದಲ್ಲಿ, ಗುಡ್ಡದ ಒತ್ತಿನಲ್ಲಿದ್ದ ಸ್ವಾಭಾವಿಕವಾದ ಕೆರೆಯೊಂದರ ಹತ್ತಿರ ಹಸಿರು ತುಂಬಾ ಹುಲುಸಾಗಿತ್ತು. ಅಲ್ಲಿಗೆ ದನಗಳನ್ನು ಹೊಡೆದುಕೊಂಡು ಹೋಗುವುದೇ ಕಡಿಮೆ. ಅದಕ್ಕೆ ಎರಡು ಕಾರಣಗಳು. ಊರಿಗೆ ದೂರವೆಂಬುದು ಒಂದು. ಕೆರೆಯ ಸುತ್ತ ಮುತ್ತ ನಾಲ್ಕಾರು 'ಕಳ್ಳಬದಿ'ಯ ಜೌಗು ಗುಂಡಿಗಳಿದ್ದದ್ದು ಮತ್ತೊಂದು. ಹಾಗೂ ಹಸನಾದ ಮೇವಿನ ಆಸೆಗೆ ಅಲ್ಲಿಗೆ ದನಗಳನ್ನು ಬಿಟ್ಟುಕೊಂಡು ಹೋಗುತ್ತಿದ್ದವರು ಬಲು ಎಚ್ಚರಿಕೆಯಿಂದ ಮೇಯಿಸುತ್ತಿದ್ದರು. ಪ್ರತಿ ರಾಸಿಗೂ ಉದ್ದವಾದ ಹಗ್ಗವನ್ನು ಕಟ್ಟಿ ಅಪಾಯವಿಲ್ಲದೇ ಇದ್ದ ಜಾಗದಲ್ಲಿ ಮಾತ್ರ ಮೇಯುವಹಾಗೆ ಮಾಡಿ ಕಟ್ಟಿ ಹಾಕಿರುತ್ತಿದ್ದರು.

ನೀರಿನ ವಸತಿಯ ಬಳಿ ಭಾರಿಭಾರಿ ಮರಗಳಿದ್ದುದೂ ಸಹಜವೇ. ಅದರಲ್ಲೂ ಹುಣಿಸೇ ಮರಗಳೆಂದರೆ ಹುಡುಗರಿಗೆ ಮತ್ತೂ ಸಂತೋಷ. ಸಧ್ಯ ದಲ್ಲಿ ಹುಣಿಸೆ ಮರದ ಫಲಗಳೆಲ್ಲ 'ದೊರೆಗಾಯಿ'ಯ ಮಟ್ಟದಲ್ಲಿದ್ದವು. ಆ ಮರಗಳಿಗೆ ಕಟ್ಟುನಿಟ್ಟಾದ ಯಜಮಾನರು ಯಾರೂ ಇರಲಿಲ್ಲ. ಆದುದ ರಿಂದ ದನವಿಲ್ಲದ ಹುಡುಗರು ಅಲ್ಲಿ ಸೇರುತ್ತಿದ್ದರು. ಹುಣಿಸೆ ದೊರೆಗಾಯಿ ಗಳ ಜೊತೆಗೆ ಉಯ್ಯಾಲೆಯ ಆಕರ್ಷಣೆಯೂ ಇದ್ದುದರಿಂದ ಹುಡುಗರ ಹಾವಳಿಯನ್ನು ಅಲ್ಲಿ ತಡೆಯುವುದು ಯಾರಿಗೂ ಸಾಧ್ಯವಾಗುತ್ತಿರಲಿಲ್ಲ.

ಪುಟ್ಟತಾಯಿಗೆ 'ಉಯ್ಯಾಲೆ'ಯೆಂದರೆ ಬಲು ಖುಷಿ. ಉಯ್ಯಾಲೆ ಜೋರಾಗುತ್ತಿದ್ದಂತೆಲ್ಲ ಅವಳ ಉತ್ಸಾಹ ಹೆಚ್ಚುತ್ತಿತ್ತು. ಎಷ್ಟೋ ಗಂಡು ಹುಡುಗರೂ ಅವಳ ಸಮ ಉಯ್ಯಾಲೆಯಾಟ ಆಡಲಾರದಾಗಿದ್ದರು. ಆಗಾಗ್ಗೆ ಅವಳೂ ಉಯ್ಯಾಲೆಯನ್ನು ಒತ್ತಲು ನಿಲ್ಲುತ್ತಿದ್ದುದೂ ಉಂಟು. ಉಯ್ಯಾಲೆ ಡೊಂಕುಡೊಂಕಾಗಿ ಆಡಲು ತೊಡಗಿದಾಗಲೂ ಅದನ್ನು ನಿಲ್ಲಿ ಸದೇ ನೇರಮಾಡುವಷ್ಟು ಕುಶಲತೆ ಪುಟ್ಟತಾಯಿಯಲ್ಲಿತ್ತು. ಹತ್ತು ವರ್ಷದ

ಪುಟ್ಟತಾಯಿ ಹದಿನಾರುವರ್ಷದ ಗಂಡು ಹುಡುಗರಿಗೆ ಈ ಉಯ್ಯಾಲೆ ಯಾಟದಲ್ಲಿ ಸಮನೆನಿಸಿ ಕೊಂಡಿದ್ದಳು.

ಈ ಹೊಗಳಿಕೆಯೇ ಅವಳನ್ನು ಪದೇಪದೇ ಅಲ್ಲಿಗೆ ಎಳೆಯುತ್ತಿದ್ದುದು. ಸೇರಿದ್ದ ಹುಡುಗರ ಪೈಕಿ ಇವಳಂತೆ ಇಬ್ಬರೋ ಮೂವರೋ ದನದ ಸಮೇತ ಬಂದಿದ್ದವರು. ಪುಟ್ಟತಾಯಿ ಉಯ್ಯಾಲೆಯ ವಿಷಯದಲ್ಲಿ ವೈಮರೆತರೂ 'ಕಳ್ಳಬದಿ'ಯ ವಿಷಯದಲ್ಲಿ ಹಾಗಿರಲಿಲ್ಲ. ತನ್ನ ಒಂಟಿ ಎಮ್ಮೆಯನ್ನು ಸರಿಯಾದ ಜಾಗದಲ್ಲಿ ಧೃಡವಾಗಿ ಕಟ್ಟಿಹಾಕಿಯೇ ಅವಳ ಆಟಕ್ಕೆ ತೊಡಗು ತ್ತಿದ್ದುದು. ಮಿಕ್ಕವರ ಹಾಗೆ ಅವಳು ಎಂದಿಗೂ ಹುಲ್ಲುಜೊಂಡಿಗೆ ಎಮ್ಮೆ ಯನ್ನು ಕಟ್ಟಿದವಳಲ್ಲ. ಕೊನೆಯಪಕ್ಷ ಒಂದು ಬೆರಳು ಗಾತ್ರದ ಬೇರನ್ನಾ ದರೂ ಹುಡುಕಿಯೇ ಅವಳು ಕಟ್ಟುತ್ತಿದ್ದುದು.

ಹಗ್ಗವನ್ನು ಮಾತ್ರ ಅವಳು ಮನೆಯಿಂದ ತರುವ ಹಾಗಿರಲಿಲ್ಲ. ಹಗ್ಗ ತೆಗೆದುಕೊಂಡರೆ ಮನೆಯವರಿಗೆ ಇವಳು ಕೆರೆಯಕಡೆಗೆ ಹೋಗುತ್ತಿ ದ್ದಾಳೆಂಬುದು ಗೊತ್ತಾಗಿ ಹೋಗುತ್ತಿತ್ತು. ಜೊತೆಗಾರರಿಂದ ಒಂದು ಹಗ್ಗ ವನ್ನು ಎರವಲು ಪಡೆದು ಪುಟ್ಟತಾಯಿ ತನ್ನ ಎಮ್ಮೆಯನ್ನು ಒಂದು ಗೋಣಿ ಮರದ ಬೇರಿಗೆ ಕಟ್ಟಿಹಾಕಿದ್ದಳು. ಉಯ್ಯಾಲೆ ತೂಗಾಡತೊಡಗಿತು.

ಹೊತ್ತು ಬೀಳುವ ಸಮಯವಾಗುವವರೆಗೂ ಉಯ್ಯಾಲೆ ತೂಗಾಡು ತ್ತಲೇ ಇತ್ತು. ವಾತಾವರಣದಲ್ಲಿದ್ದ ಶಾಖವು ಮುರಿದು ಚಳಿಕಂಡಾಗ ಹುಡುಗರಿಗೆ ಉಯ್ಯಾಲೆಯ ಗೀಳು ಕಡಿಮೆಯಾಯಿತು. ಎಲ್ಲರಿಗೂ ಊರಿನ ಕಡೆ ಜ್ಞಾನ ಹತ್ತಿತು. ಹಗ್ಗಗಳನ್ನು ಏಣಿಯತುಂಡನ್ನು ಬಿಚ್ಚಿ ಕೊಂಡರು. ದನದವರು ತಮ್ಮತಮ್ಮ ದನಗಳ ಕಡೆಗೆ ಹೊರಟರು. ಪುಟ್ಟ ತಾಯಿ ಹೋಗಿನೋಡಿದಳು.

ಹಗ್ಗ ಅವಳದಲ್ಲ. ಅವಳು ಇದನ್ನು ಸರಿಯಾಗಿ ನೋಡಿಯೂ ಇರಲಿಲ್ಲ. ಬೇರಿನಲ್ಲಿದ್ದ ಗಂಟು ಹಾಗೆಯೇ ಇತ್ತು. ಎಮ್ಮೆ ಮತ್ತು ಹಗ್ಗ ಎರಡೂ ಕಣ್ಣಿಗೆ ಸಿಕ್ಕಲಿಲ್ಲ. ಪುಟ್ಟತಾಯಿ ಭಯದಿಂದ ಕಳ್ಳಬದಿಯ ಗುಂಡಿ ಗಳ ಕಡೆಗೆ ಓಡಿದಳು.

ಎಮ್ಮೆಗೆ ಬೇಕಾದುದು ಬಯಲಿನಲ್ಲಿ ಮೇವುಮಾತ್ರವಲ್ಲ. ಅದಕ್ಕೆ ಬದಿಯೂ ಬೇಕು. ಆಹಾರದಷ್ಟೇ ಅವಕ್ಕೆ ಕೊಚ್ಚೆಯೂ ಮುಖ್ಯ. ಪುಟ್ಟ ತಾಯಿಯ ಎಮ್ಮೆ ಹಗ್ಗದ ಯೋಗ್ಯತೆಯನ್ನು ಪರೀಕ್ಷಿಸಿ ಅದರ ಅಶಕ್ತತೆ ಯನ್ನು ಉಪಯೋಗಿಸಿಕೊಂಡು ಸ್ವತಂತ್ರವಾಗಿ ಹೋಗಿ ಬದಿಯಲ್ಲಿ ಆರಾಮ ವಾಗಿ ವೈಚಾಚಿತು. ಪುನಃ ಏಳಲಾಗಲಿಲ್ಲ. ಹಾಗೆಯೇ ಎಷ್ಟು ಹೊತ್ತಾಯಿತೊ.

ಪುಟ್ಟತಾಯಿಗೆ ತನ್ನ ಎಮ್ಮೆಯನ್ನು ನೋಡಿದ ತಕ್ಷಣ ಭಯವಾಗ ಲಿಲ್ಲ. ಅದು ಸಾಮಾನ್ಯವಾಗಿ ಬದಿಯಲ್ಲಿ ಕ್ರೀಡೆಯಾಡುತ್ತಿರುವಂತೆಯೇ ಮಲಗಿತ್ತು. ಕಾಲುಗಳು ಪೂರ್ತಿಯಾಗಿ ಕಾಣುತ್ತಿರಲಿಲ್ಲ. ಆದರೂ ಎಮ್ಮೆ ಪೂರ್ತಿಯಾಗಿ ಮುಳುಗಿರಲಿಲ್ಲ. ಪುಟ್ಟತಾಯಿಗೆ ಮೊದಲುಮೊದಲು ಎಮ್ಮೆಯನ್ನು ಏಳಿಸಿ ಬಿಡಬಹುದೆನ್ನಿಸಿತು. ಎಮ್ಮೆಯೂ ಅವಳನ್ನು ಕಂಡ ತಕ್ಷಣ ಕೊನೆಯಬಾರಿ ಪ್ರಯತ್ನಿಸುವಂತೆ, ಕೂಗಿ ಏಳಲು ಒದ್ದಾಡಿತು. ಆಗಲಿಲ್ಲ.

ಪುಟ್ಟತಾಯಿಗೆ ಒಂದೇಬಾರಿಗೆ ಅಳು ಬಂದುಬಿಟ್ಟಿತು. ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅಳುವಿನ ಮಧ್ಯೆ ಎಮ್ಮೆಯ ಬಳಿಗೆ ಹೋಗುವುದ ರಲ್ಲಿದ್ದಳು. ಜೊತೆ ಹುಡುಗರು ಆವಳನ್ನು ಹಿಡಿದು ನಿಲ್ಲಿಸಿದರು. ಬೇಗ ಊರಿಗೆ ಹೋಗಿ ದೊಡ್ಡವರನ್ನು ಕರೆದುಕೊಂಡು ಬರೋಣವೆಂದು ಮಾತ ನಾಡಿಕೊಂಡರು. ಪುಟ್ಟತಾಯಿ ಜಗ್ಗುವಹಾಗಿರಲಿಲ್ಲ. ಬಲವಂತದಿಂದ ಅವಳನ್ನು ಎಳೆದುಕೊಂಡು ಹೊರಟರು. ಅವರೆಲ್ಲ ತನ್ನನ್ನು ಬಿಟ್ಟು ಹೊರಟುಹೋಗುವುದನ್ನು ಕಂಡು ಎಮ್ಮೆ ಕಣ್ಣೀರು ಸುರಿಸಿ ಕೂಗಿತು. ಅದರ ಧ್ವನಿಕುಗ್ಗಿಹೋಗಿತ್ತು. ಪುಟ್ಟತಾಯಿ ಹಿಂತಿರುಗಿ ನೋಡುತ್ತಲೇ ಇದ್ದಳು. ಅವರು ಅವಳನ್ನು ಎಳೆದುಕೊಂಡುಹೋಗುತ್ತಲೇ ಇದ್ದರು. ಎಮ್ಮೆ ತನ್ನ ಆಸೆಯೆಲ್ಲವನ್ನೂ ಬಿಟ್ಟಿತು.

ಪುಟ್ಟತಾಯಿಯ ಗೋಳನ್ನು ಕೇಳಲಾರದೇ, ತಾಯಕ್ಕನಿಗೆ ತಮ್ಮ ಔದಾರ್ಯವನ್ನು ತೋರಿಸುವ ಸಲುವಾಗಿಯೇ ಊರಿನ ನಾಲ್ಕಾರು ಜನರು ಹಗ್ಗಗಳು, ಬೊಂಬುಗಳ ಸಮೇತ ಕಳ್ಳಬದಿಯಕಡೆಗೆ ಬಂದು ಸೇರಿದರು.

ಎಮ್ಮೆಯ ಮೂಗು ಕೊಂಬುಗಳನ್ನು ಬಿಟ್ಟು ಬೇರೇನೂ ಕಾಣಿಸುತ್ತಿರಲಿಲ್ಲ. ಬಂದವರೂ ಆಸೆಯನ್ನು ಬಿಟ್ಟಿದ್ದರೂ, ಮೂಗು ಮೇಲಿದ್ದುದರಿಂದ ಗಳುವಿನ ತುದಿಗೆ ಹಗ್ಗವನ್ನು ಕಟ್ಟಿ ಬದಿಯೊಳಕ್ಕೆ ತಳ್ಳಿನೋಡಿದರು. ಅದೃಷ್ಟ ವಶಾತ್ ಹಗ್ಗದ ಗಳುವು ಎಮ್ಮೆಯ ಹೊಟ್ಟೆಯ ಕೆಳಗಿನಿಂದ ಹಾದು ಬಂದಿತು. ಕವೆಗಡ್ಡಿಯ ಸಹಾಯದಿಂದ ಹಗ್ಗವನ್ನು ಮೇಲಕ್ಕೆ ತೆಗೆದು ಕೊಂಡರು. ಎಮ್ಮೆ ಹಗ್ಗದೊಳಕ್ಕೆ ಸಿಕ್ಕಿಕೊಂಡಿತು. ಸಂತೋಷದಿಂದ ಸಿಕ್ಕಿದವರು ಸಿಕ್ಕಿದಕಡೆ ಹಗ್ಗವನ್ನು ಎಳೆದರು. ಪ್ರಯಾಸದಿಂದ ಎಮ್ಮೆ ಹೊರಕ್ಕೆ ಬಂತು. ಆದರೆ ಅದರ ಜೀವ ಮಾತ್ರ ಮುಳುಗಿಯೇ ಹೋಗಿತ್ತು.

ಪುಟ್ಟತಾಯಿ ತನ್ನ ತಾಯಿಯಿಂದ ಕೇಳಬಾರದ ಮಾತುಗಳನ್ನು ಕೇಳಿದಳು. ಆವಳಿಗೆ ತಾನೂ ಹೋಗಿ ಕಳ್ಳಬದಿಗೆ ಹಾರಿಕೊಳ್ಳಬೇಕನ್ನಿ ಸಿತು. ಒಮ್ಮೆಹೋಗಿ ಅದರ ಬಳಿ ನಿಂತು ಯೋಚಿಸಿಯೂ ಇದ್ದಳು. ಆದರೆ ಮನೆಯಲ್ಲಿದ್ದ ತನ್ನ ಎಮ್ಮೆಯ ಕರುವಿನ ಜ್ಞಾಪಕ ಬಂದಿತು. ತಾನೂ ಕಳ್ಳಬದಿಯಲ್ಲಿ ಮುಳುಗಿಹೋದರೆ ಆ ಕರುವನ್ನು ನೋಡಿಕೊಳ್ಳುವವರೇ ಇಲ್ಲವೆನ್ನಿಸಿತವಳಿಗೆ. ಮನೆಗೆ ಹಿಂತಿರುಗಿದಳು.

ಮಲ್ಲೇಶ ಒಮ್ಮೆ ಬೆಣ್ಣೆಯಿಲ್ಲದೆ ಊಟವನ್ನೇ ಮಾಡುವುದಿಲ್ಲವೆಂದು ಹಟ ಹಿಡಿದಾಗಲೂ ಪುಟ್ಟತಾಯಿಗೆ ಹಿಡಿಶಾಪವಾಯಿತು. ಮನೆಯಲ್ಲಿ 'ಕರಾವಿ'ಲ್ಲದಿದ್ದರೆ ಮಲ್ಲೇಶನನ್ನು ತಡೆಯುವುದು ಅಸಾಧ್ಯವೆಂದು ತಾಯಕ್ಕ ತಾನೇ ತೀರ್ಮಾನಿಸಿಕೊಂಡಳು. ಅದಕ್ಕೆ ಸರಿಯಾಗಿ ರೇಷ್ಮೆಯಹುಳು ಹಣ್ಣಾಗಿತ್ತು. ಎರಡು ದಿನಗಳ ನಂತರ 'ಚಂದ್ರಿಕೆ'ಗಳಿಂದ ಗೂಡನ್ನು ಬಿಡಿಸಿ ದೊಡ್ಡ ಮಕ್ಕರಿಯಲ್ಲಿ ತುಂಬಿಕೊಳ್ಳಲಾಯಿತು. ದಳ್ಳಾಳಿ ಬಂದು ತೂಗಿದಾಗ ಮೂರೂವರೆ ಮಣದಷ್ಟಾಯಿತು. ಹತ್ತು ದಿನಗಳಮೇಲೆ ತಾಯಕ್ಕನ ಕೈಗೆ ಸರಿಯಾಗಿ ತೊಂಭತ್ತೆಂಟು ರೂಪಾಯಿಗಳು ಬಂದವು. ಹಿಂದೆ ಮುಂದೆ ಯೋಚಿಸದೆ ತಾಯಕ್ಕ ತನ್ನ ಗೆಳತಿ ಕಾಳಕ್ಕನ ಜೊತೆಗೂಡಿ ನರಿಯಾಲದ ಸಂತೆಗೆ ನಡೆದೇಬಿಟ್ಟಳು.

. ಬರಿಗೈಯಲ್ಲಿ ಹಿಂತಿರುಗಲಿಲ್ಲ. ಒಂದು ಎಮ್ಮೆಯನ್ನು ತಂದೇ ತಂದಳು.. ಪುಟ್ಟತಾಯಿಗೆ ಬಲು ಆನಂದವಾಯಿತು. ಏಕೆಂದರೆ ತಂದ ಎಮ್ಮೆಗೆ ಕರುವಿರಲಿಲ್ಲ. ಕರೆಯುವ ಎಮ್ಮೆ ಎಂಬುದು ತಿಳಿದಮೇಲಂತೂ ಪುಟ್ಟತಾಯಿಗೆ ಒಂದು ದೊಡ್ಡ ಜವಾಬ್ದಾರಿ ಕಳೆದಂತಾಯಿತು. ಹೊಸ ಎಮ್ಮೆ ಮನೆಯೊಳಕ್ಕೆ ಬರುವುದಕ್ಕಿಂತ ಮುಂಚೆಯೇ ಕರುವನ್ನು ಬಿಚ್ಚಿ ಬಿಟ್ಟಿದ್ದಳು. ಆ ಕರು ಮೋರೆ ನೋಡದೇ ಎಮ್ಮೆಯ ಕೆಚ್ಚಲಿಗೆ ಆತುರ ದಿಂದ ಬಾಯಿ ಹಾಕಿತು. ಕರುವನ್ನು ಕಳೆದುಕೊಂಡಿದ್ದ ಎಮ್ಮೆಯು ಸುಮ್ಮನಿತ್ತು. ಕರುವಿಲ್ಲದ ಎಮ್ಮೆಯೆಂದು ಖರೀದಿಯಲ್ಲಿ ಕೊಂಚ ಉಳಿ ತಾಯವಾಗಿದ್ದುದರಿಂದ ತಾಯಕ್ಕನಿಗೆ ಸಂತೋಷವಾದರೆ ತಬ್ಬಲಿಕರುವಿಗೆ ತಾಯಿ ಸಿಕ್ಕಿತೆಂದು ಪುಟ್ಟತಾಯಿಗೆ ಸಂತೋಷ.

ತಾಯಕ್ಕ ಸಂತೋಷದಿಂದ ಮಲ್ಲೇಶನ ಊಟಕ್ಕೆ ಅರೆಪಾವಿನಷ್ಟು ಬೆಣ್ಣೆ ಹಾಕಿದಳು. ಅವನು ಸಂಭ್ರಮದಿಂದ ಊಟಮಾಡುತ್ತಿದ್ದುದನ್ನೇ ನೋಡಿ ಆನಂದಪಟ್ಟಳು. ಮೇಲಾಗಿ ಅವನು ಆ ದಿನದಿಂದ ತಾಲ್ಲೂಕಿಗೆ ಇಂಗ್ಲೀಷು ಓದುವುದಕ್ಕೆ ಹೋಗುವವನಾಗಿದ್ದನು. ಅವನು ಊಟಮಾಡಿದ ಮೇಲೆ ಹೊಸದಾಗಿ ಹೊಲೆಸಿದ್ದ ಚಡ್ಡಿ, ಕೋಟುಗಳನ್ನು ಕೊಟ್ಟಳು. ಕಲ್ಲೀ ಚೀಲದಲ್ಲಿ ಮಲ್ಲೇಶ ತನಗೆ ಬೇಕಾದ ಬೇಡವಾದ ಎಲ್ಲಾ ಪುಸ್ತಕಗಳನ್ನೂ ತುಂಬಿಕೊಂಡು ಚೀಲವನ್ನು ಬಲತೋಳಿನೊಳಗಿಂದ ತಂದು ಎಡಹೆಗಲಿನ ಮೇಲೆ ಹಾಕಿಕೊಂಡು ಹೊರಟನು. ಹೊಳೆಯಕಡೆಗೆ ಮಾತ್ರ ಹೋಗ ಬೇಡವೆಂದು ಮತ್ತೊಮ್ಮೆ ಎಚ್ಚರಿಸಿ ತಾಯಕ್ಕ ಮಗನನ್ನು ಬಾಗಿಲಿನವರೆಗೂ ಬಂದು ಬೀಳ್ಕೊಟ್ಟಳು. ಅಲ್ಲಿಂದಾಚೆಗೆ ಅವನು ಕಣ್ಮರೆಯಾಗುವವರೆಗೂ ನೋಡಲು ನಿಂತುಕೊಂಡಳು. ಮಲ್ಲೇಶ ಇನ್ನೇನು ಬಲಕ್ಕೆ ತಿರುಗಿಕೊಳ್ಳ ಬೇಕು ಅಷ್ಟರಲ್ಲಿ ಅವನಿಗೆದುರಾಗಿ ಪಟೇಲ ಚಿಕ್ಕಲಿಂಗಪ್ಪನವರು ಅವನೆದುರಿಗೆ ಬಂದುದು ತಾಯಕ್ಕನ ಕಣ್ಣಿಗೆ ಬಿದ್ದಿತು. ಚಿಕ್ಕಲಿಂಗಪ್ಪನವರು ಮಲ್ಲೇಶನನ್ನು ಮಾತನಾಡಿಸಿ, ಜೇಬಿಗೆ ಕೈಹಾಕಿ ಏನನ್ನೋ ಅವನ ಕೈಗೆ ಕೊಟ್ಟುದೂ ಕಂಡಿತು.ತಾಯಕ್ಕನಿಗೆ ಸಹಿಸಲಿಲ್ಲ. ಅದರೊಡನೆಯೇ ಅವಳಿಗೆ ಅವರ ಸಾಲದ ಜ್ಞಾಪಕವೂ ಬಂದಿತು.

ಈಬಾರಿಯೂ ಅವರ ಸಾಲ ತೀರಲಿಲ್ಲ. ಅದಕ್ಕೆ ಕಾರಣ ಪುಟ್ಟಿ ತಾಯಿಯೆ. ಉಯ್ಯಾಲೆಯಾಡುತ್ತಾ ಎಮ್ಮೆಯನ್ನು ಕಳ್ಳಬದಿಗೆ ಕೆಡವಿ ಚಿಕ್ಕಲಿಂಗಪ್ಪನವರ ಸಾಲವನ್ನು ಉಳಿಸಿಬಿಟ್ಟಳು. ತಾಯಕ್ಕನಿಗೆ ಮಗಳ ಮೇಲೆ ಕೋಪಬಂದಿತು. ಅಷ್ಟರಲ್ಲಿ ಚಿಕ್ಕಲಿಂಗಪ್ಪನವರು ಅವಳ ಮನೆಯ ಎದುರಿಗೆ ಬಂದಿದ್ದರು.

" ಚಂದಾಕಿದೀಯ........ವ್ವ ?"

" ಹ್ಞೂ ಕಣಣ್ಣಯ್ಯ........ನಿಮ್ದು ಹಣ.... ಒಸಿ........"

" ಒಂದಷ್ಟು ನೀರು ಕೊಡು "

" ಒಳಕ್ಕೇ ಬರಬೋದಾಗಿತ್ತಲ್ಲ. ಜಗಲೀಮೇಲೇ ಕೂತ್ಕಂಡ್ರಿ "

" ಪರವಿಲ್ಲ, ಪರವಿಲ್ಲ ಬರವೇ ಅದಕ್ಕೇನಾ ?"

" ಕೊಟಗೆ ಗುಡಿಸಿಲ್ಲ. ಮನೆಒಳಗೆ ಕರೆಯಕ್ಕೆ ನಾಚತ್ತೆ "

" ಒಂಟ್ಟಿಂಗ್ಸು, ಪಾಪ ತಾಪತ್ರೆ ! ಇಲ್ಲೇ ತತ್ತ, ಓಯ್ತೀನಿ "

ಚಿಕ್ಕಲಿಂಗಪ್ಪನವರು ಏಳುವುದಕ್ಕೆ ಹೋದವರು ಏಳಲಿಲ್ಲ. ತಾಯಕ್ಕ ನೀರನ್ನು ಜಗಲಿಗೇ ತಂದುಕೊಟ್ಟಳು. ಕುಡಿದತಕ್ಷಣ ಪಟೇಲರು ಎದ್ದು ಹೊರಟರು. ತಾಯಕ್ಕನಿಗೆ ಸಾಲದ ಮಾತಾಡುವುದು ತಪ್ಪಿತು. ಚಿಕ್ಕ ಲಿಂಗಪ್ಪನವರು ಹೊರಟುಹೋದರು. ಅವಳು ನಿಟ್ಟುಸಿರು ಬಿಟ್ಟು ಒಳಕ್ಕೆ ನಡೆದಳು. ಜೋಳದಕಡ್ಡಿ ಕತ್ತರಿಸುವ ಕೆಲಸವಿತ್ತು. ಚಿಕ್ಕಲಿಂಗಪ್ಪನವರ ಸಾಲದ ಮಚ್ಚು ಅವಳ ಅಭಿಮಾನವನ್ನು ಕತ್ತರಿಸುತ್ತಿತ್ತು.

ಅವರು ಕಡ್ಡಾಯವಾಗಿ ಸಾಲವನ್ನು ಬಾಯಿಬಿಟ್ಟು ಕೇಳುತ್ತಿದ್ದರೆ ತಾಯಕ್ಕನಿಗೆ ನಿಜವಾಗಿಯೂ ಇಷ್ಟು ನೋವಾಗುತ್ತಿರಲಿಲ್ಲ. ಯಾವಾ ಗಲೋ ಒಂದುಬಾರಿ ಬಂದು ಮುಖ ತೋರಿಸಿ ಮೀಸೆ ತಿರುಗಿಸುತ್ತಿದ್ದರೇ ವಿನಃ ಹಣದ ಮಾತೆತ್ತುತ್ತಿರಲಿಲ್ಲ. ಅದರಮೇಲೆ ಅವರಿಗೆ ಸಂಬಂಧವಿ ಲ್ಲದ ಯೋಗಕ್ಷೇಮವನ್ನು ಕೇಳುವ ಅವರ ಹವ್ಯಾಸಕೂಡ ತಾಯಕ್ಕನಿಗೆ ನಿರ್ಮಲವಾಗಿ ತೋರಿಬರುತ್ತಿರಲಿಲ್ಲ.

ಆದಿನ ಸಾಯಂಕಾಲ ಇದನ್ನೇ ಯೋಚಿಸುತ್ತಾ ತಲೆ ಕೆರೆಯುತ್ತಿ ರುವಾಗ ತಲೆಯು ತೀರ ಸಿಕ್ಕಾಗಿ ಹೋಗಿದ್ದುದು ಗಮನಕ್ಕೆ ಬಂದು ಎಣ್ಣೆ

ಹಾಕಿ ಸಿಕ್ಕುಬಿಡಿಸಲು ಕುಳಿತಳು. ಏನೋ ಜ್ಞಾಪಕ ಬಂದು ಕನ್ನಡಿಯನ್ನೂ ಮುಖದೆದುರಿಗೆ ಹಿಡಿದುಕೊಂಡಳು. ಅದರಲ್ಲಿ ಚಿಕ್ಕಲಿಂಗಪ್ಪನವರ ಮೀಸೆಯ ಮುಖವೇ ಕಾಣಿಸಿದಂತಾಯಿತು. ಎಂದರೆ ಅವರ ಆ ಮುಖಭಂಗಿಯ ಕಾರಣ ಸಿಕ್ಕಿತು.

ತಾಯಕ್ಕನಿಗೆ ಇಪ್ಪತ್ತೊಂಭತ್ತು ವರ್ಷ. ಅದು ಅವಳಿಗೇ ತಿಳಿಯದು ಕನ್ನಡಿಯಲ್ಲಿ ಮಾತ್ರ ಅವಳಿಗೆ ತನ್ನ ಚಿಕ್ಕವಯಸ್ಸಿನ ಪ್ರತಿಫಲನ ಸಿಕ್ಕಿತು. ಈಚಿನ ಕಷ್ಟಗಳೂ, ದುಃಖಗಳೂ ಅವಳನ್ನು ಕೃಶಳನ್ನಾಗಿ ಮಾಡಿದ್ದರೂ ಅದೇಕೋ ಮುಖದ ಕಳೆ ಮಾಸಿಯೇ ಇರಲಿಲ್ಲ. ಕುಂಕುಮದ ಲಕ್ಷಣ ಶಾಶ್ವತವಾಗಿ ಹೊರಟುಹೋಗಿತ್ತು. ಕಿವಿಯಲ್ಲಿ ಓಲೆಗಳಿರಲಿಲ್ಲ. ಕೆನ್ನೆಯು ತುಂಬಿರಲಿಲ್ಲ. ಆದರೂ ಚಿಕ್ಕಬಾಯಿ, ಚೂಪಾದ ಮೂಗು, ತೆಳುವಾದ ತುಟಿಗಳು ತಮ್ಮ ಆಕರ್ಷಕತೆಯನ್ನು ಕಳೆದುಕೊಂಡಿರಲಿಲ್ಲ.

ಈ ವಿಷಯ ತಿಳಿದಮೇಲೆ ತಾಯಕ್ಕನ ಅಂತರಂಗದಲ್ಲಿ ಒಂದು ಭಯ ಬಂದು ಸೇರಿಕೊಂಡಿತು. ಇನ್ನೂ ಉಳಿದಿರುವ ತನ್ನ ಹಾಳು ಚಿಕ್ಕವಯಸ್ಸು ತನ್ನನ್ನು ಏನು ಮಾಡುವುದೋ ಎನ್ನಿಸಿತು. ಚಿಕ್ಕಲಿಂಗಪ್ಪನವರು ತಮಗೆ ಬರಬೇಕಾದ ಸಾಲವನ್ನು ಕೇಳದೇ ಹೋಗುತ್ತಿದ್ದುದು ಇದಕ್ಕಾಗಿಯೇ ಎಂದು ದೃಢವಾಯಿತು. ತಾಯಕ್ಕ ತಲೆ ಬಾಚುವ ಕೆಲಸವನ್ನು ಅಷ್ಟಕ್ಕೇ ಬಿಟ್ಟಿದ್ದಳು. ಒಂದೇ ದಿನದಲ್ಲಿ ಹುಳುಗಳನ್ನು ಹಣ್ಣುಮಾಡಿ ಗೂಡನ್ನು ಮಾರಿಬಿಡುವಳೋ ಏನೋ ಎನ್ನುವಷ್ಟು ರಭಸದಿಂದ ಎದ್ದು ಹುಳುಗಳಿಗೆ ಸೊಪ್ಪು ಕತ್ತರಿಸಿ ಹಾಕಿದಳು.

ಇಳಿಹೊತ್ತಿನಲ್ಲಿ ಬೀಧಿಯಲ್ಲಿ ಒಂದು ಪೀಪಿಯ ಶಬ್ದ ಕೇಳಿಸಿತು. ಅದು ಕ್ರಮೇಣ ಹತ್ತಿರಕ್ಕೆ ಬಂದಾಗ ಪುಟ್ಟತಾಯಿಯೂ 'ನಾವೊಸಿ ಊದ್ತೀನಿ ಕೊಡುಲೆ ಮಲ್ಲು' ಎಂದುದೂ ಕೇಳಿಸಿತು. ಪೀಪಿಯ ಶಬ್ದ ಮನೆಯೊಳಕ್ಕೇ ನುಗ್ಗಿತು. ಮಲ್ಲೇಶನೊಡನೆ ಪುಟ್ಟತಾಯಿ ಎಮ್ಮೆ ಇಬ್ಬರೂ ಬಂದರು.

'ಅವ್ವ, ನೋಡವ್ವ. ನಾನೊಂದ್ಸತಿ ಊದ್ಕೋಡ್ತೀನಿ ಕೊಡು ಅಂದ್ರೆ ನೋಡವ್ವ'

'ಅದೇನಾ ಮಲ್ಲು ಅದು ಕಿವಿ ಚಿಟ್ಟಂತದೆ ಸಾಕು ನಿಲ್ಸುಪೀಪಿಯ'

'ನಾನೊಂದ್ಸತಿ ಕಣವ್ವ'

'ಅವನ್ನೇ ನಿಲ್ಸು ಅಂತಾ ಇದೀನಿ. ಇವ್ನೊಂದು ಸತೀ ಅಂತೆ. ಕಟ್ಟಾಕೂ ಓಗೇ ಎಮ್ಮೇನಾ'

'ಪೀ....ಪೀ....ಪಿಪ್ಪಿಪಿ ಪಿಪ್ಪಿಪ್ಪಿ....ಪೀೕ'

'ಥೂ ಅನಿಷ್ಟವೇ—ಮಲ್ಲು....ಎಲ್ತಕಂಡೆಯೋ ಅದ್ನ. ಎಷ್ಟೊ ಅದಕ್ಕೆ....?'

'ಎಳ್ಡಾಣೆ'

'ಎಳ್ಡಾಣೆ ಎಲ್ಲಿತ್ತು!'

'ಚಿಲ್ಲಿಂಗಪ್ಪಜಿ ಕೊಟ್ಟಿದ್ದರು.'

ತಾಯಕ್ಕ ಮಾತು ನಿಲ್ಲಿಸಿದಳು. ಪೀಪಿಯ ಶಬ್ದಕ್ಕಿಂತ ಆ ಮಾತು ಅವಳ ಕಿವಿಯನ್ನು ಹೆಚ್ಚು ಬೇಸರಪಡಿಸಿತು. 'ಸಿಕ್ದೋರಕ್ಕೈಲಿ ಅಂಗೆಲ್ಲ ಕಾಸೂ, ತಿಂಡಿ ಈಸ್ಕಬಾರ್ದು' ಎಂದು ವ್ಯರ್ಥವಾಗಿ ಒಂದುಸರ್ತಿ ಮಗನಿಗೆ ಹೇಳಿದಳು. ಅದು ಅವನ ಕಿವಿಗೆ ಎಳ್ಳಷ್ಟೂ ಬೀಳಲಿಲ್ಲ. ಪೀಪಿಯಗಲಾಟೆ! ಎಷ್ಟು ಬೇಗ ಕೋಟು ಪುಸ್ತಕಗಳನ್ನು ತೆಗೆದಿಟ್ಟನೋ ಮಲ್ಲೇಶ ಮರುಕ್ಷಣ ಬೀದಿಗೆ ಹಾರಿದ್ದನು.

ಚಿಕ್ಕಲಿಂಗಪ್ಪನವರ ಎರಡಾಣೆ, ಅದರಿಂದ ಬಂದ ಪೀಪಿ, ಈ ಎರಡರ ಮೇಲಿನ ಕೋಪವನ್ನು ತಾಯಕ್ಕ ಪುಟ್ಟತಾಯಿಯಮೇಲೆ ತೀರಿಸಿ ಕೊಂಡಳು. ಸೂರ್ಯನು ಇನ್ನೂ ಅರ್ಧಂಬರ್ಧ ಭೂಮಿಯಮೇಲೇ ಇದ್ದುದರಿಂದ ಹಿಪ್ಪನೇರಳೇಸೊಪ್ಪನ್ನು ಊರಿತರುವ ಕೆಲಸವನ್ನು ಮಗಳಿಗೆ ಹೇಳಿದಳು. ಕೆರೆಯ ಮಧ್ಯೆ ಬಿದ್ದಿದ್ದ ಎಮ್ಮೆಯನ್ನು ಹೊರಕ್ಕೆ ಹೊರಡಿಸಿ ಕೊಂಡುಬರುವುದರಲ್ಲಿ ಸುಸ್ತಾವಸ್ಥೆಯಾಗಿದ್ದ ಪುಟ್ಟತಾಯಿ ಆಗುವುದಿಲ್ಲವೆಂದಳು. ಅವ್ವ ರೇಗಾಡಿದಳು. ಯಾವ ಬೈಗುಳಿಗೂ ಆ ಎಮ್ಮೆಯ ಗೆಳತಿ ಜಗ್ಗಲೇ ಇಲ್ಲ.

ತಾಯಕ್ಕನೇ ತೆಂಗಿನಗರಿಯ ಬುಟ್ಟಿಯನ್ನು ಹಿಡಿದು ಹೊರಟಳು. ದಾರಿಯೇ ಕೆಂಪಾಗಿತ್ತು. ಜೊತೆಗೆ ಕೆಂಪುಬಿಸಿಲು. ಅದರಮೇಲೆ ತಾಯ

ಕ್ಕನ ಹತ್ತುಮಾರುದ್ದದ ನೆರಳು. ಬೇಗಬೇಗ ಹೊಲವನ್ನು ತಲುಪಿದಳು. ಸಂಜೆಯಲ್ಲಿ ಕಾವು ಕಡಿಮೆಯಾಗುತ್ತಿತ್ತು. ಆಕಾಶದಲ್ಲಿ ಅಚ್ಚ ಕೆಂಪು ಮೋಡಗಳು ಸೂರ್ಯನನ್ನು ಕೆಳಕ್ಕೆ ಒತ್ತುತ್ತಿದ್ದವು. ಬಯಲಿನ ಹಕ್ಕಿಗಳಂತೆಯೇ, ಊರಿನ ಜನಗಳು ದೂರಕ್ಕೆ ಚಿಲಿಪಿಲಿಗುಟ್ಟುತ್ತಿದ್ದರು. ಗಾಳಿ ಎಲ್ಲೋ ದೇಶಾಂತರಹೋಗಿತ್ತು. ಘಳಿಗೆಘಳಿಗೆಗೂ ಬೆಳಕು ಕಳೆಗುಂದುತ್ತಿತ್ತು. ತಾಯಕ್ಕ ಬೇಗಬೇಗ ಸೊಪ್ಪುರಿಕೊಳ್ಳುತ್ತಿದ್ದಳು. ಆದರೂ ಬುಟ್ಟಿ ತುಂಬುವುದರೊಳಗೆ ಕತ್ತಲಾಗಿಯೇಹೋಯಿತು. ಕತ್ತಲೆಯಿಂದ ಕೆಲಸಕ್ಕೇನೂ ಅಡ್ಡಿಯಿರಲಿಲ್ಲ. ಕೈಗಳು ಸೊಪ್ಪನ್ನು ' ತರೆದು 'ಕೊಂಡು ತುಂಬುತ್ತಿದ್ದವು.

ಕೆರೆಯಕಡೆಗೆ ಬಂದಿದ್ದ ಯಾರೋ ಒಬ್ಬರು ಇದನ್ನು ನೋಡುತ್ತ ತನ್ನ ಕಡೆಗೇ ಬರುತ್ತಿರುವುದನ್ನು ತಾಯಕ್ಕ ಗಮನಿಸಿದಳು. ಬಂದವನು ಹೊಲಕ್ಕೇ ನುಗ್ಗಿದನು. ತಾಯಕ್ಕ ಸರಿಯಾಗಿ ಒಂದು ಬಾರಿ ಕತ್ತೆತ್ತಿ ನೋಡಿದಳು. ಗುರುತು ಸಿಕ್ಕಲಿಲ್ಲ. ಹಳ್ಳಿಯವರಿಗೆ ಪ್ರತಿಯೊಬ್ಬರಿಗೂ ಪ್ರತಿಯೊಬ್ಬರ ಪರಿಚಯವೂ ಇರುತ್ತದೆ. ಕತ್ತಲಲ್ಲೂ ಗುರುತು ಸಿಕ್ಕುತ್ತದೆ. ಅದರಲ್ಲಿ ಗಂಡಸರಿಗೆ ಎಲ್ಲಾ ಹೆಂಗಸರ ಪರಿಚಯವೂ ಇಲ್ಲದಿರಬಹುದು ಆದರೆ ಹೆಂಗಸರಿಗೆ ಎಲ್ಲಾ ಗಂಡಸರ ಪರಿಚಯವೂ ಇರುತ್ತದೆ. ಈತ ಯಾರೋ ಊರಿಗೆ ಹೊಸಬನಾಗಿರಬೇಕು. ಆದರೆ ಇನ್ನೊಬ್ಬರ ಹೊಲಕ್ಕೆ ನುಗ್ಗುವ ರೀತಿಯಲ್ಲಿ ಹೊಸತನವಿರಲಿಲ್ಲ. ತಾಯಕ್ಕ ತನ್ನಪಾಡಿಗೆ ತಾನು ಕೆಲಸಕ್ಕೆ ತೊಡಗಿದಳು: ಮಾತನಾಡಲಿಲ್ಲ. ಬಂದವನೇ ಕೂಗಿದ.

" ಯಾರಾ—ಅದು ?"

"....................''

" ಯಾರಮ್ಮ ಅದು ?''

"....................''

" ಏ ! ಬಾಯಿಲ್ವ ?....ಕದ್ದು ಸೊಪ್ಪುರ್ತಾ ಇದ್ದೆಯೋ ಹೆಂಗೆ ?"

'' ಒಲ ನಮ್ಮದೇಕಣಪ್ಪ''

" ಜೊತೆಗ್ಯಾರೂ ಇಲ್ಲ ?"

"ಯಾರೂ ಇಲ್ಲ—ನಾವು ಬಸಲಿಂಗಪ್ಪನ ಸಿದ್ದಪ್ಪನ ಹಟ್ಟಿಯೋರು"

" ಅಂಗಾ! ಆ ಮೂಡಬಾಗಿಲ ಗಾರೇ ಪಡಸಾಲೆ ಹಟ್ಟಿ ?"

- " ಊ "

" ಹೆಹೆಹೆ....ಗೊತ್ತಾಗ್ನಿಲ್ಲ....ನಾನು ಊರಿಗೆ ಹೊಸಬ. ಇದ್ಯಾರಪ್ಪ ಒಂಟಿಯಾಗಿ ಇಷ್ಟೊತ್ನಲ್ಲಿ ಅಂತ........ಓಗ್ಲಾ ?"

" ಊ "

ಬಂದಿದ್ದವನು ಹೊರಟುಹೋದನು. ಬುಟ್ಟಿ ತುಂಬಿದ್ದರೂ ಅವನು ಹೊರಟುಹೋಗಲಿ ಎಂದು ತಾಯಕ್ಕ ಬಹಳಹೊತ್ತು ತಡಮಾಡಿದಳು. ಅವನ ದಿಟ್ಟತನ ಅವಳನ್ನು ಗಾಬರಿಪಡಿಸಿತ್ತು. ಅವನ " ಹೆಹೆಹೆ........ ಓಗ್ಲಾ ?" ಎಂಬ ಮಾತು ಅಸಹ್ಯಪಡಿಸಿತ್ತು. "ಸೀತಿಗೆಟ್ಟ ಮೂದೇವ್ಗೊಳು" ಎಂದು ಬೈದುಕೊಂಡು ತಾಯಕ್ಕ ಊರಕಡೆ ಹೊರಟಳು.

ಎಲ್ಲಿಗೋ ಹೋಗಿದ್ದ ಗಾಳಿ ಆಗ ಆ ಊರಕಡೆ ಬಂತು. ತಾಯಕ್ಕನಿಗೆ ಹಾಯೆನಿಸಿತು. ನಿಧಾನವಾಗಿ ದಾರಿಗುಂಟ ನಡೆದಳು. ಊರಿನಲ್ಲಾಗಲೇ ರಾತ್ರಿಯಾಗಿತ್ತು. ಅವಳು ಅರ್ಧ ದಾರಿ ಕಳೆದಾಗಲೇ ಊರಿನಲ್ಲಿ ಕೊಂಚ ಗದ್ದಲವಾಗುತ್ತಿದ್ದುದು ಕೇಳಿಸಿತು. ಜಗಳವಿರಬಹುದೆನ್ನಿಸಿತು. ಆದರೆ ಮರುಕ್ಷಣವೇ ' ಹಾರ್ಮೋನಿಯಂ ' ಶಬ್ದ ಅದನ್ನು ಮೀರಿಸಿ ಹರಿದು ಬಂತು. ಜೊತೆಗೆ ಯಾರದೋ ಹಾಡು. ' ರಾಮ ಜಯತು ಶ್ರೀರಾಮ ಸುನಾಮ '. ಕಿವಿಗೆ ಹಾಡು ಬಲು ಚೆನ್ನಾಗಿತ್ತು. ತಾಯಕ್ಕನಿಗೂ ಆ ಹಾಡು ಸ್ವಲ್ಪ ಬರುತ್ತಿತ್ತು. ಅದನ್ನು ಕುರುಕಿಕೊಳ್ಳುತ್ತಾ ಮನೆಗೆ ನಡೆದಳು.

ಕಿರೀಕಾಟಿ ಗ್ರಾಮದಲ್ಲಿ ಹಾರ್ಮೋನಿಯಂ ಕೇಳಿದುದು ತಾಯಕ್ಕ ಇದೇ ಮೊದಲು. ಊರಿನವರು ನಾಟಕ ಕಲಿಯಲು ಮನಸ್ಸುಮಾಡಿರಬಹುದೆಂದು ತಾಯಕ್ಕ ಊಹಿಸಿದಳು. ಮನೆಗೆ ಹೋದಮೇಲೆ ಅದು ನಿಜವೆಂದಾಯಿತು. ಪುಟ್ಟತಾಯಿ ಮಲ್ಲೇಶ ಇಬ್ಬರೂ ಮನೆಯಲ್ಲಿ ಕಾಣಲಿಲ್ಲ ಹುಡುಗರೊಡನೇ ಪುಟ್ಟತಾಯಿಯೂ ಸೇರಿಕೊಂಡು ಮನೆಯ ಬಾಗಿಲನ್ನು ಮುಂದಕ್ಕೆಳೆದುಕೊಂಡು ' ಪಾಟದ ಮನೆ ' ಕಡೆ ಹೊರಟುಹೋಗಿದ್ದಳು ಕತ್ತರಿಸಿದ್ದ ಕಡ್ಡಿಯನ್ನೂ ಸರಿಯಾಗಿ ಎಮ್ಮೆಯಮುಂದಕ್ಕೆ ಹಾಕಿರಲಿಲ್ಲ.

'ಚರಣಿಗೆ'ಯಲ್ಲಿದ್ದುದನ್ನು ಮುಗಿಸಿ, ಎಮ್ಮೆ ಕಡ್ಡಿಯ ಗುಡ್ಡೆಯನ್ನೇ ನೋಡುತ್ತ ನಿಂತಿತ್ತು. ಹಚ್ಚಿದ್ದ ಸೀಮೆಣ್ಣೆಬುಡ್ಡಿ ಗಾಳಿಗೆ ಆರಿಹೋಗಿತ್ತು.

ಗೊಣಗುತ್ತಾ ತಡವರಿಸುತ್ತಾ ತಾಯಕ್ಕ ಕಡ್ಡಿಪೆಟ್ಟಿಗೆಯನ್ನು ಹುಡುಕಿ ಬುಡ್ಡಿಯನ್ನು ಹತ್ತಿಸಿಕೊಂಡಳು. ಎಮ್ಮೆ ಅವಳನ್ನು ಕರೆಯಿತು.



೩

ಮಲ್ಲೇಶ—ರಾಜಕುಮಾರ. ಅವನಿಗೆ ಯಾವ ತಾಪತ್ರಯಗಳೂ ಇರಲಿಲ್ಲ. ಬೆಳಿಗ್ಗೆ ಅವನು ಏಳುತ್ತಿದ್ದುದೇ ಹೊತ್ತು ಎರಡು ಮಾರು ಮೇಲೆದ್ದಮೇಲೆ. ಎದ್ದು ಮೊಸರು ಜೋಳದಹಿಟ್ಟು ಹೊಡೆದು, ಬೀದಿ ಅಲೆಯಲು ಹೊರಟರೆ ಸ್ಕೂಲಿಗೆ ಹೋಗುವಹೊತ್ತು ಬರುವವರೆಗೂ ಅತಂಕ ವಿಲ್ಲ. ತಮ್ಮೂರು ಸ್ಕೂಲಿನ ಮೇಷ್ಟ್ರುಮಗ ಚಿದಂಬರ, ಕೊದಲು ಸಿದ್ದಯ್ಯನ ಮಗ ಹುಚ್ಚ ಇಬ್ಬರೂ ಅವನಿದ್ದಕಡೆಗೆ ಬಂದು ಹೊತ್ತಾಯಿತೆಂದು ಪೀಡಿಸು ತ್ತಿದ್ದರು. ಅವರಿಬ್ಬರೂ ಪುಸ್ತಕಗಳೊಡನೆ ಸ್ಕೂಲಿಗೆ ಸಿದ್ಧರಾಗಿಯೇ ಬರು ತ್ತಿದ್ದರು. ಆಗ ಮಲ್ಲೇಶ ಮನೆಗೆ ಹೋಗಿ ಪುನಃ ಬಲವಂತದಿಂದ ಎರಡು ತುತ್ತು ಹೆಚ್ಚಾಗಿ ಉಂಡು, ಅಲಂಕಾರ ಮಾಡಿಕೊಂಡು ಹೊರಡುತ್ತಿದ್ದ. ಚಿದಂಬರ, ಹುಚ್ಚ ಇಬ್ಬರೂ ಇವನನ್ನು ಬಿಟ್ಟುಹೋಗುತ್ತಿರಲಿಲ್ಲ ಏಕೆಂದರೆ ಮಲ್ಲೇಶನೇ ಮೂವರಲ್ಲಿ ಧೈರ್ಯಶಾಲಿ.

ಎರಡು ಮೈಲಿ ದೂರದಲ್ಲಿದ್ದ ತಾಲ್ಲೋಕಿನ ಊರಿಗೆ ಸುಮಾರು ಒಂಭತ್ತು ಗಂಟೆಗೆ ಹೊರಟರೆ ಅವರು ಸರಿಯಾಗಿ ಹನ್ನೊಂದು ಗಂಟೆಗೆ ಸ್ಕೂಲಿಗೆ ತಲುಪಬಹುದಾಗಿತ್ತು. ಓಣಿಗುಂಟೆ ಹಾಡುತ್ತ, ಒಳಗೆರೆಯ ಬಯಲಿನಲ್ಲಿ ದನಗಳನ್ನು ಗೋಳುಹುಯ್ದುಕೊಳ್ಳುತ್ತಾ, ಹೊಲಗಳ ಮಧ್ಯೆ ಬೆಳೆಗಳನ್ನು ತುಳಿಯುತ್ತಾ ಹೋದರೆ ಒಂದು ದೊಡ್ಡ ಈಚಲ ತೋಪು ಸಿಕ್ಕುವುದು. ಅಲ್ಲಿ ಈಚಲಹಣ್ಣು ಸಿಕ್ಕುವುದು. ಈಚಲಹಣ್ಣು ಖರ್ಜೂರಕ್ಕೆ ಯಾವ ವಿಧದಲ್ಲೂ ಕಡಿಮೆಯಲ್ಲ. ಬೀಜ ಎರಡರದ್ದೂ ಒಂದೇತರಹ. ಆದರೂ ಚಿದಂಬರ ಮಾತ್ರ ಒಂದು ದಿನವೂ ಈಚಲಹಣ್ಣನ್ನು ತಿಂದವನಲ್ಲ. ಹೆಂಡವನ್ನು ಕಂಡಷ್ಟು ಹೆದರುತ್ತಿದ್ದನು. ಹುಚ್ಚ, ಮಲ್ಲೇಶ ಇಬ್ಬರೂ ಬೇಕಾದಷ್ಟು ತಿಂದು ಮುಗಿದಮೇಲೆ ಮುಂದಕ್ಕೆ ಹೊರಡುತ್ತಿದ್ದರು. ಮಲ್ಲೇಶ ಎಷ್ಟು ಹೊತ್ತಿಗೆ ಹೋದರೆ ಇವರಿಬ್ಬರೂ ಅಷ್ಟೇಹೊತ್ತಿಗೆ ಕ್ಲಾಸಿಗೆ ಹೋಗಬೇಕು ಏಕೆಂದರೆ ಅವನನ್ನು ಹಿಂದೆ ಬಿಟ್ಟು ಅವರೆಂದೂ ಮುಂದೆ ಹೋಗುವ ಧಾರ್ಷ್ಟಿಕೆಯವರಲ್ಲ.

ಸ್ಕೂಲನ್ನು ಸೇರಿದ ಬಳಿಕ ಸಂಗತಿಯೇ ಬೇರೆ. ಚಿದಂಬರ ಮುಂದಿನ ಬೆಂಚಿನ ಹುಡುಗರೊಡನೆ ಸೇರಿಕೊಳ್ಳುತ್ತಿದ್ದನು. ಹುಚ್ಚ ಯಾವಾಗಲೂ ಹೊರಗೆ ಹೋಗುವ ಬಾಗಿಲಿಗೆ ಹತ್ತಿರದಲ್ಲೇ ಕುಳಿತುಕೊಳ್ಳುತ್ತಿದ್ದುದು. ಮಲ್ಲೇಶ ಇಂತಹ ಕಡೆಯೇ ಎಂದಿಲ್ಲ. ಮುಂದಿನ ಬೆಂಚಲ್ಲಿ ಮಾತ್ರ ಇಲ್ಲ. ಮೇಷ್ಟ್ರುಗಳು ಒಬ್ಬೊಬ್ಬರಾಗಿ ಬಂದುಹೋಗುತ್ತಿದ್ದರು ಹುಚ್ಚನಿಗೆ ಅವನ ಮಂಕುಬುದ್ಧಿಯೇ ಗಡಿಯಾರವನ್ನು ನೋಡಿ ಗಂಟೆ ತಿಳಿದುಕೊಳ್ಳುವುದನ್ನು ಕಲಿಸಿತ್ತು. ಅವನಿಗೆ ಬಾಗಿಲಮೂಲಕ ಹೆಡ್ಮಾಸ್ಟರ ರೂಮಿನಲ್ಲಿದ್ದ ಗಡಿಯಾರ ವನ್ನು ನೋಡುವುದೇ ಕೆಲಸ. ಅವನೇ ಕ್ಲಾಸಿನ ಎಲ್ಲಾ ಹುಡುಗರಿಗೂ ಕಣ್ಣು ಸನ್ನೆಯಿಂದ ಕೈಬೆರಳುಗಳಿಂದ ಗಂಟೆಯನ್ನು ಆಗಾಗ್ಗೆ ತಿಳಿಸುತ್ತಿದ್ದ ವನು. 'ಬೆಲ್ಲಾ'ದ ತಕ್ಷಣ ಎಲ್ಲರಿಗಿಂತ ಮೊದಲು ಸ್ಕೂಲಿನಿಂದ ಹೊರ ಗಿರುತ್ತಿದ್ದವನು ಹುಚ್ಚ. ಆಮೇಲೆ ಚಿದಂಬರ ಬಂದು ಅವನನ್ನು ಸೇರಿ ಕೊಳ್ಳುತ್ತಿದ್ದನು. ಆದಿನ ಹುಡುಗರಲ್ಲಿ ಉದ್ಭವವಾದ ಎಲ್ಲಾ ಸಮಸ್ಯೆ, ವ್ಯವಹಾರಗಳನ್ನು ವಿವೇಚಿಸಿದನಂತರವೇ ಮಲ್ಲೇಶ ಅವರಿಗೆ ಮುಖ ತೋರಿ ಸುತ್ತಿದ್ದುದು.

ಪುನಃ ಅವರಿಬ್ಬರೂ ಇವನ ಆಶ್ರಯದಲ್ಲಿ ಊರಿಗೆ ಹೊರಡುವರು. ಇವನು ಹೇಳಿದ ಬೀದಿಗಳ ಮೂಲಕವೇ ನಡೆದು, ಇವನು ಹೊಸದಾಗಿ ಮಾಡುವ ಹೊಲಗಳ ಬೇಲಿಯ 'ಕನ್ನ'ಗಳಲ್ಲೇ ಹಾಯ್ದು ಅವನು ಅವ ರಿವರಿಂದ ತಿನ್ನುವ ಬೈಗುಳನ್ನು ತಾವೂ ಹಂಚಿಕೊಂಡು ತಿಂದು ಊರನ್ನು ಸೇರುವಹೊತ್ತಿಗೆ ಸೂರ್ಯನೂ ತನ್ನ ಮನೆ ಸೇರಿಕೊಂಡಿರುತ್ತಿದ್ದನು.

ತಾಯಂದಿರು ಪೀಡಿಸಿ ಕರೆಯುವವರೆಗೂ ಆಡುತ್ತಿದ್ದು ಅನಂತರ ಊಟಮಾಡುವ ಹೊತ್ತಿಗೆ ಮಲಗುವ ಮನಸ್ಸಾಗುತ್ತಿತ್ತು. ಆದಿನ ಅಲ್ಲಿಗೆ ಮುಗಿಯಿತು. ಎಂದರೆ ಓದುವುದೊಂದನ್ನು ಬಿಟ್ಟು ಮಲ್ಲೇಶನ ಮಿಕ್ಕ ಚಲನವಲನವನ್ನು ಹೇಳಿದಂತಾಯಿತು. ಓದುಬರಹ ಅವನೇ ಬಿಟ್ಟಿದ್ದ ವಿಷಯ. ಯಾವ ಮಹಾ ದೊಡ್ಡ ಓದು ಎಂದು ತಾಯಿಯೂ ಸುಮ್ಮನಿರು ತ್ತಿದ್ದಳು

ಕಿರೀಕಾಟೆಯಲ್ಲಿ ರಾತ್ರಿಯಹೊತ್ತು ಹಾರ್ಮೋನಿಯಂ ಶಬ್ದವಾದ ಲಾಗಾಯ್ತು ಮಲ್ಲೇಶನ ದಿನಚರಿಯಲ್ಲಿ ಸ್ವಲ್ಪ ಬದಲಾವಣೆಯಾಯಿತು ರಾತ್ರಿ ಊಟವಾದಮೇಲೆ ' ಪಾಟದಮನೆಗೆ ' ಹೋಗಿ ನಿದ್ದೆ ಬರುವವರೆಗೂ ಇದ್ದು ಬರುವ ಒಂದು ' ಪಾಟ 'ವಾಯಿತು ಸ್ವಲ್ಪ ದಿನವಾದಮೇಲೆ ಆಟದ ಅಭ್ಯಾಸವನ್ನು ನೋಡುತ್ತಲೇ ಇದ್ದು ಅಲ್ಲಿಯೇ ಮಲಗಿಬಿಡುತ್ತಿದ್ದನು. ಬಹಳ ಹೊತ್ತಾದಮೇಲೆ ತಾಯಕ್ಕನೇ ಹೋಗಿ ಅವನನ್ನು ಯಾರ ಕೈಲಾದರೂ ಏಳಿಸಿ ಹೊರಕ್ಕೆ ಕರೆಸಿಕೊಂಡು ಮನೆಗೆ ಕರೆದುತರುತ್ತಿದ್ದಳು. ಅಷ್ಟು ದೊಡ್ಡ ಮಗನನ್ನು ಒಮ್ಮೊಮ್ಮೆ ಹೆಗಲಮೇಲೆ ಹಾಕಿಕೊಂಡು ಬರುತ್ತಿದ್ದುದೂ ಉಂಟು

ಹಾಗಾಗುತ್ತಿದ್ದುದರಿಂದ ಮಲ್ಲೇಶ ಬೆಳಿಗ್ಗೆಹೊತ್ತು ಏಳುವುದಕ್ಕೆ ಮೊಂಡತನ ಮಾಡುತ್ತಿದ್ದನು. ಸ್ಕೂಲಿಗೆ ಹೋಗುವ ಸಮಯಕ್ಕೆಎದ್ದರೂ ಎದ್ದನೆ. ಪ್ರತಿದಿನ ಹೀಗೇ ಆಗುತ್ತಿದ್ದರೆ ,ಇವನಿಗೋಸ್ಕರ ಕಾಯುವುದಕ್ಕಾಗುವುದೇ ? ಚಿದಂಬರ, ಹುಚ್ಚರ ಪೈಕಿ ಹುಚ್ಚನಿಗೇ ಸ್ವಲ್ಪಸ್ವಲ್ಪ ಧೈರ್ಯ ಬರಲಾರಂಭಿಸಿತು ಅವನೇ ಚಿದಂಬರನಿಗೆ ಮಾರ್ಗದರ್ಶಕನಾಗಿ ನಿಂತನು. ಮಲ್ಲೇಶ ಬರುವುದು ಬಹಳ ಹೊತ್ತಾಗುವಂತೆ ತೋರಿದರೆ ಅವರಿಬ್ಬರೇ ಹೊರಟುಬಿಡುತ್ತಿದ್ದರು. ಮಗ ಒಬ್ಬನೇ ಹೋಗುವುದನ್ನು ಸಹಿಸದೇ ತಾಯಕ್ಕ ಒಂದೊಂದುದಿನ ಅವನಿಗೆ ಸ್ಕೂಲನ್ನು ತಪ್ಪಿಸಿಯೇಬಿಡುತ್ತಿದ್ದಳು.

ವಿದ್ಯಾಭ್ಯಾಸದ ವಿಷಯವೊಂದುಕಡೆಯಿರಲಿ ಮಿಕ್ಕಿತರ ಹವ್ಯಾಸಗಳಿಗೆ ಹೊಂದಿಕೊಂಡಿದ್ದ ಮಲ್ಲೇಶನಿಗೆ ಸ್ಕೂಲನ್ನು ಬಿಟ್ಟಿರಲಾಗುತ್ತಿರಲಿಲ್ಲ. ಅವನು ಹಟಮಾಡಿ ಒಬ್ಬನೇ ಹೊರಟುಬಿಡುತ್ತಿದ್ದನು. ಚಿದಂಬರ, ಹುಚ್ಚ ಇಬ್ಬರೂ ಇನ್ನೂ ಹೋಗಿಯೇ ಇಲ್ಲವೆಂದು ತಾಯಿಗೆ ಸುಳ್ಳುಹೇಳಿ ಒಂಟಿಯಾಗಿ ಹೊರಟುಹೋಗುತ್ತಿದ್ದನು. ದಾರಿ ಕಳೆಯಲು ಉದ್ದಕ್ಕೂ ನಾಟಕದ ಹಾಡುಗಳು ಅವುಗಳೇ ಅವನ ಜೊತೆಗಾರರು.

ಸ್ಕೂಲಿಗೆ ತಲುಪುವ ಹೊತ್ತಿಗೆ ಹೊತ್ತುಮೀರಿ ಹೋಗಿರುತ್ತಿತ್ತು, ಹಳ್ಳಿಗಳಿಂದ ಬರುವ ಹುಡುಗರಿಗೆ ಸ್ವಲ್ಪ ವಿನಾಯಿತಿಯೇನೋ ಉಂಟು. ಆದರೆ ಅದೇ ಊರಿನ ಮಿಕ್ಕ ಹುಡುಗರು ಹೊತ್ತಿಗೆ ಸರಿಯಾಗಿ ಬಂದು

ಒಬ್ಬನೇ ಒಬ್ಬ ದಿನವಹಿ ತಡವಾದರೆ ಮೇಷ್ಟ್ರು ಎಷ್ಟು ದಿನ ಸುಮ್ಮನಿದ್ದಾರು. ಹೇಳುವಷ್ಟು ದಿನ ಹೇಳಿ ಒಂದುದಿನ ಮಲ್ಲೇಶನನ್ನು ಕ್ಲಾಸಿಗೆ ಸೇರಿಸಿಕೊಳ್ಳ ಲೇ ಇಲ್ಲ.

ಮಲ್ಲೇಶನಿಗೆ ಮಂಕು ಕವಿಯಿತು, ಒಬ್ಬನೇ ಸ್ಕೂಲಿನ ಹಿಂದಿದ್ದ ಬೇಲದಮರದ ಬುಡಕ್ಕೆ ಹೋಗಿ ಕುಳಿತನು. ಜೊತೆಯಲ್ಲಿ ಹುಚ್ಚ, ಚಿದಂ ಬರರಿದ್ದಾಗ ಹಾರಾಡುತ್ತಿದ್ದ ಅವನ ಕೈಕಾಲುಗಳು ಸುಮ್ಮನೆ ಮುದುರಿ ಕೊಂಡಿದ್ದವು. ಎಲ್ಲಿ ಅಲೆಯುವುದಕ್ಕೂ ಮನಸ್ಸು ಆಸ್ಪದ ಕೊಡುತ್ತಿರಲಿಲ್ಲ. ಕ್ಲಾಸಿನೊಳಗಿದ್ದ ಚಿದಂಬರ, ಹುಚ್ಚರಮೇಲೆ ಮಲ್ಲೇಶನಿಗೆ ಹೊಟ್ಟೆಕಿಚ್ಚು ಬಂದಿತು. ಅವರಿಬ್ಬರ ಮೇಲೆಯೇ ಏನು, ಒಟ್ಟು ಸ್ಕೂಲಿನಮೇಲೆಯೆ !

ಬೇಲದಮರದ ಬುಡದಲ್ಲಿಯೇ ಎರಡು ಪೀರಿಯಡ್ಡುಗಳ 'ಬೆಲ್ಲೂ' ಕೇಳಿಸಿತು, ಎದ್ದು ಊರಿಗೇ ಹೊರಟುಬಿಡಬೇಕೆನ್ನಿಸಿತು, ಅಷ್ಟರಲ್ಲಿ ಅಲ್ಲಿಗೆ ಮೂರು ಜನ ಹುಡುಗರು ಬಂದರು. ಅವನು ಕುಳಿತಿದ್ದ ಬಳಿಯ ಲ್ಲಿಯೇ ಮರಕ್ಕೆ ಸೇರಿದಹಾಗೆಯೇ ಗೀರುಹಾಕಿ ಬದ್ದುಗಳನ್ನು ಮಾಡಿದ್ದ 'ಮೀರಿ'ಯಿತ್ತು. ಬಂದ ಹುಡುಗಳು ಮೂರು ಗೋಲಿಗಳನ್ನು ತಂದಿದ್ದರು. ಆಟಕ್ಕೆ ಪ್ರಾರಂಭವಾಯಿತು. ಮಲ್ಲೇಶ ಅದನ್ನೇ ನೋಡುತ್ತ ಕುಳಿತ. ಅವರೂ ಸ್ಕೂಲಿಗೆ ಹೋಗದೆ ಇದ್ದ ಹುಡುಗರು ಅವರ ಬಳಿಯಲ್ಲೂ ಪುಸ್ತಕ ಟೋಪಿಗಳಿದ್ದವು. ಅವನಿಗೆ ಎಷ್ಟೋ ಧೈರ್ಯ.

ಹುಚ್ಚನಿಗೆ ಇನ್ನು ಸುಮ್ಮನಿರಲಾಗಲಿಲ್ಲ. ಎದ್ದು ಮೇಷ್ಟ್ರಿಗೆ ಮಲ್ಲೇ ಶನ ವಿಷಯವನ್ನು ಹೇಳಿಕೊಂಡನು. ಆ ಪಿರಿಯಡ್ಡಿನ ಮೇಷ್ಟ್ರಿಗೆ ಕಿರಿಕಾಟಿ ಗ್ರಾಮದಲ್ಲಿ ಆಪ್ತರೊಬ್ಬರಿದ್ದರು. ಅದರವಾತ್ಸಲ್ಯದ ಮೇಲೆ ಆ ಊರಿನ ಹುಡುಗನಾದ ಮಲ್ಲೇಶನ ಮೇಲೆ ದಯೆ ಬಂದಿತು. ಅವನನ್ನು ಕರೆತರು ವಂತೆ ಹುಚ್ಚನಿಗೆ ಆಜ್ಞೆಯಾಯಿತು.

ಹುಚ್ಚನಿಗೆ ಬೇಲದ ಮರದ ಪ್ರಾಧಾನ್ಯತೆ ಗೊತ್ತು. ಅಲ್ಲಿ ಮಲ್ಲೇಶ ಇರುವುದು ಅವನಿಗೆ ಖಂಡಿತವಾಗಿತ್ತು. ಆದರೆ ಅಲ್ಲಿಗೆ ಹೋಗಿ ನೋಡಿ ದಾಗ ಮಲ್ಲೇಶ ಇರಲಿಲ್ಲ. ಹಾಗೆಯೇ ಅಲ್ಲಿ ಇಲ್ಲಿ ನೋಡಿ ಕ್ಲಾಸಿಗೆ ಹಿಂತಿ ರುಗಿ ಅವನಿಲ್ಲದ ವಿಷಯವನ್ನು ಹೇಳಿ ಕುಳಿತುಕೊಂಡನು.

ಮಲ್ಲೇಶ ಊರಿಗೆ ಹೋಗಲಿಲ್ಲ. ಬೇಲದ ಮರದ ಬಳಿ ಸಂಧಿಸಿದ ಹುಡುಗರಲ್ಲಿ ಅವನಿಗೆ ಸ್ನೇಹಬೆಳೆಯಿತು. ಅವರು ಮೇಷ್ಟರುಗಳನ್ನು ಬಯ್ದುದ್ದು ಅವನಿಗೆ ನ್ಯಾಯವಾಗಿ ಕಂಡಿತು. 'ಮೀರಿ' ಆಟ ತಮಾಷೆಯಾಗಿತ್ತು. ಅವರು ಅಷ್ಟು ದೂರದಿಂದ ಗೋಲಿಗಳಿಗೆ ಗುರಿಕಟ್ಟಿ ಹೊಡೆಯುತ್ತಿದ್ದುದು ಆಶ್ಚರ್ಯಕರವಾಗಿ ಕಂಡಿತು. ತಾನೂ ಅವರನ್ನು ಮಾತಿನ ಮಧ್ಯೆಮಾತನಾಡಿಸಿ ಒಂದು ಬಾರಿ ಗೋಲಿಗಳನ್ನು ಪಡೆದುಕೊಂಡು ಆಡಿ ನೋಡಿದನು.

ಸಿಗರೇಟು ಪ್ಯಾಕಿನ ಎರಡೂ ಭಾಗಗಳನ್ನು ಹರಿದಿಟ್ಟುಕೊಂಡು ಅದಕ್ಕೆ 'ಟಿಕ್ಕಿ' ಎಂದು ಹೆಸರಿಟ್ಟುಕೊಂಡು, ಅದನ್ನು ಪಣವಾಗಿಟ್ಟು ಅವರು ಆಡುತ್ತಿದ್ದುದು. ತನ್ನಲ್ಲಿ ಟಿಕ್ಕಿಗಳಿಲ್ಲ. ಆದರೆ ಗೆದ್ದವನ ಹತ್ತಿರ ಬೇಕಾದಷ್ಟು 'ಟಿಕ್ಕಿ'ಯಿತ್ತು. ಅದರ ಧಾರಣೆ ಕಾಸಿಗೆ ಅರವತ್ತು ಎಂಬುದು ತಿಳಿಯಬಂತು. ಅದರಲ್ಲಿ ಆನೆ ಮಾರ್ಕಿಗೆ ಎರಡು. 'ಗೋಲ್ಡ್‌ಪ್ಯಾಕ'ಗೆ ಐದು, ಬೆಕ್ಕಿನ ಮಾರ್ಕಿಗೆ ಹತ್ತು ಎಂಬ ಲೆಕ್ಕ ಬೇರೆ. ಮಲ್ಲೇಶ ಕುತೂಹಲದಿಂದ ಮೂರುಕಾಸಿಗೆ ಟಿಕ್ಕಿಗಳನ್ನು ಕೊಂಡುಕೊಂಡೇ ಬಿಟ್ಟನು. ಗುರಿಯಿಲ್ಲದೆ ಅದನ್ನೆಲ್ಲಾ ಸೋತೂ ಬಿಟ್ಟನು.

ಎಲ್ಲರ ಟಿಕ್ಕಿಗಳನ್ನೂ ಒಬ್ಬನೇ ಗೆದ್ದುಬಿಟ್ಟಮೇಲೆ ಆಟನಿಂತಿತು. ಅನಂತರ ಅವರು ಮೂವರೂ ಹೊಳೆಯ ಕಡೆಗೆ ಹೊರಟರು. ಅವರಿಗೆ ಈಜುವ ಆಟ ಬೇರೆ ಉಳಿದುಕೊಂಡಿತ್ತು. ಮಲ್ಲೇಶನನ್ನೂ ಜೊತೆಗೆ ಕರೆದರು. ಸ್ಕೂಲು ಬಿಡಲು ಇನ್ನೂ ಬಹಳ ಹೊತ್ತಿತ್ತು. ಈಗಲೇ ಊರಿಗೆ ಹೋದರೆ ಮನೆಯಲ್ಲಿ ಬಯ್ಯುವರೆಂದು ಸ್ನೇಹಿತರು ಹೆದರಿಸಿದರು. ಸ್ಕೂಲಿಗೆ ತಪ್ಪಿಸಿಕೊಂಡಿದ್ದ ಮಲ್ಲೇಶನಿಗೆ ಮನೆಯುವರ ಹೆದರಿಕೆ ಇಲ್ಲದಿದ್ದರೂ, ಚಿದಂಬರ, ಹುಚ್ಚರ ಬೆದರಿಕೆಯಿತ್ತು. ಸ್ಕೂಲುಬಿಟ್ಟಮೇಲೆ ಅವರ ಜೊತೆಗೂಡಿ ಅವರು ಊರಿನಲ್ಲಿ ಚಾಡಿ ಹೇಳದಂತೆ ಮಾಡಿಕೊಂಡು ಊರಿಗೆ ಹೋದರೆ ಒಳ್ಳೆಯದೆಂದು ಮಲ್ಲೇಶನಿಗೂ ಅನಿಸಿತು. ಹೊಸ ಸ್ನೇಹಿತರೊಡನೆ ಹೊರಟನು. ಮೂವರು ನೀರಿಗೆ ಬಿದ್ದಾಗ, ಮೇಲೆ ಅವರ ಬಟ್ಟೆಗಳನ್ನು ಕಾಯ್ದು ಕುಳಿತಿರಲು ಒಬ್ಬ ಬೇಕಾಗಿತ್ತು.

ಗಂಟೆಯೆಷ್ಟೆಂದು ಕೇಳಿದ ಹುಡುಗನೊಬ್ಬನಿಗೆ ಇನ್ನೈದು ನಿಮಿಷ ಉಳಿದಿದೆಯೆಂಬುದನ್ನು ಸನ್ನೆಮಾಡಿ ತೋರಿಸಿ ಹುಚ್ಚ ಮೇಷ್ಟರಿಂದ ಏಟು ತಿಂದನು. ಅವನ ಶಿಕ್ಷೆ ಮುಗಿಯುವುದರಲ್ಲಿ 'ಬೆಲ್ಲಾ'ಯಿತು. ಹೋ! ಎಂದು ಭೋರ್ಗರೆಯುತ್ತಾ ಹುಡುಗರ ಪ್ರವಾಹ ಶಾಲೆಯಿಂದ ಹೊರ ಬಿತ್ತು.

ಸಂಪ್ರದಾಯದಂತೆ ಹುಚ್ಚ, ಚಿದಂಬರ ಇಬ್ಬರೂ ಮಲ್ಲೇಶನಿಗೋಸ್ಕರ ಅಲ್ಲಿ ಇಲ್ಲಿ ಸ್ವಲ್ಪಹೊತ್ತು ನೋಡಿ, ಹೊರಟುಬಿಟ್ಟರು. ಚಿದಂಬರ, ಮಲ್ಲೇಶನ ವಿಷಯವನ್ನು ಖಂಡಿತ ಅವರ ತಾಯಿಗೆ ತಿಳಿಸುವುದಾಗಿ ಮನಸ್ಸುಮಾಡಿದ್ದನು. ಹುಚ್ಚ, ಕೋಪಿಸಿಕೊಂಡು ತಾನು ಮಲ್ಲೇಶ ಬರುವವರೆಗೂ ಬರುವುದಿಲ್ಲವೆಂದೂ ಚಿದಂಬರ ಬೇಕಾದರೆ ಹೋಗಬಹುದೆಂದೂ ನಿಂತು ಬಿಟ್ಟನು. ಚಿದಂಬರನಿಗೆ ಮುಂದುವರಿಯಲು ಅಂಜಿಕೆಯಾಗುತ್ತಿದ್ದರೂ, ಅದನ್ನು ತೋರಿಸಿಕೊಳ್ಳದೇ ಒಬ್ಬನೇ ಹೊರಟೇಬಿಟ್ಟನು. ಹುಚ್ಚನಿಗೂ ಹೆದರಿಕೆ. ಇನ್ನೇನು 'ನಿಂತ್ಕೊಳೋ' ಎಂದು ಹುಚ್ಚ ಚಿದಂಬರನನ್ನು ಕೂಗಿಕೊಳ್ಳಬೇಕು. ಅಷ್ಟರಲ್ಲಿ ಹಿಂದಿನಿಂದ ಮಲ್ಲೇಶ ಕೂಗುತ್ತ ಬರುತ್ತಿದ್ದುದು ಕಾಣಬಂದಿತು. ಹುಚ್ಚನಿಗೆ ಧೈರ್ಯಬಂದಿತು. ಸ್ವಲ್ಪ ದೂರದಲ್ಲೇ ಇದ್ದ ಚಿದಂಬರನಿಗೂ ವಿದ್ಯಮಾನ ತಿಳಿದಿರಬೇಕು. ಹಿಂದೆ ಬಂದೇ ಬರುತ್ತಾರೆ ಎಂಬ ಧೈರ್ಯದ ವೇಲೆ ಅವನ ಕಾಲುಗಳನ್ನು ನಿಲ್ಲಿಸಲೇ ಇಲ್ಲ.

ಹುಚ್ಚ, ಮಲ್ಲೇಶನಿಗೆ, ಚಿದಂಬರನ ಮನಸ್ಸನ್ನು ತಿಳಿಸಿದನು. 'ನನ್ನ ಮಾತು ಇವನ್ಯಾಕೆ?' ಎಂದು ಮಲ್ಲೇಶನು ರೇಗಿ ಚಿದಂಬರನನ್ನು ಕೂಗಿದನು. ಅವನು ನಿಲ್ಲುವಂತೆ ತೋರಲಿಲ್ಲ. ಅವನು ಮುಂದೆ ಮುಂದೆ, ಇವರಿಬ್ಬರೂ ಹಿಂದೆ ಹಿಂದೆ ಹೊರಟರು. ಹಿಂದಿನವರು ಕಾಲು ಚುರುಕು ಮಾಡಿದರೆ ಚಿದಂಬರನೂ ಚುರುಕಾಗುತ್ತಿದ್ದನು.

ಈಚಲು ತೋಪು ಕಳೆಯಿತು. ಕಪ್ಪುಮಣ್ಣಿನ ಹೊಲಗಳೆಲ್ಲ ಕಳೆದವು, ಕೆಂಪು ಹೊಲಗಳೂ ಕಳೆದವು, ಒಳಗೆರೆಯೂ ಕಳೆಯಿತು. ಓಣಿಯೂ ಅರ್ಧ ಕಳೆಯಿತು. ತಮ್ಮೂರಿನ ದನಕರುಗಳೂ ಸಿಕ್ಕಿದವು. ಚಿದಂಬರ

ಮಾತ್ರ ಮಲ್ಲೇಶನಿಗೆ ಸಿಕ್ಕಲೇ ಇಲ್ಲ. ಮಲ್ಲೇಶ ಅವನನ್ನು ಓಡಿಹಿಡಿಯಲು ಮಾಡಿದನು. ಚಿದಂಬರನೂ ಓಟಕಿತ್ತು ಊರು ಸೇರಿ ಮಲ್ಲೇಶನ ಮನೆಯ ಕಡೆಯೇ ಹೊರಟನು. ಅವನು ತಾಯಕ್ಕನನ್ನು ಸಂಧಿಸಿ ಇನ್ನೂ ಮಾತಿಗೆ ತೊಡಗಿರಲಿಲ್ಲ. ಅಷ್ಟರಲ್ಲೇ ಮಲ್ಲೇಶ, ಹುಚ್ಚ, ಇಬ್ಬರೂ ಹತ್ತಿರಕ್ಕೆ ಬಂದು ಬಿಟ್ಟಿದ್ದರು. ಚಿದಂಬರ ಅಲ್ಲಿಂದ ಮುಂದಕ್ಕೆ ಓಡಿ ಸಣ್ಣ ಬೀದಿಗಳಿಗೆ ನುಗ್ಗಿ ಮನೆಗಳೊಳಗೆ ಹಾಯ್ದು ತನ್ನ ಮನೆಯನ್ನು ಸೇರಿಕೊಂಡನು.

ಚಿದಂಬರ ತಾಯಕ್ಕನಿಗೆ ಏನೂ ಹೇಳಲಾಗಿರಲಿಲ್ಲ. ಅಷ್ಟು ತಿಳಿಯದೇ ತಾಯಕ್ಕನಿಗೆ ಎಲ್ಲಾ ತಿಳಿದಿದೆಯೆಂದು ಭಾವಿಸಿ ಹುಚ್ಚನೇ ಎಲ್ಲಾ ವಿಷಯವನ್ನೂ ತಾಯಕ್ಕನಿಗೆ ಒಪ್ಪಿಸಿ ಬಿಟ್ಟನು. ತಾಯಕ್ಕ ಮಗನಿಗೆ ಕೊಟ್ಟಿದ್ದು ಒಂದೇ ಏಟು. ಮಲ್ಲೇಶ ಹುಚ್ಚನಿಗೆ ಕೊಟ್ಟಿದ್ದು ಮೂರು ಏಟು.

ಆ ದಿನವೆಲ್ಲ ಮಲ್ಲೇಶನಿಗೆ ಕೋಪ. ಹುಚ್ಚನನ್ನೂ ಮಾತನಾಡಿಸಲಿಲ್ಲ, ಚಿದಂಬರನನ್ನಂತೂ ಇಲ್ಲವೇ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಅವ್ವನನ್ನೇ ಮಾತನಾಡಿಸುವುದನ್ನು ಬಿಟ್ಟುಬಿಟ್ಟಿದ್ದನು. ಎಂದೂ ಇಲ್ಲದವಳು ಇಂದೇಕೆ ನನ್ನನ್ನು ಹೊಡೆಯಬೇಕಾಗಿತ್ತು ? ಆ ರಾತ್ರಿ ಅವನಿಗೆ ಊಟಕ್ಕಿಟ್ಟವಳೂ ಪುಟ್ಟತಾಯಿಯೇ. ಅವಳ ಮೇಲೂ ಅವನ ಜಗಳ. ಮಲ್ಲೇಶನ ಈ ಮುನಿಸನ್ನು ಕಂಡು ತಾಯಕ್ಕನಿಗೆ ನಗುಬರುತ್ತಿತ್ತು. ಊಟವಾದ ಮೇಲೆ ಬೇಕೆಂದೇ ಮಲ್ಲೇಶ ಪಾಟದ ಮನೆಯ ಕಡೆಗೆ ನಡೆದ. ತಾಯಕ್ಕ ಹೋಗಬೇಡವೆಂದು ಗದರಿಸಿದಳು. ಅವನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಹೋಗಿಯೇ ಹೋದ. ಹತ್ತಾರು ವೇಷದವರು ಅಂದು ಪಾಟಕ್ಕೆ ತಪ್ಪಿಸಿಕೊಂಡಿದ್ದುದರಿಂದ ಪಾಟವೇ ನಡೆಯಲಿಲ್ಲ. ಬರಿಯ 'ರಾಮಜಯತು ಶ್ರೀ' ಬಾರಿಸಿ ಅಂದಿನ ಪಾಟವನ್ನು ನಿಲ್ಲಿಸಲಾಯಿತು.

ಹಾರ್ಮೋನಿಯಂ ಶಬ್ದ ನಿಂತು ಬಹಳ ಹೊತ್ತಾದರೂ ಮಗ ಮನೆಗೆ ಬರದೇ ಇರುವುದನ್ನು ಕಂಡು ತಾಯಕ್ಕ ಪಾಟದ ಮನೆಯ ಕಡೆಗೆಂದು ಎದ್ದಳು. ಬಾಗಿಲು ತೆರೆದು ಹೊರಗೆ ಬಂದಳು. ಜಗುಲಿಯ ಮೇಲೆ ಯಾರೋ ಒಬ್ಬರು ಹಾಸಿಕೊಂಡು ಮಲಗಿರುವುದು ಕಂಡಿತು. 'ಅದ್ಯಾರ

ಮಲಗಿರವಾ ?' ಎಂದಳು. ಗೊರಕೆ ಕೇಳಿಸಿತು ಅಷ್ಟೇ. ಬಾಗಿಲನ್ನು ಮುಂದಕ್ಕೆಳೆದುಕೊಂಡು ಹೊರಟಳು. ಮಲ್ಲೇಶ ಪಾಟವಿಲ್ಲದಿದ್ದರೂ ಅಲ್ಲಿಗೇ ಹೋಗಿ ಅಲ್ಲಿಯೇ ಮಂಡಿಗಳೊಳಗೆ ಕೈಗಳನ್ನು ಹುದುಗಿಸಿ ಮಲಗಿದ್ದನು. ಸ್ವಲ್ಪ ನಿದ್ದೆಯೂ ಬಂದಿತ್ತು. ಆದರೆ ಅವ್ವ ಬಂದ ಸುಳಿವಿನಿಂದ ಎಚ್ಚರ ವಾಯಿತು. ಚೆನ್ನಾಗಿ ನಿದ್ದೆ ಬಂದಿರುವವನಂತೆಯೇ ಮಲಗಿದನು. ತಾಯಕ್ಕ 'ಅವನು ನನ್ಮೇಲೆ ಇಂದು ಮುನಿಸ್ಕಂಡವ್ನೇ' ಎಂದು ಯಾರಿಗೋ ಹೇಳಿದ್ದು ಕೇಳಿಸಿತು. ತಾಯಕ್ಕ ಹತ್ತಿರ ಬಂದು ಅವನನ್ನೆತ್ತಿ ಹೆಗಲಮೇಲೆ ಹಾಕಿ ಕೊಂಡರೂ ಅವನು ಎಚ್ಚರವಾಗಲೇ ಇಲ್ಲ. ಹೊತ್ತರೆ ಹೊರಲಿ, ಎಂಬ ಮನಸ್ಸಿನಿಂದ ಮಲ್ಲೇಶ ಆನಂದವಾಗಿ ತಾಯಿಯ ಕತ್ತಿನ ಸುತ್ತಲೂ ಕೈ ಹಾಕಿ ಹೆಗಲಮೇಲೆ ಕೆನ್ನೆಯಿಟ್ಟು, ಉದ್ದವಾಗಿ ಕಾಲುಗಳನ್ನು ಜೋಲಾಡಿ ಸುತ್ತಾ ಮನೆಯವರೆಗೂ ಕಣ್ಣು ಬಿಟ್ಟುಕೊಂಡೇ ಬಂದ.

ಮನೆಯ ಹತ್ತಿರ ಬರುತ್ತಿದ್ದಂತೆಯೇ ಜಗಲಿಯಮೇಲೆ ಮಲಗಿದ್ದ ವ್ಯಕ್ತಿ ಎದ್ದು ಜಗಲಿಯ ತುದಿಯಲ್ಲಿ ಕುಳಿತು ಒಂದು ಬೀಡಿ ಹಚ್ಚಿದ್ದದ್ದು ಮಲ್ಲೇಶ ತಾಯಕ್ಕ ಇಬ್ಬರಿಗೂ ಕಂಡಿತು. ತಾಯಕ್ಕ ಈಗಲಾದರೂ ಆತನು ಯಾರೆಂಬುದನ್ನು ವಿಚಾರಿಸಬೇಕೆಂದು ತುಟಿ ನಾಲಿಗೆಗಳನ್ನು ಸರಿಪಡಿಸಿ ಕೊಳ್ಳುತ್ತಿರುವಷ್ಟರಲ್ಲಿ, ಆ ವ್ಯಕ್ತಿಯೇ ಬಾಯಿಬಿಟ್ಟಿತು. " ಯಾರು, ಮಲ್ಲೇಸ್ನಾ ?—ಅಲ್ಲಿ ಬಂದು ಯಾಕೆ ಮಲಗಿದ್ದಾ ?— ಮಲ್ಲೇಸಾ ! " ಎಂದಿತದು. ಮಲ್ಲೇಶನಿಗೆ ಅದ್ಯಾರೆಂಬುದು ತಿಳಿಯಿತು. ನಾಟಕದ ಉಪಾದ್ಯ್ರ! ಅವರ ಜೊತೆಯಲ್ಲಿ ಅವನಿಗೇನೂ ಜಗಳವಿರಲಿಲ್ಲವಲ್ಲ. ತಾನು ನಿದ್ದೆ ಹೋಗುತ್ತಿರುವೆನೆಂಬುದನ್ನೂ ಮರೆತು ಮಲ್ಲೇಶ ಅವರಿಗೆ ಉತ್ತರ ಕೊಟ್ಟನು. " ನೀವಾ ಉಪಾದ್ರೆ! ನಾಯಾರೋ ಅಂತಿದ್ದೆ. ಇಂದ್ಯಾಕೆ ಪಾಟ ನಿಂತೋಯ್ತು" ಎಂದು ಚುರುಕಾಗಿ ಮಾತನಾಡಿದ ಮಲ್ಲೇಶನ ಮೇಲೆ ತಾಯಕ್ಕನಿಗೆ ವಿಪರೀತ ಸಿಟ್ಟು ಬಂದಿತು. ಅಲ್ಲಿಯೇ ಅವನನ್ನು ಎತ್ತಿಹಾಕಿಬಿಡೋಣವೆನ್ನಿಸಿತು. ಆದರೆ ಏಕೋ ಹಾಗೆ ಮಾಡದೆ ಮನೆಯ ಒಳಕ್ಕೆ ಅವನನ್ನೂ ಎತ್ತಿಕೊಂಡು ಓಡಿಹೋದಳು.

ತಾಯಕ್ಕ ಮಲ್ಲೇಶನನ್ನು ಹೊತ್ತಿದ್ದ ಭಾರದಲ್ಲೂ ಏಕೆ ಓಡಿದಳು ಎಂಬುದಕ್ಕೆ ಹಿನ್ನೆಲೆಯಿದೆ. ನಾಟಕ ಕಲಿಸುವ ಉಪಾಧ್ಯ್ರ ಧ್ವನಿ ಅವಳಿಗೆ

ಗುರುತುಹತ್ತಿತು. ಅವಳು ಹಿಂದೆ ಒಂದು ದಿನ, ಹೊತ್ತುಬಿದ್ದಮೇಲೆ ಸೊಪ್ಪು ರಿಕೊಂಡು ಬರಲು ಹೋಗಿದ್ದಾಗ, ತೋಟಕ್ಕೆ ಅತಿಕ್ರಮಪ್ರವೇಶ ಮಾಡಿ, ಸದರದಿಂದ ಮಾತನಾಡಿಸಿದ ವ್ಯಕ್ತಿ ಉಪಾದ್ಧ್ರ, ಎಂಬುದು ಅವಳಿಗೆ ತಿಳಿದುಹೋಯಿತು. ಅಂತಹ ಮನುಷ್ಯ ಎಲ್ಲರ ಮನೆಯನ್ನೂ ಬಿಟ್ಟು ತನ್ನ ಮನೆಯ ಜಗಲಿಗೇಕೆ ಬಂದ ಎಂಬಯೋಚನೆ ತಾಯಕ್ಕನಿಗೆ ಅಂಟಿಕೊಂಡಿತು. ತಾಯಕ್ಕ ಈವರೆವಿಗೂ ಬೆಳಗಿನ ಹೊತ್ತಿನಲ್ಲಿ ಆತನನ್ನು ಕಂಡುದೇ ಇಲ್ಲ. ಪಾಟದ ಮನೆಯಕಡೆಗೆ ಹೋದಾಗಲೂ ಆತನ ಹಿಂದಲೆ ಮಾತ್ರ ಒಂದು ದಿನ ಕಂಡುಬಂದಿತ್ತು. ಆತನ ಆ ದಿನದ ಒಂದೆರಡು ಮಾತುಗಳಲ್ಲೇ ಅಯೋಗ್ಯನೆಂಬುದನ್ನು ಅವಳು ತೀರ್ಮಾನಿಸಿಬಿಟ್ಟಿದ್ದಳು. ಆತ ಬಂದು ತನ್ನ ಜಗಲಿಯನ್ನು ಸೇರಿಕೊಂಡಿದ್ದು ಅವಳಿಗೆ ಸಹಿಸಲಿಲ್ಲ. ಅದನ್ನು ತಪ್ಪಿಸುವುದು ಹೇಗೆ ಎಂಬುದನ್ನೇ ಯೋಚಿಸುತ್ತಾ ಮಲಗಿದಳು. ಆದಿನ ಅವಳಿಗೆ ನಿದ್ದೆ ಬಂದದ್ದು ಹುಳುಗಳಿಗೆ ಸೊಪ್ಪುಹಾಕಲು ಏಳಬೇಕಾಗಿದ್ದ ಹೊತ್ತಿಗೆ. ಅದು ಬೇರೆ ಒಂದು ಅನ್ಯಾಯ.

ಉಪಾದ್ಧ್ರ ತನ್ನ ಹೆಸರನ್ನು ಹೇಳಿಕೊಳ್ಳುತ್ತಿದ್ದುದು ಮೇಷ್ಟ್ರು ನಿಂಗಪ್ಪ ಅಂತಾದರೂ ಅವನನ್ನು ಬಾಲ್ಯದಿಂದ ಹಿಂಬಾಲಿಸಿಕೊಂಡುಬಂದಿದ್ದ 'ಸೆತ್ತೆನಿಂಗಪ್ಪ' ಎಂಬ ಹೆಸರನ್ನು ಅಳಿಸಿಕೊಳ್ಳುವುದು ಅವನ ಕೈಲಾಗುತ್ತಿರಲಿಲ್ಲ. ಯಾವ ಊರಿಗೆ ಹೋದರೂ ಆ ಹೆಸರು ಮಾತ್ರ ಅವನ ನೆರಳಿನಂತೆಯೇ ಜೊತೆಯಲ್ಲಿ ಹೋಗಿ ಪ್ರಸಿದ್ಧಿಯಾಗಿಬಿಡುತ್ತಿತ್ತು. 'ಸೆತ್ತೆ' ಎಂದರೆ ಸರಿಯಾದ ಭಾವಾರ್ಥ 'ತೃಣ' ಎಂದು.

ಸೆತ್ತೆನಿಂಗಪ್ಪ ಅವನ ತಂದೆತಾಯಿಗಳಿಗೆ ಒಂಭತ್ತನೆಯ ಮಗ. ಹದಿಮೂರನೇ ಹೆಣ್ಣುಮಗುವೂ ಇತ್ತು. ಈ ಮಕ್ಕಳ ಸಂಖ್ಯೆಯಮಧ್ಯೆ ನಿಂಗಪ್ಪನನ್ನು ಕೇಳುವವರೇ ಇರಲಿಲ್ಲ. ಅವನು ಊಟಮಾಡಿದುದು, ಬಟ್ಟೆ ಹಾಕಿಕೊಂಡದ್ದು, ನಿದ್ದೆಮಾಡಿದುದು, ಹೊಲದ ಕಡೆ ಹೋಗುತ್ತಿದ್ದುದೂ ಎಲಾ ಅವನೊಬ್ಬನಿಗೇ ಗೊತ್ತಿದ್ದ ವಿಷಯಗಳು. ಅವನನ್ನು ಯಾರೇ ಆಗಲಿ ಗುರುತಿಟ್ಟುಕೊಂಡಿರಬೇಕಾದ ಯಾವ ವಿಶೇಷ ವಿಷಯವೂ ಅವನಲ್ಲಿರಲಿಲ್ಲ. ಹಿಂಡಿನ ಮಧ್ಯದ ಕೊಂಬಿಲ್ಲದ ಟಗರಿನಂತೆ ಅವನ ಇರುವಿಕೆಯೇ ಯಾರ ಗಮನದಲ್ಲೂ ಇರುತ್ತಿರಲಿಲ್ಲ.

ನಿಂಗಪ್ಪ ಎನ್ನುವ ಹೆಸರೂ ವಿಚಿತ್ರವಲ್ಲ. ಆ ಹೆಸರಿನ ವ್ಯಕ್ತಿಗಳು ಆ ಸೀಮೆಯಲ್ಲಿ ಸಹಸ್ರಾರು. ಗುರುತು ಹಿಡಿಯುವುದಕ್ಕೆಂದು ಅಂತಹ ಹೆಸರಿನವರ ಹಿಂದೆಯೋ ಮುಂದೆಯೋ ಒಂದೊಂದು ವಿಶೇಷವಾದ ಪದಗಳಿರುತ್ತಿದ್ದುದು ರೂಢಿ. ಗೂಳಿ ನಿಂಗಪ್ಪ, ಕಡಾಣಿ ನಿಂಗಪ್ಪ, ಮೊಳೆಉಳ್ಳಿ ನಿಂಗಯ್ಯ ಹೀಗೆ. ಆ ವಿಶೇಷ ಪದಗಳು ಅವರ ಹೆಸರಿನೊಡನೆ ಬಂದು ಸೇರಿಕೊಳ್ಳುತ್ತಿದ್ದುದೇ ಒಂದೊಂದು ಕತೆಯಾಗುತ್ತದೆ.

ಈ ನಿಂಗಪ್ಪನಿಗೆ ' ಸೆತ್ತೆ ' ಬಂದು ಸಿಕ್ಕಿಕೊಂಡ ಕತೆ ಹೀಗೆ. ಮೊದಲೇ ಹೇಳಿದಹಾಗೆ ಇವನನ್ನು ಇವನ ತಾಯಿಯೂ ಆಗಾಗ್ಗೆ ಮರೆತುಬಿಡುತ್ತಿದ್ದುದುಂಟು. ಹಾಗೆ ಮರೆತಾಗ ಮೊದಲು ಜ್ಞಾಪಿಸಿಕೊಳ್ಳುತ್ತಿದ್ದವಳೇನೋ ಅವಳೇ. ಎಷ್ಟಾದರೂ ತಾಯಿ !

ರಾಗಿ ಒಕ್ಕಣೆಯಾಗುತ್ತಿದ್ದ ಸಮಯ. ಕೊಟಾರದಲ್ಲಿ ನಿಂಗಪ್ಪನ ಮನೆಯ ರಾಗಿಯೂ ತುಳಿಯಿಸಿಕೊಳ್ಳುತ್ತಾಬಿದ್ದಿತ್ತು. ಆ ಸರ್ತಿ ಅಲ್ಲಿಇಲ್ಲಿ ಸ್ವಲ್ಪ ರಾಗಿಹುಲ್ಲು ಕಳುವಾಗಿದ್ದುದರಿಂದ ಎಲ್ಲರೂ ಕಾವಲುಗಣ್ಣಿನಿಂದಲೇ ಕೆಲಸ ಮಾಡುತ್ತಿದ್ದರು. ನಿಂಗಪ್ಪನ ಮನೆಯಲ್ಲಿ ಕಾವಲುಗಾರರಿಗೆ ಕಡಿಮೆಯೇ ? ಇಬ್ಬಿಬ್ಬರು ಹುಡುಗರು ಸರದಿ ಪ್ರಕಾರ ಕೊಟಾರದಲ್ಲೇ ಇದ್ದುಬಿಡುತ್ತಿದ್ದರು. ರಾಗಿ ಎಲ್ಲವನ್ನೂ ಒಪ್ಪಮಾಡಿ ಕಳದ ಮಧ್ಯೆ ರಾಶಿ ಹಾಕಿ ಪೂಜೆ ಮಾಡುವವೇಳೆಗೆ ಕತ್ತಲಾಗಿಹೋದುದರಿಂದಲೂ, ಗಾಡಿ ಕೊಡುತ್ತೇವೆಂದು ಹೇಳಿದ್ದವರಿಗೆ ಆದಿನ ತೊಂಥರೆಯಾದುದರಿಂದಲೂ ರಾಗಿಯನ್ನು ಸಾಗಿಸಿಕೊಳ್ಳಲಾಗಿರಲಿಲ್ಲ. ರಾಶಿಯ ಕಾವಲಿಗೆಂದಿದ್ದವರ ಜೊತೆಗೆ ಆದಿನ ನಿಂಗಪ್ಪನೂ ಇದ್ದ. ಬೆಳಗಾನ ಕಣ್ಣು ಬಿಟ್ಟುಕೊಂಡೇ ಕುಳಿತಿದ್ದ. ಬೆಳಗಿನ ಝಾವ ಗಾಡಿ ಬರುವಹೊತ್ತಿಗೂ ಅವನಿಗೆ ನಿದ್ದೆಬರುವುದಕ್ಕೂ ಸರಿಯಾಯ್ತು.

ಗಾಡಿ ಬಂದ ಸಂಭ್ರಮದಲ್ಲಿ ಎಲ್ಲರೂ ರಾಗಿ ಅಳೆಯುವುದರಲ್ಲಿ, ಹುಲ್ಲನ್ನು ಹೊರೆ ಕಟ್ಟುವುದರಲ್ಲಿ, ಚೀಲ ಹೊಲೆಯುವುದರಲ್ಲಿ, ಅದನ್ನು ಗಾಡಿಗೇರಿಸುವುದರಲ್ಲಿ ತೊಡಗಿದರು. ನಿಂಗಪ್ಪನ ನೆನಪೇ ಯಾರಿಗೂ ಬರಲಿಲ್ಲ. ಹದಿಮೂರು ಪಲ್ಲ ರಾಗಿಯನ್ನು ಅಳೆದು ಚೀಲಕ್ಕೆ ತುಂಬಿ

ಗಾಡಿಗೇರಿಸಿ ಕಳಿಸಿದ್ದೂ ಆಯಿತು. ಗಾಡಿ ಇರುವಾಗಲೇ ಹುಲ್ಲನ್ನೂ ಸಾಗಿಸಿಕೊಂಡುಬಿಡೋಣವೆಂದು ಹುಲ್ಲಿನ ಹೊರೆಗಳನ್ನೂ ಗಾಡಿಗೇರಿಸಿದ್ದಾಯಿತು. ಗುಡಿಸಲಿನಲ್ಲಿದ್ದ ಕವೆಗಡ್ಡಿ, 'ಹಿಟ್ಟಿನ ಪುಟ್ಟಿ', ಜಾಡಿ (ಕಂಬಳಿ) ಗಳನ್ನೂ ತೆಗೆದುಕೊಂಡಾಯಿತು. ಎಲ್ಲರೂ ಹೊರಟುಹೋದರು. ಕೊಟಾರ ಬರಿದಾಯಿತು.

ರಾಗಿಯನ್ನು ತೊಂಬೆಗೆ ಸುರಿದುಕೊಂಡು ಹುಲ್ಲನ್ನು ಹಿತ್ತಲಲ್ಲಿ ಹಾಕಿಕೊಂಡು ಗಾಡಿಯನ್ನೂ ಗಾಡಿಯವರಿಗೆ ತಲುಪಿಸಾಯಿತು. ಮಧ್ಯಾಹ್ನದ ಊಟವೂ ಆಯಿತು ಅಲ್ಲಿಯವರೆಗೂ ಬರದೇ ಇದ್ದವರು ಸಂಜೆಯಹೊತ್ತಿಗೆ ರಾಗಿಗೆ ಗಿರಾಕಿಗಳೊಬ್ಬರು ಬಂದರು. ಆಗ ಆ ವರ್ಷದ ರಾಗಿಯ ಬೆಳೆಯ ಮಾತು ಬಂದಿತು. ಕೊಟಾರಗಳಲ್ಲಿ ಆಗುತ್ತಿದ್ದ ಕಳ್ಳತನದ ಮಾತುಬಂದಿತು. ಕಾವಲಿನ ಮಾತು ಬಂದಿತು. ಹಿಂದಿನದಿನ ಕಾವಲಿದ್ದವರ ಮಾತು ಬಂದಾಗ ನಿಂಗಪ್ಪನ ನೆನಪಾಯಿತು. ಅವನ ತಂದೆ ಅವನಿಗಾಗಿ ಕೂಗಿದರು ಎಲ್ಲದೂ ಅವನನ್ನು ಮರೆತುಹೋಗಿದ್ದರು. ನಿಂಗಪ್ಪ ಎಲ್ಲಿಗೂ ಹೋಗುವಂತಹವನಲ್ಲ. ಒಬ್ಬಿಬ್ಬರು ಹುಡುಕಾಡಿದರು. ಕೊಟಾರಕ್ಕೂ ಹೋಗಿ ನೋಡಿಬಂದರು. ಸುಳಿವಿಲ್ಲ.

ಹಾಗೆಯೇ ಅವನ ಗುಣಾವಗುಣಗಳ ವಿವರಣೆಯಾಗುತ್ತಿದ್ದಾಗ ಅವನಿಗೆ ನಿದ್ದೆ ಬಂದರೆ ಕುಂಭಕರ್ಣ ಎನ್ನುವ ವಿಷಯವೂ ವಿವರಿತವಾಯ್ತು. ಹುಲ್ಲಿನೊಳಗೆ ಮಲಗಿದ್ದು ಯಾವುದಾದರೂ ಹೊರೆಯೊಳಕ್ಕೆ ಸೇರಿಹೋಗಿರಬಹುದೆಂದು ಒಬ್ಬರು ಹಾಸ್ಯವಾಗಿ ಸೂಚಿಸಿದರು. ನಿಂಗಪ್ಪನ ತಂದೆ ಅದನ್ನು ಹಾಸ್ಯವಾಗಿ ತೆಗೆದುಕೊಳ್ಳದೆ, ಇದ್ದರೂಇರಬಹುದೆಂದು ಹಿತ್ತಿಲಿಗೆ ಎದ್ದುಹೋಗಿ ನಾಲ್ಕಾರು ಹೊರೆಗಳನ್ನು ಹಿರಿದುಅಲುಗಿಸಿ ನೋಡಿದರು. ನಿಂಗಪ್ಪ ಸಿಕ್ಕಲಿಲ್ಲ.

ಪುನಃ ಅವರೊಬ್ಬರೇ ಕೊಟಾರಕ್ಕೆ ಹೋದರು. ಅವರ ಕೊಟಾರದಲ್ಲೇ ಒಕ್ಕಣೆ ಮಾಡಿಕೊಳ್ಳಲು ಅನುಮತಿ ತೆಗೆದುಕೊಂಡಿದ್ದವರು ಕೊಟಾರವನ್ನೆಲ್ಲ ಚೊಕ್ಕಟವಾಗಿ ಗುಡಿಸಿ ಗುಡಿಸಿಲಿನ ಪಕ್ಕದಲ್ಲಿ ಕಸದ ರಾಶಿ ತಳ್ಳಿದ್ದರು. ಅದರಲ್ಲಿ ತರಗೆಲೆ, ಕೈಗೆ ಸಿಕ್ಕದಷ್ಟು ಹುಡಿಯಾದ ಹುಲ್ಲುಗಳೂ

ತುಂಬಿದ್ದವು ಅದನ್ನೂ ಬಿಡದೆ ನಿಂಗಪ್ಪನ ತಂದೆ ಆ ರಾಶಿಯನ್ನೂ ತಮ್ಮ ಬಲಗಾಲಿಂದ ಬಗೆದರು. ನಿಂಗಪ್ಪನ ಕಾಲುಗಳು ಕಂಡವು

ಉಪಯೋಗವಿಲ್ಲದ ಹುಲ್ಲು ಎಂದರೆ ತೃಣಗಳನ್ನೇ ಹೊದ್ದು, ತೃಣಕ್ಕಿಂತ ಕಡೆಯಾಗಿ, ಎಚ್ಚರತಪ್ಪಿ ಸಂಜೆಯವರೆಗೂ ನಿದ್ದೆ ಹೊಡೆಯುತ್ತಿದ್ದ ಮಗನನ್ನು ಒದ್ದು ಏಳಿಸಿದರು. ಸೆತ್ತೆಯ ಮಧ್ಯೆ ಸತ್ತವನಂತೆ ಬಿದ್ದಿದ್ದ ಮಗನನ್ನು ಕರೆದುಕೊಂಡುಬಂದು ಎಲ್ಲರಿಗೂ ತೋರಿಸಿ ನಡೆದಸಂಗತಿಯನ್ನು ವಿವರಿಸಿದಮೇಲೆ ನಿಂಗಪ್ಪನ ಹೆಸರಿನ ಹಿಂದೆ ' ಸೆತ್ತೆ ' ಬಂದು ಅಂಟುಕೊಂಡಿತು.

ಅಲ್ಲಿಂದ ಮುಂದಕ್ಕೂ ಅವನು ಸೆತ್ತೆಯಂತೆಯೇ ಬೆಳೆದದ್ದು. ಯಾರಿಗೂ ಬೇಡವಾಗಿ ಬೆಳೆದ ಅವನಲ್ಲಿ ಸೋಮಾರಿತನ ಮನೆಮಾಡಿಕೊಂಡಿತ್ತು. ಎಲ್ಲಾ ಕೆಲಸಗಳಿಗೂ ಅವನು ಅನರ್ಹನಾದನು. ಊರಿನವರಲ್ಲೆಲ್ಲಾ ಉಂಡಾಡಿ ಎಂದು ಪ್ರಸಿದ್ಧಿಯಾದನು. ಅವನು ಹೀಗಾದನೆಂದು ಚಿಂತಿಸುವುದಕ್ಕೂ ಆವನ ಮನೆಯವರಿಗೆ ' ಪುರುಸತ್ತಿ 'ರಲಿಲ್ಲ. ಅವರ ತಾಪತ್ರಯ ಅವರಿಗೆ.

ಅವರು ಹೀಗಾದಮಾತ್ರಕ್ಕೆ ದೇವರು ಹಾಗಿರಲಾಗುವುದಿಲ್ಲ. ಅವನ ಜವಾಬ್ದಾರಿ ಇದ್ದೇ ಇತ್ತು. ಅವನಿಗೇ ತಿಳಿಯದಂತೆ ನಾಟಕದ ಪದಗಳನ್ನು ಹಾಡುವ ಮನೋಧರ್ಮವೊಂದನ್ನು ದೇವರು ಕೊಟ್ಟ. ಇದರಿಂದ ತಾನು ಮುಂವೆ ಕೆಲಸಮಾಡಬೇಕಾಗಿ ಬರುವುದೆಂದು ಸೆತ್ತೆ ನಿಂಗಪ್ಪನಿಗೆ ತಿಳಿದಿದ್ದರೆ ಅವನು ಹಾಡುಗಳನ್ನು ಅನ್ನುವುದನ್ನು ಖಂಡಿತ ನಿಲ್ಲಿಸಿಬಿಡುತ್ತಿದ್ದ. ಆದರೆ ಅವನಿಗೆ ಆ ವಿಷಯ ಇವತ್ತಿನವರೆಗೂ ಗೊತ್ತಿಲ್ಲ. ಅಂತೂ ಪದಗಳನ್ನು (ಹಾಡುವುದಕ್ಕಿಂತ ) ಕೂಗುವುದು ಸೆತ್ತೆನಿಂಗಪ್ಪನ ಲೀಲೆಯಾಯಿತು.

ಅವರೂರಿನಲ್ಲಿ ನಾಟಕ ಕಲಿಯಲು ಪ್ರಾರಂಭಿಸಿದಾಗ ಅವನಿಗೆ ಇಪ್ಪತ್ಮೂರು ವರ್ಷ. ಅವನಿಗೆ .'ಕಂದ'ವನ್ನು ಕೂಗುವ ಸಖಿಪಾರ್ಟೊಂದು ದೊರಕಿತ್ತು. ಅದಕ್ಕಾಗಿ ಅವನು ಕೊಡಬೇಕಾಗಿದ್ದ 'ವರಿ' ಐದುಕೊಳಗ ಜೋಳ. ಅದನ್ನು ಅವರಿವರ ಹೊಲದಲ್ಲಿ ತೆನೆಯನ್ನು ಕದ್ದುಕುಯ್ದು

ಗುಟ್ಟಾಗಿ ಒಕ್ಕಣೆಮಾಡಿ ಕೊಟ್ಟನೆಂದು ಪ್ರತೀತಿ. ಅವನು ತನ್ನ ಸಣ್ಣ ಪುಟ್ಟ ಖರ್ಚುಗಳಿಗೆಲ್ಲ ಇದೇ ಮಾರ್ಗದಲ್ಲೇ ಸಂಪಾದಿಸಿಕೊಳ್ಳುತ್ತಿದ್ದುದು.

ಅವನಿಗೆ ಸಿಕ್ಕಿದ್ದ ಒಂದು ಕಂದವನ್ನೇ ದಿನಕ್ಕೆ ನೂರುಬಾರಿ ಅರಚಿ ಅರಚಿ ಅವನ ಕೃತಿಯಲ್ಲಿ ಅರಚಿಕೊಳ್ಳುವವರು ಯಾರೂ ಇಲ್ಲವೆನ್ನಿಸಿ ಕೊಂಡನು. ನಾಟಕ ಕಲಿಸಲು ಬಂದಿದ್ದ ಹಾರ್ಮ್ಮನಿ ಮಾಸ್ಟರ್ ಗಂಗಡಿ ಕಾರ ಹನುಮಯ್ಯ ಗಾಂಜಾಪ್ರೇಮಿ. ಇದನ್ನರಿತಿದ್ದ ಸೆತ್ತೆ, ಅವನಿಗೆ ಗಾಂಜಾ ಲಂಚಕೊಟ್ಟು ಒಂದು 'ಮಟ್ಟನ್ನೇ' ತನ್ನ ಪಾತ್ರಕ್ಕೆ ತಗುಲಿಸಿ ಕೊಂಡಿದ್ದನು.

ಜಲಂಧರನಕತೆ, ನಾಟಕ ಆಡಿದದಿನ ಸೆತ್ತೆಗೆ ಒಳ್ಳೇಹೆಸರು ಬಂದಿತು. ಕಾರಣ ಅವನ ಕೂಗು ನಾಲ್ಕು ಮೈಲಿಯಲ್ಲಿದ್ದ ಕರಿಸಿದ್ದನಹಳ್ಳಿವರೆಗೂ ಕೇಳಿಸಿತಂತೆ. ಅಲ್ಲಿಂದಾಚೆಗೆ ನಿಂಗಪ್ಪನ 'ತರ'ವೇ ಬದಲಾಯಿಸಿತು. ಅವನೂ ಗಾಂಜದ ಭಕ್ತನಾಗಿದ್ದ. ಮೇಷ್ಟ್ರು ಹನುಮಯ್ಯನನ್ನು ಬಿಡು ವುದಕ್ಕೆ ಇವನೂ ಇವನನ್ನು ಬಿಡುವುದಕ್ಕೆ ಅವನಿಗೂ ಸಾಧ್ಯವಿಲ್ಲದಷ್ಟು ಮಿತ್ರರಾದರು. ಆ ಊರಿನ ನಾಟಕ ಮುಗಿಯಲು ಹನುಮಯ್ಯ ದೂರ ದೊಂದು ಊರಿಗೆ ಪಾದುಕಾ ಪಟ್ಟಾಭಿಷೇಕ ಕಲಿಸಲು ಹೊರಟನು. ಹಿಂದೆ ಮುಂದೆ ಯೋಚಿಸುವುದಕ್ಕೂ ಕಾರಣವಿಲ್ಲದೇ ಹೇಳದೇ ಕೇಳದೇ ಅವ ನೊಡನೆ ಹೊರಟುಬಿಟ್ಟನು.

ಸೆತ್ತೆ, ಪುನಃ ಅವನ ಊರಿಗೆ ಹಿಂದಿರುಗಿದುದು ಎಂಟುವರ್ಷದ ಬಳಿಕ ಅವನ ಕಣ್ಣು ಮೂಗುಗಳು ಯಾವಾಗಲೂ ಕೆಂಪಗೇ ಇರುತ್ತಿದ್ದುವು ದೇಹ ಸವೆದು ಸಣ್ಣಾಗಿತ್ತು. ಇದರ ಕಾರಣವನ್ನು ಕೇಳಿದವರಿಗೆ ಅವನು ನಾಚಿಗೆಯಿಲ್ಲದೇ, ಮಾನವಿಲ್ಲದೇ ಹೋದ ಊರಿನಲ್ಲೆಲ್ಲಾ ಒಬ್ಬೊಬ್ಬ ಹೆಂಡತಿಯಿದ್ದಳೆಂದೂ ಅವರೆಲ್ಲರಿಂದ ತಾನು ಹೀಗಾದನೆಂದೂ ಹೇಳಿಕೊಳ್ಳು ತ್ತಿದ್ದನು.

ಆ ಮಾತುಗಳನ್ನು ಮೆಚ್ಚುತ್ತಿದ್ದ ಪೋಲಿಗಳೇ ಅವನ ಶಿಷ್ಯರಾದರು. ತಮ್ಮೂರಿನವನೊಬ್ಬ 'ನಾಟಕದ ಮೇಷ್ಟ್ರು' ಆದ ಬಗ್ಗೆ ತಮ್ಮ ಮೆಚ್ಚುಗೆ ಯನ್ನು ಸೂಚಿಸಿ ತಮ್ಮ ಕೈಲಾದಷ್ಟು ಪ್ರಚಾರಮಾಡಿದರು. ಸುತ್ತುಮು

ತ್ರಿನ ಹತ್ತಾರು ಹಳ್ಳಿಗಳಲ್ಲಿ ಸೆತ್ತಿನಿಂಗಪ್ಪನ 'ಹಾರ್ಮೋನಿ' ಜೋಯ್ಯೆಂದಿತು. 'ಕೃಷ್ಣಲೀಲೆ' 'ವಿರಾಟಪರ್ವ' 'ಶಿವಜಲಂಧರ' 'ಲವಕುಶರ ಕಾಳಗ' ನಾಟಕಗಳು ಸೆತ್ತಿನಿಂಗಪ್ಪನ ಬಾಯಲ್ಲೇ ಇದ್ದವು. ಅವನು ಹಾಡುತ್ತಿದುದೇ ಹಾಡುಗಳು. ಆಡುತ್ತಿದ್ದುದೇ ಮಾತುಗಳು. ಏಕೆಂದರೆ ಅವನಿಗೆ ಓದುಬರಹ ಹಣೆಯಬರಹವಲ್ಲ:

ಕಿರೀಕಾಟೆಯವರು ಕಲಿಯಲು ತೊಡಗಿದ್ದುದು ವಿರಾಟಪರ್ವನಾಟಕ ಅದರಲ್ಲ ಸೆತ್ತಿ ನಿಗಪ್ಪನೇ 'ಉತ್ತರ'ನ ಪಾತ್ರದವನು. ಅಭ್ಯಾಸ ಬಿರುಸಾಗಿ ನಡೆಯುತ್ತಿತ್ತು. ಅವನ ಶುಶ್ರೂಷೆಗೆ ಊರಿಗೆ ಊರೇ ನಿಂತುಕೊಂಡಿತ್ತು. ಆವನ ಊಟ, ತಿಂಡಿ, ಗಾಂಜಗಳನ್ನೆಲ್ಲ ಪಾರ್ಟುದಾರರೇ ನೋಡಿಕೊಳ್ಳುತ್ತಿದ್ದರು. ನಾಟಕವಾದ ದಿನವೇ ಅವನಿಗೊಂದು 'ಐನಾತಿ'ಶಾಲಿನೊಡನೆ ಎಪ್ಪತ್ತೈದು ರೂಪಾಯಿಗಳನ್ನು ಸಭೆಯಲ್ಲಿ ಕೊಡಬೇಕೆಂದೂ ಮಾರನೆಯ ದಿನ ಒಂದೊವರೆ ಪಲ್ಲಾ ರಾಗಿಯನ್ನು ಕೊಡುವುದೆಂದೂ ತೀರ್ಮಾನವಾಗಿತ್ತು. 'ಲೆಗ್‌ಹಾರ್ಮೋನಿ' ಯನ್ನು ಮೈಸೂರಿನಿಂದ ಬಾಡಿಗೆಗೆ ತಂದಿತ್ತು. ಅದಕ್ಕೆ ಬಾಡಿಗೆ ತಿಂಗಳಿಗೆ ಹತ್ತು ರೂಪಾಯಿಯಂತೆ ಒಪ್ಪಿ ತಂದಿದ್ದವನು ಸೆತ್ತಿಯೇ. ಊರೊಟ್ಟಿನವರಿಂದ ಮಾತ್ರ ಇಪ್ಪತ್ತೈದು ರೂಪಾಯಿಗಳನ್ನು ವಸೂಲುಮಾಡಿಕೊಳ್ಳುತ್ತಿದ್ದನು.

ಈ ಸಂಪಾದನೆಯನ್ನೆಲ್ಲಾ ಗಂಟುಹಾಕಬೇಕೆನ್ನುವ ಜಿಪುಣಬುದ್ಧಿ ಸೆತ್ತಿಯಲ್ಲಿರಲೇಇಲ್ಲ. ಹಾಗೆ ಅವನು ಮಾಡಿದ್ದರೆ ಈವರೆಗೆ ಅವನು ಹತ್ತು ಸಾವಿರದವರೆಗೂ ಕೂಡಿಡಬಹುದಾಗಿತ್ತಂತೆ. ಅದು ಅವನು ಹೇಳುವ ಮಾತು. ಆದರೂ ಬಂದುದನ್ನು ಅವನು ಆಯಾ ಊರಿನಲ್ಲಿಯೇ ಚೆಲ್ಲಾಡಿ ಹೋಗುತ್ತಿದ್ದುದಂತೂ ನಿಜ. ಅದರಲ್ಲಿ ಗಾಂಜದ ಖರ್ಚೇ ಅರ್ಧವಾಗಿರುತ್ತಿತ್ತು. ಇನ್ನುಳಿದುದು ರಾಮರಸ, ಉಪ್ಪಿಟ್ಟು, ಕೆಲಸಕ್ಕೆ ಬಾರದ ಬಣ್ಣಬಣ್ಣದ ಬಟ್ಟೆಗಳು, ಪೋಲಿಹೆಂಗಸರಿಗೆ ಕೊಡುತ್ತಿದ್ದ ಕಪ್ಪಕಾಣಿಕೆಗಳಲ್ಲಿ ಮುಗಿಯುತ್ತಿದ್ದುವು.

ಈ ಸಂಪ್ರದಾಯಗಳ ಪೈಕಿ ಕೊನೆಯದಾದ ಕಪ್ಪಕಾಣಿಕೆಗಳ ವಿಷಯಮಾತ್ರ ಕಿರೀಕಾಟೆಯಲ್ಲಿ ಎರಡು ತಿಂಗಳು ಕಳೆದರೂ ಹೊರಗೆ

ಬರಲಿಲ್ಲ. ಸೆತ್ತಿಗೆ ಆ ಊರನ್ನು ಹೊಕ್ಕ ಮೊದಲನೇ ದಿನವೇ ತಾಯಕ್ಕನ ದರ್ಶನವಾಗಿ ಆ ರಾತ್ರಿಯಲ್ಲೇ ಮಾತು ನಡೆಯಿತು. ಹುಡುಗರಿಂದ ಅವಳ ಸಮಾಚಾರಗಳನ್ನೆಲ್ಲಾ ಸಂಗ್ರಹಿಸಿದ್ದೂ ಆಗಿತ್ತು. ದಿಕ್ಕಿಲ್ಲದ ಹೆಂಗಸೆಂದು ಸೆತ್ತಿಗೆ ಸದರವಾಗಿ ತೋರಿತು. ಮಿಕ್ಕ ಮನೆಗಳಲ್ಲೆಲ್ಲಾ ಸೊಳ್ಳೆಯೆಂಬ ನೆವ ತೆಗೆದು ಉಳಿದ ಅರ್ಧರಾತ್ರಿಯನ್ನು ತಾಯಕ್ಕನ ಜಗುಲಿಯಮೇಲೆ ಕಳೆಯುತ್ತಿದ್ದನು.

ಸೆತ್ತಿಯ ಯೋಗ್ಯತೆ ಊರಿನವರಿಗೆಲ್ಲ ಚೆನ್ನಾಗಿ ಗೊತ್ತು. ಹಿರಿಯರೊಬ್ಬರೂ ಅವನೊಡನೆ ಮಾತನಾಡುವುದಕ್ಕೆ ಅಪೇಕ್ಷೆ ಪಡುತ್ತಿರಲಿಲ್ಲ. ಹಿಂದೆಯೂ ಆಡುತ್ತಿರಲಿಲ್ಲ. ಏಕೆಂದರೆ "ನಾಟಕದ ಮೇಷ್ಟ್ರು"ಗಳಿಗೆ ಯುವಕರ ಒತ್ತಾಸೆ ಚೆನ್ನಾಗಿರುತ್ತದೆ. ಮೇಲಾಗಿ ಅವನು ಆಗಾಗ್ಗೆ "ಗುಬ್ಬಿ ಕಂಪನಿ" "ಚಾಮುಂಡೇಶ್ವರಿ ಕಂಪನಿ"ಗಳ ಮಾತೆತ್ತಿ ಮುಂದಾಳುಗಳಿಗೆ ಮಾಯಮಾಡಿಬಿಡುತ್ತಿದ್ದ. ಅವನ ದುರ್ಗುಣಗಳಿಗೆಲ್ಲ ಆ ಮೋಡಿ ರಕ್ಷಣೆಯಾಗಿತ್ತು. ಹೀಗಾಗಿ ಯೋಗ್ಯಳಾಗಿರಬೇಕಾದ ಜವಾಬ್ದಾರಿಯನ್ನೆಲ್ಲಾ ತಾಯಕ್ಕನಿಗೇ ಹೊರಿಸಿದಂತಿತ್ತು.

ಸೆತ್ತಿ ತನ್ನ ಮನೆಯ ಜಗುಲಿಯಲ್ಲಿ ಮಲಗಿರುವುದನ್ನು ರೂಢಿಮಾಡಿಕೊಂಡದ್ದನ್ನು ತಿಳಿದುಕೊಂಡ ದಿನದಿಂದ ತಾಯಕ್ಕ ಅಶಾಂತಳಾದಳು- ಸಾಮಾನ್ಯವಾಗಿ ಅವಳು ತಲೆಬಾಗಿಲಿಗೆ ರಾತ್ರಿಯ ಹೊತ್ತು ಅಗಣಿ ಹಾಕುತ್ತಲೇ ಇರಲಿಲ್ಲ- ಅಥವಾ ಹಾಕಲಾಗುತ್ತಿರಲಿಲ್ಲ. ಭಾರವಾದ ಆ ಬಾಗಿಲು ಕೆಳಕ್ಕೆ ಕುಸಿದು, ಹಚ್ಚುವಾಗ ತೆಗೆಯುವಾಗ ನೆಲವನ್ನು ಕೆರೆಯುತ್ತಿತ್ತು. ಅಸಾಧ್ಯ ಶಬ್ದ ಮಾಡುತ್ತಿತ್ತು. ಅದನ್ನು ಸರಿಪಡಿಸಲು ತಾಯಕ್ಕನಿಗೆ ನೂರು ರೂಪಾಯಿಗಳು ಖರ್ಚಾದವು. ಸೆತ್ತಿಯ ವಕ್ರದೃಷ್ಟಿ ಅವಳ ಜಗಲಿಯಕಡೆ ಬೀಳದಿದ್ದರೆ ಅವಳು ಖಂಡಿತ ಬಾಗಿಲನ್ನು ಸರಿಪಡಿಸುತ್ತಿರಲಿಲ್ಲ. ಸುಮ್ಮನೆ ಮುಂದಕ್ಕೆ ತಳ್ಳಿ ಗಾಳಿಗೆ ತೆಗೆದುಕೊಳ್ಳದಂತೆ ಒಂದು ಹಳೆಯ ಗುಂಡುಕಲ್ಲನ್ನು ಊರೆಕೊಟ್ಟು ಮಲಗುತ್ತಿದ್ದಳು.

ರೇಷ್ಮೆಹುಳುಗಳು ತಮ್ಮನ್ನು ಸಾಕುವವರನ್ನು ಸರಿಯಾಗಿ ನಿದ್ದೆ ಮಾಡಗೊಡುವುದಿಲ್ಲ. ಅರ್ಧರಾತ್ರಿ ಮತ್ತು ಬೆಳಗಿನ ಝಾವದಲ್ಲೊಂದು

ಸಾರಿ ಅವುಗಳಿಗೆ ಸೊಪ್ಪನ್ನು ಕತ್ತರಿಸಿಹಾಕಬೇಕು. ತಾಯಕ್ಕನ ಈ ಚಿಂತೆಯ ನಡುವೆ ಸೆತ್ತೆಯ ಕಾಟವೊಂದು ಕಡೆಯಾಗಿ ಆ ಬಾಗಿಲನ್ನು ಸರಿಮಾಡಿಸುವವರೆಗೂ ನಿದ್ದೆಯನ್ನೇ ಮಾಡುತ್ತಿರಲಿಲ್ಲ. ನಿದ್ದೆಗೆಡುವುದು ಬುದ್ಧಿಗೆಟ್ಟಂತೆಯೇ. ಚಿಕ್ಕಲಿಂಗಪ್ಪನವರ ಸಾಲಕ್ಕೆಂದು ಹುಳುವನ್ನು ಸಾಕುವುದಕ್ಕೆ ತೊಡಗಿದುದು. ಮೂರು ನಾಲ್ಕುಬಾರಿ ಹುಳುಗಳು ಹಣ್ಣಾದರೂ ಒಂದಲ್ಲ ಒಂದು ತೊಂದರೆಯಿಂದ ಅವರ ಸಾಲ ತೀರಿಸುತ್ತಿರಲಿಲ್ಲ. ಬೇಸಿಗೆ ಬೇರೆ ಕಳೆಯುತ್ತ ಬಂದಿತ್ತು. ಮನೆಯ ಹೆಂಚುಗಳೆಲ್ಲ ಮುರಿದು ಎರಡೆರಡು ಪಾಲಾಗಿದ್ದವು. ಅದನ್ನು ಕೈಯಾಡಿಸುವುದು ಬೇರೆ ಅಗತ್ಯವಾಗಿ ಬಿದ್ದಿತ್ತು. ಮಳೆಗಾಲಕ್ಕೆ ಸೂಚನೆಯಾಗಿ ದಿನಾ ಸಂಜೆ ಮೋಡ ಕವಿಯುತ್ತಿತ್ತು. ದಿನವೆಲ್ಲ ಒಂದು ತರಹ ಶೀತಗಾಳಿ ಬೇರೇ ಬೀಸುತ್ತಿತ್ತು. ಆ ಗಾಳಿಯಲ್ಲಿ ಹೊಲಗಳಲ್ಲಿ ತಿರುಗಿ ಅಡಿಗೆಮನೆಯೊಳಗೆ ಹೊಗೆ ಕುಡಿದು ಒಂದೇಸಮ ನಿದ್ದೆಗೆಟ್ಟು ತಾಯಕ್ಕನಿಗೆ ಆರೋಗ್ಯ ತಪ್ಪುತ್ತಿತ್ತು. ಅದರಿಂದ ಸಿಟ್ಟುಮಾತ್ರ ಪದೇ ಪದೇ ಬಂದು ಮಕ್ಕಳಮೇಲೆ ಹಾಯ್ದು ಹೋಗುತ್ತಿತ್ತು

ಈಚೀಚೆಗಂತು ಮಲ್ಲೇಶ ತೀರ ತುಂಟನಾಗಿ ಹೋಗಿದ್ದನು. ಅವನಿಂದ ಮನೆಗೆ ಯಾವ ವಿಧವಾದ ಸಹಾಯವಿಲ್ಲದಿದ್ದರೂ ಬೇಡ. ಕಿರುಕುಳವಿಲ್ಲದಿದ್ದರೆ ಸಾಕಾಗಿತ್ತು. ಸಾಮಾನ್ಯವಾಗಿ ದಿನತಪ್ಪಿದಿನ ಹುಚ್ಚನೋ ಅಥವಾ ಚಿದಂಬರನೋ ಮಲ್ಲೇಶನಮೇಲೆ ದೂರುಹೊತ್ತು ತಾಯಕ್ಕನಿಗೆ ಬಂದು ವರದಿ ಒಪ್ಪಿಸುತ್ತಿದ್ದರು. ಅದರ ಮಾರನೇ ದಿನವೇ ಅವರನ್ನು ಮಲ್ಲೇಶ ಹೊಡೆದ ಸಂಗತಿ ಸಿದ್ಧ.

ನಿಜಕ್ಕೂ ಮಲ್ಲೇಶ ಸ್ಕೂಲಿಗೆ ಸರಿಯಾಗಿ ಹೋಗುತ್ತಲೇ ಇರಲಿಲ್ಲ. ತಮ್ಮ ಊರನ್ನು ಬಿಟ್ಟು ದೊಡ್ಡ ಊರಿಗೆ ಹೋಗಿ ಅಲ್ಲಿಯ ಹುಡುಗರ ತರಹೇವಾರಿ ಆಟಗಳನ್ನು ಆಡುವುದಕ್ಕೆ ಸ್ಕೂಲು ಒಂದು ನೆಪ ಮಾತ್ರ. ಸ್ಕೂಲಿರಲಿ ತಾನು ತೆಗೆದುಕೊಂಡು ಹೋಗುತ್ತಿದ್ದ ಪುಸ್ತಕದ ಚೀಲವನ್ನೇ ಎರಡುಬಾರಿ ಎಲ್ಲಿಯೋ ಮರೆತುಬಂದಿದ್ದ. ತಾಯಕ್ಕ ಇವಕ್ಕೆಲ್ಲ ಅವನನ್ನು ದಂಡಿಸುತ್ತಲೇ ಇದ್ದಳು. ನೋವಾಗುವಂತೆ ಏಟುಗಳನ್ನು ಕೊಡುತ್ತಿ

ದ್ದರೂ ಅವಳು ಮನಸ್ಸಿಟ್ಟು ಹೊಡೆಯುತ್ತಿರಲಿಲ್ಲವಾಗಿ ಆ ನೋವು ಮಲ್ಲೇಶನ ಮನಸ್ಸನ್ನು ಮುಟ್ಟುತ್ತಿರಲಿಲ್ಲ.

ಎಷ್ಟೇ ಕಾಣದಂತೆ ತಾಯಕ್ಕ ತಾನು ಅವನನ್ನು ಹೊಡೆದದ್ದರ ಬಗ್ಗೆ ಮರುಕವನ್ನು ತೋರಿಸಿದರೂ ಅದನ್ನು ಮಲ್ಲೇಶ ಕಂಡುಹಿಡಿದುಕೊಳ್ಳುತ್ತಿದ್ದನು. ಅವನ ಬುದ್ಧಿ ಬಲು ಸೂಕ್ಷ್ಮ. ಅವಳು ಅವನಿಗೆ ಕೊಟ್ಟ ಒಂದಾಣೆಯ ಹಿಂದೆ ತನಗೆ ಬಿದ್ದ ಕಡ್ಡಿಯ ಏಟಿಗೆ ಸಂಬಂಧಪಟ್ಟ ಕಳವಳವಿದೆ ಎಂಬುದು ಅವನಿಗೆ ತಿಳಿದುಹೋಗುತ್ತಿತ್ತು. ಆದುದರಿಂದ ಅವನಿಗೆ ಏಟುಗಳ ವ್ಯಾಪಾರದಲ್ಲಿ ಲಾಭ ಕಂಡುಬಂದಿತು. ಅವನಿಗೆ ಕಾಸು ಬೇಕಾದಾಗ ಒಂದು ಅಪರಾಧವನ್ನು ಮಾಡಿ ಅದರಿಂದ ಕಾಸನ್ನು ಸಂಪಾದಿಸಿಕೊಳ್ಳುತ್ತಿದ್ದನು. ಅಕಸ್ಮಾತ್ ಕಾಸನ್ನು ತಾಯಿ ಕೈಯಾರ ಕೊಡದೇಹೋದರೆ ಅಂಥಾ ಸಮಯದಲ್ಲಿ ಇರುವ ಕಡೆಯಿಂದ ಆ ಕಾಸನ್ನು ಎತ್ತಿಕೊಂಡರೂ ಕ್ಷಮೆಯಿರುವುದೆಂದು ಅವನಿಗೆ ಗೊತ್ತು.

ಕಾಸುಗಳು ಅವನಿಗೆ ಬೇಕಾಗುತ್ತಿದ್ದುದು ಗೋಲಿಯಾಟಕ್ಕೆ. ಪ್ರತಿ ದಿನ ಗೋಲಿಯನ್ನು ಕೈಯಲ್ಲಿ ಹಿಡಿಯದೇ ಅವನ ಮನಸ್ಸಿಗೆ ನೆಮ್ಮದಿ ಸಿಕ್ಕುತ್ತಿರಲಿಲ್ಲ. ಗೋಲಿಯಾಟವೆಂದರೆ ಅವನಿಗೆ ಬಲು ಪ್ರೀತಿ. ತದೇಕಚಿತ್ತನಾಗಿ ಆಡಿ ಆಡಿ ಅವನಿಗೂ ಗುರಿ ಬಂದುಬಿಟ್ಟಿತ್ತು. ಗೋಲಿಗಳು ಅವನ ಪಾಲಿಗೆ ಬಂಡೆಗಳಷ್ಟು ದಪ್ಪ ಕಾಣಿಸುತ್ತಿದ್ದವೇನೋ ಅಷ್ಟು ಸುಲಭವಾಗಿ ಹೇಳಿದ ಗೋಲಿಗೆ ಕೈಯಲ್ಲಿದ್ದ ಗೋಲಿಯಿಂದ ಹೊಡೆಯುತ್ತಿದ್ದನು. ಗೆಲ್ಲುತ್ತಿದ್ದನು. ಸೋತಾಗ ಇವನ ಕಾಸುಗಳನ್ನು ತೆಗೆದುಕೊಳ್ಳುತ್ತಿದ್ದ ಇವನ ಗೆಳೆಯರು ಗೆದ್ದಾಗ ಹಿಂದಿರುಗಿಸುವುದಕ್ಕೆ ಮಾತ್ರ ಸ್ವಲ್ಪ ಗುದ್ದಾಡುತ್ತಿದ್ದನು. ಅಂತಹ ಸನ್ನಿವೇಶಗಳಿಂದಲೇ ಮಲ್ಲೇಶನೂ ಗುದ್ದಾಡುವುದನ್ನೂ ಕಲಿತದ್ದು. ಕೈತುಂಬಾ ಕಾಸಿದ್ದಾಗ ಗೆದ್ದ ಕಾಸುಗಳೆಂಬ ಔದಾಸೀನ್ಯದಿಂದ ಚೆಲ್ಲಾಡುತ್ತಿದ್ದನು. ಸೋತಾಗ ಅವರಂತೆಯೇ ಗುದ್ದಾಡುತ್ತಿದ್ದನು ಇದರಿಂದ ಅವನಲ್ಲಿ ಬೆಳೆದುಕೊಂಡ ಗುಣ ಎರಡು. ಕೈಯಿನ ಗುರಿ ಮತ್ತು ಗುದ್ದಾಡುವ ಧೈರ್ಯ.

ಎರಡೇ ಅಲ್ಲ, ಮೂರನೆಯದೂ ಒಂದಿತ್ತು. ಕಾಸು ಗುದ್ದಾಟಗಳೆರಡೂ ಸಂಪೂರ್ಣವಾಗಿ ತೀರಿಹೋದಾಗ ಗೋಲಿಯಾಟದಲ್ಲೇ ಬೇಸರ ಬರುತ್ತಿತ್ತು. ಆಗ ಅವನ ಮುಂದಿನ ವಿಹಾರ ಹೊಳೆಯಲ್ಲಿ ಹೋಗಿ ಈಜುವುದು. ಮುಳುಗಿಸಿಕೊಳ್ಳುವ ನೀರಿನೊಳಕ್ಕೆ ಬಿದ್ದು ತೇಲುವುದೂ ಅವನಿಗೆ ಗೋಲಿಯಾಟದಂತೆಯೇ. ಕಾಸನ್ನು ಕಳೆದುಕೊಳ್ಳಬಹುದಾದ ಗೋಲಿಯಾಟಕ್ಕೆ ಇಳಿದು ಕಾಸನ್ನು ಗೆಲ್ಲುವಂತೆ, ನೀರಿನಲ್ಲಿ ತೇಲುವುದನ್ನು ಕಲಿಯುವುದಕ್ಕಿಂತ ಹೆಚ್ಚು ಸ್ಕೂಲಿನಲ್ಲಿ ಕಲಿಯುವುದೇನೂ ಇಲ್ಲ ಎಂಬ ಭಾವನೆ ಅವನಲ್ಲಿ ಬಂದಿತ್ತು. ಹಾಗೆ ಹಾಯಾಗಿ ಈಜುತ್ತಿರುವಾಗ ಅವನಿಗೆ ಒಮ್ಮೊಮ್ಮೆ ತನ್ನ ತಾಯಿಯು 'ಒಳೇ ಕಡೀಕ್ಮಾತ್ರ ಓಗ್ಬ್ಯಾಡ ಮಲ್ಲು' ಎನ್ನುತ್ತಿದ್ದುದು ಜ್ಞಾಪಕಕ್ಕೆ ಬಂದು ನಗು ಬರುತ್ತಿತ್ತು. ಹೊಳೆ ಕಡೆಗೆ ಹೋಗುವುದಿರಲಿ, ಹೊಳೆಯೇ ಅವನಿರುವ ಕಡೆಗೆ ನುಗ್ಗಿ ಬಂದರೂ ತನಗೀಗ ಭಯವಿಲ್ಲವೆಂಬುದನ್ನು ತನ್ನ ತಾಯಿಗೊಮ್ಮೆ ತೋರಿಸಬೇಕೆನಿಸುತ್ತಿತ್ತವನಿಗೆ.

ಒಂದು ದಿನ ತಾಯಕ್ಕ ಏಕೋ ಚಳಿ ಚಳಿಯೆಂದು ಮಧ್ಯಾಹ್ನವೆಲ್ಲ ಬಿಸಿಲಿನಲ್ಲೇ ಕುಳಿತಿದ್ದು ಹೊತ್ತುಬಿದ್ದಮೇಲೆ ಮಲಗಿಯೇ ಬಿಟ್ಟಳು. ಸ್ವಲ್ಪ ಹೊತ್ತಾದ ಮೇಲೆ ಮಲ್ಲೇಶ ಬರದೇ ಇರುವುದು ಜ್ಞಾಪಕಕ್ಕೆ ಬಂದು ಮೆಲ್ಲಗೆ ಎದ್ದು ಹುಚ್ಚನ ಮನೆಯ ಕಡೆ ಹೊರಟಳು. ಹುಚ್ಚನೂ ಬಂದಿಲ್ಲವೆಂಬುದು ತಿಳಿದಮೇಲೆ ಸ್ವಲ್ಪ ನೆಮ್ಮದಿಯಾಯಿತು. ಪುನಃ ಮನೆಯ ಕಡೆ ಬಂದಳು. ಅವಳು ಇನ್ನೂ ಮನೆಯನ್ನು ತಲುಪಿಯೇ ಇರಲಿಲ್ಲ. ಅಷ್ಟರಲ್ಲಿ ಹುಚ್ಚ ಮೇಲುಸಿರು ಬಿಡುತ್ತಾ ಓಡಿ ಬಂದು ಹೇಳಿದನು.

"ಚಿಕ್ಕವ್ವಾ, ಮಲ್ಲೇಸ ಒಳೇಲಿ ಮೀಸ್ಕ ಬಿಳ್ತೀನಿ ಅಂತ ಹೋಗಿ ಮುಳೀಕಂಡು ಬುಟ್ಟಿದ್ನಂತೆ. ಯಾರೋ ಎಳ್ದೀಚ್ಗೆ ಹಾಕಿ, ಇಸ್ಕೂಲಿಗೆ ಬಂದು ಏಳಿದ್ರು. ನಮ್ಮೇಷ್ಟ್ರೇ ಬಂದವರೇ ಮಲ್ಲೇಸನ್ನ ಕರ್ಕಂಡು........ ಬನ್ನಿ"

ತಾಯಕ್ಕನ 'ಝುಂಗಾಲುಬಲ' ಉಡುಗಿಹೋಯಿತು. ಜ್ವರ ಮರೆತುಹೋಯಿತು. ಹಿಂದಕ್ಕೆ ಓಡಿದಳು. ಪ್ರೈಮರಿ ಸ್ಕೂಲಿನ ಬಳಿ

ಒಂದು ಒಂಟೆತ್ತಿನಗಾಡಿ ನಿಂತಿತ್ತು. ಅದರಲ್ಲಿ ಮಲ್ಲೇಶ ಮಲಗಿದ್ದ. ಕೆಳಗಿಳಿದು ನಿಂತಿದ್ದವರು ತಾಯಕ್ಕನನ್ನು ನೋಡಿ ಏನೇನೋ ಹೇಳಿದರು. ಅದೊಂದೂ ಅವಳ ಕಿವಿಗೆ ಬೀಳಲೇ ಇಲ್ಲ. ಮಗನನ್ನು ಮೊದಲು ಎಳೆದು ಹೆಗಲಿಗೆ ಹಾಕಿಕೊಂಡಳು, ಆಗಲೇ ಸೇರಿದ್ದ ನಾಲ್ಕಾರು ಜನರೆದುರಿಗಿರಲು ಅವಳಿಗೆ ತೀರ ನಾಚಿಕೆಯಾಗಿ. ಆ ಅವಮಾನದಿಂದಲೇ ಹುಟ್ಟಿದ ಶಕ್ತಿಯಿಂದ ತನ್ನ ಮನೆಗೆ ಓಡಿದಳು.

ಹಿಂದಿನಿಂದ ಮಲ್ಲೇಶನನ್ನು ಕರೆತಂದಿದ್ದ ಮೇಷ್ಟ್ರು ಬಂದರು. ಅವರು ಹೇಳಿದ ಬುದ್ಧಿವಾದಗಳನ್ನೆಲ್ಲಾ ತಾಯಕ್ಕ ತಲೆ ತಗ್ಗಿಸಿ ಕೇಳಿದಳು. ತನ್ನ ಮಗನು ತುಂಟನೆಂಬುದನ್ನು ಒಪ್ಪಿಕೊಂಡು ಇನ್ನು ಮೇಲೆ ಅವನನ್ನು ಅವನನ್ನು ಸ್ಕೂಲಿಗೇ ಕಳಿಸುವುದಿಲ್ಲವೆಂದಳು. ನರಿಯಾಲದ ಸಂತೆಯಿಂದ ಹೆಂಚು ತರಲು ಇಟ್ಟಿದ್ದ ದುಡ್ಡಿನಿಂದ ಒಂದೂವರೆ ರೂಪಾಯನ್ನು ಗಾಡಿಯ ಬಾಡಿಗೆಗಾಗಿ ಕೊಟ್ಟಳು.

ಆ ಗಡಿಬಿಡಿಯ ಮಧ್ಯೆಯೂ ಮೇಷ್ಟರ ಹೆಸರನ್ನು ತಿಳಿದುಕೊಳ್ಳಬೇಕೆಂದು ಅವಳಿಗೆ ಏಕೋ ಮನಸ್ಸಾಯಿತು. ಅವರ ಹೆಸರು ದೇವರಾಜೇ ಅರಸು ಎಂತಲೂ ಅವರು ಕಿರೀಕಾಟೆಯ ಮಠದಟ್ಟಿ ಜವನಪ್ಪನಿಗೆ ತುಂಬಾ ಬೇಕಾದವರೆಂತಲೂ ತಿಳಿಯ ಬಂದಿತು. "ಬುದ್ಧಿ, ನಿಮ್ಮಿಂದ ನನ್ನ ಮನೆ ಉಳೀತು" ಎಂದು ತಾಯಕ್ಕ ಅವರಿಗೆ ಎರಡು ಕೈಗಳನ್ನೂ ಮುಗಿದು ಕಳುಹಿಸಿಕೊಟ್ಟಳು.

ಅವರು ಹೋದ ಒಂದು ಘಂಟೆಯೊಳಗೆ ಗಾಳಿ ಹಾಗೆ ಹೀಗೆ ಬೀಸಿ ಮಳೆಯ ಹನಿಗಳು ತೂರಿಬಂದವು. ಸ್ವಲ್ಪ ಹೊತ್ತಾದ ಮೇಲೆ ಮಳೆಗಟ್ಟಿಯೇ ಆಯಿತು. ಎಷ್ಟು ಹೊತ್ತಾದರೂ ಬಿಡಲೇ ಇಲ್ಲ. ಮನೆಯೆಲ್ಲ 'ತತಾತೂತು'. ಮಲ್ಲೇಶನನ್ನು ಮಲಗಿಸಿಕೊಳ್ಳಲು ಸೋರದ ಒಂದು ಜಾಗವನ್ನು ಹುಡುಕುವುದರಲ್ಲೇ ಮಧ್ಯರಾತ್ರಿಯಾಯಿತು. ಊಟವಂತೂ ಪುಟ್ಟತಾಯೊಬ್ಬಳೇ ಮಾಡಿದವಳು. ಕಂಬಳಿಯೊಳಗೆ ಮಕ್ಕಳಿಬ್ಬರೂ ಸೇರಿದರು. ದೀಪ ಉರಿಯುತ್ತಲೇ ಇತ್ತು. ಎಮ್ಮೆಗೇನೋ ಮಳೆಯಲ್ಲಿ ಆನಂದವೇ. ಕರುಮಾತ್ರ ಆಗಾಗ್ಗೆ ಕಿರುಚಿಕೊಳ್ಳುತ್ತಿತ್ತು. ಮಲ್ಲೇಶ

ಸದ್ದುಗಲಗಿಲ್ಲದೇ ಬಿದ್ದಿದ್ದನು. ತಾಯಕ್ಕ ಕುಳಿತೇ ಇದ್ದಳು. ಮಳೆ ಮಾತ್ರ ನಿಲ್ಲಲೇ ಇಲ್ಲ.

ಛಟಾರನೆ ಸಿಡಿಲೊಂದು ಹೊಡೆಯಿತು. ಮಲಗಿದ್ದ ಎಮ್ಮೆ ಎದ್ದು ನಿಂತಿತು. ತಟ್ಟಿಗಳಲ್ಲಿದ್ದ ಸಾವಿರಾರು ರೇಷ್ಮೆ ಹುಳುಗಳೂ ಒಮ್ಮೆಗೇ ತಲೆಯನ್ನು ಮೇಲೆತ್ತಿದವು. ಮಲ್ಲೇಶ ಗಾಬರಿಯಿಂದ ಬೆಚ್ಚಿಬಿದ್ದನು. ತಾಯಕ್ಕ ಅವನನ್ನು ತಟ್ಟಿ, ಎದೆಯನ್ನು ನೇವರಸಿದಳು. ಬೀದಿಯ ಬಾಗಿಲು ಸದ್ದಾದ ಹಾಗಾಯಿತು. ಅನಂತರ ಯಾರೋ ಕುಟ್ಟಿದಂತೆಯೂ ಆಯಿತು. ಕುಟ್ಟುತ್ತಿದ್ದವರ ಧ್ವನಿ ಕೇಳಿತು. ಮೃದುಮಾಡಿ ಕೊಂಡಿದ್ದ ಕರ್ಕಶಧ್ವನಿ.

"ತಾಯಿ........ತಾ....ಯಿ !........ಒಸಿ ಬಾಗಲು ತಗೀ....ಜಗಲೀ ಎಲ್ಲಾ ಸೋರ್‍ತದೆ........ತಾಯಿ........ಸಟಗೆ ಬಾಗಿಲು ತಗಿ........ತಾಯಿ ತಾಯಿ !...."

ಅದು ಯಾರೆಂಬುದು ತಾಯಕ್ಕನಿಗೆ ಗೊತ್ತು. ಅವಳ ಹಲ್ಲುಗಳು ಕೋಪದಿಂದ ಮಸೆದವು. ತನ್ನ ಜ್ವರ, ತನ್ನ ಮಗನ ಸ್ಥಿತಿ, ಈ ಸೆತ್ತೆ ನಿಂಗನ ರೂಪದಲ್ಲಿ ಪ್ರಪಂಚ, ಅನಾಥರನ್ನು ವಿಲಾಸಕ್ಕೆ ಕರೆಯುತ್ತಿದ್ದ ಬಗೆಯನ್ನು ಯೋಚಿಸಿಕೊಂಡು ಅವಳಿಗೆ ಅಳು ಬಂದಿತು.

"ತಾಯಿ ! ತಾಯಿ........" ನಡದೇ ಇತ್ತು.

ತಾಯಕ್ಕ ರೋಷದಿಂದ ಕಡೆಗೊಮ್ಮೆ "ಯ್ಯೋ........ಗ್ಯಾನಾಗೀನಾ ನೆಟ್ಟಗೈತೋ ಇಲ್ವಯ್ಯಾ ?" ಎಂದು ಚೀರಿದಳು.—

ಮತ್ತೂ ದೈನ್ಯದಿಂದ "ತಾಯಿ........ಒಸಿ........ಇದೊಂದೇ ಜಿನ !" ಪ್ರಲಾಪ ಮುಂದುವರಿದಿತ್ತು.

ಬಾಗಿಲು ತೆರೆಯಲಿಲ್ಲ.



ಹೆಂಚು ಕ್ರೈಯಾಡಿಸಿರಲಿಲ್ಲ. ಮೊದಲನೇ ಮಳೆಯೇ ಅದಗ್ರ ಫಲ ವನ್ನು ತೋರಿಸಿಬಿಟ್ಟಿತು. ಚೆನ್ನಾಗಿ ಹೊಳೆಯ ನೀರನ್ನು ಕುಡಿದಿದ್ದ ಮಗನನ್ನು ಮಳೆಯಿಂದ ರಕ್ಷಿಸಲು ತಾಯಕ್ಕ ಕಂಬಳಿಯನ್ನು ತೆಗೆದು ಕೊಂಡದ್ದರಿಂದ ಅನಾಹುತವಾಯಿತು. ಹುಳುಗಳೆಲ್ಲಾ ನೀರಿನಲ್ಲಿ ಆ ರಾತ್ರಿ ಚೆನ್ನಾಗಿ ನೆನೆದವು. ಇಪ್ಪತ್ತು ದಿನಗಳ ಶ್ರಮ ವ್ಯರ್ಥವಾಯಿತು.

ಬೆಳಗಿನ ಝೂವದ ಸೊಪ್ಪು ಹಾಕಲು ತಾಯಕ್ಕ ಎದ್ದು ನೋಡಿ ದಾಗ ಅದರ ಅಗತ್ಯವೇ ಕಾಣಲಿಲ್ಲ. ಹುಳುಗಳನ್ನು ತಿಪ್ಪೆಗೆ ಸುರಿಯ ಬೇಕಾದ ಕೆಲಸಮಾತ್ರ ಬಾಕಿಯಿತ್ತು. ತಾಯಕ್ಕನ ರೇಷ್ಮೆ ಹುಳುವನ್ನು ಸಾಕುವ ಹಟ ಅಂದಿಗೆ ಬಿಟ್ಟುಹೋಯಿತು. ಅದರಿಂದ ತಾನು ಸಂಪಾದಿಸುವ ಭ್ರಾಂತಿಯನ್ನೇ ಅವಳು ಬಿಟ್ಟಳು. ತಾನು ಪಟ್ಟ ಶ್ರಮುವನ್ನೆಲ್ಲಾ ನೆನೆಸಿ ಕೊಂಡು ಗಟ್ಟಿಯಾಗಿ ಅತ್ತಳು. ಅದನ್ನು ನೋಡುವುದಕ್ಕೆ ಇಷ್ಟವಿಲ್ಲವೋ ಏನೋ ಎನ್ನುವಂತೆ ಮಕ್ಕಳಿಬ್ಬರೂ ಕಣ್ಣುಮುಚ್ಚಿ ಮಲಗಿದ್ದರು.

ತಟ್ಟೆಯಲ್ಲಿನ ಹುಳುಗಳನ್ನೆಲ್ಲಾ ಕಸದ ಮಕ್ಕರಿಗೆ ತುಂಬಿಕೊಂಡು ಪುಟ್ಟತಾಯಿ ಎರಡುಬಾರಿ ಹೋಗಿ ತಿಪ್ಪೆಗೆ ಸುರಿದಳು. ಎಲ್ಲಿದ್ದವೋ ಅಷ್ಟು ಕಾಗೆಗಳು! ಕೊನೆಯ ಬಾರಿ ಸುರಿಯಲು ಹೋದಾಗ ಪುಟ್ಟತಾಯಿಗೆ ಭಯವೇ ಆಯಿತು. ಹದ್ದುಗಳು ಕಾಗೆಗಳು ಪುಟ್ಟತಾಯಿಯನ್ನೇ ಮುತ್ತಿ ದವು. ತನ್ನನ್ನೇ ಹೊತ್ತುಕೊಂಡು ಹೋಗುವುವೋ ಎನ್ನುವಷ್ಟು ಪುಟ್ಟ ತಾಯಿಗೆ ದಿಗ್ಭ್ರಮೆಯಾಯಿತು. ಒಂದೊಂದು ಕಾಗೆಯೂ ಹೊಟ್ಟೆ ತುಂಬುವಷ್ಟು ಹುಳುಗಳನ್ನು ನುಂಗಿತು. ಪಾಪ ಎಲ್ಲಾ ಹುಳುಗಳೂ ಜೀವಸಹಿತ ಅವುಗಳ ಆಹಾರವಾಯಿತು. ಗಂಡಾಳುಗಳಾಗಿದ್ದರೆ ತಿಪ್ಪೆ ಯನ್ನು ಬಗೆದು ಹುಳುಗಳಿಗೆ ಸಮಾಧಿ ಮಾಡುತ್ತಿದ್ದರು. ಹುಡುಗಿ ಪುಟ್ಟ ತಾಯಿಗೆ ತನ್ನನ್ನು ತಾನು ಉಳಿಸಿಕೊಂಡು ಬರುವುದೇ ದೊಡ್ಡ ಕೆಲಸ ವಾಯಿತು.

ತನ್ನ ತಾಯಿ ಪಟ್ಟ ಶ್ರಮವೆಲ್ಲಾ ಹದ್ದು ಕಾಗೆಗಗಳು ಇಲ್ಲದಂತೆ ಮಾಡಿಬಿಟ್ಟು ಎಲ್ಲೆಲ್ಲಿಗೋ ಹಾರಿಹೋದವು. ಪುಟ್ಟತಾಯಿಗೂ ಬಲು ದುಃಖವಾಯಿತು. ಮನೆಯಲ್ಲಿ ಅಡಿಗೆಗೂ ಗಮನ ಕೊಡದೇ ಪೆಚ್ಚಾಗಿ ಒಂದು ಕಡೆ ಕುಳಿತಿದ್ದ ತಾಯಿಯನ್ನು ನೋಡಿ ಮಗಳಿಗೇ ಕನಿಕರವಾಯಿತು. ತಾಯಿಯೇ ಹುಳುಗಳನ್ನು ಸುರಿಯಲು ಹೋಗಿದ್ದರೆ ಆ ಕಾಗೆಗಳನ್ನು ಕಂಡು ದುಃಖಪಡುತ್ತಿದ್ದಳೆಂದೂ ಅದನ್ನು ತಾನು ತಪ್ಪಿಸಿದೆನೆಂದೂ ಪುಟ್ಟ ತಾಯಿಗೆ ಒಂದು ಸಮಾಧಾನವಾಯಿತು. ಸುಮ್ಮನೆ ಕುಳಿತಿದ್ದ ಅವಳಿಗೆ ತಾನು ಮಾಡಿದ ಕೆಲಸವನ್ನು ಹೇಳಿದಳು. ತಾಯಕ್ಕನಿಗೆ ಅದರಿಂದ ಕೋಪಮಾಡಿಕೊಳ್ಳುವ ಒಂದು ನೆವವೇಸಿಕ್ಕಿತು.

"ನೀಯಾಕೆ ಸುರ್‍ಯಕ್ಕೋದೆ ಮೂದೇವಿ. ಕಾಗ್ಗಳು ಬಂದು ನಿನ್ನ ಕಣ್ಣು ಗೋರಾಕಿದ್ರೆ ಮೂಲೇಲಿ ಕೂತ್ಗತಿದ್ಯಲ್ಲ. ನಾ ಸುರಿತಿದ್ದೆ. ಸಸನಿರಕ್ಕಿಲ್ದೇ ಒಯ್ತು ?"

ಎಂದ ಅವ್ವನ ಮಾತು ಕೇಳಿ ಪುಟ್ಟತಾಯಿಗೂ ಸಿಟ್ಟು ಬಂದಿತು. ಅವಳು ಆ ಸಿಟ್ಟನ್ನೆಲ್ಲಾ ತನ್ನ ಎಮ್ಮೆಯ ಮೇಲೆ ತೋರಿಸಿದಳು.

ಏನು ಮಾಡಿದರೂ ಪುಟ್ಟತಾಯಿಗೆ ಹೀಗೆಯೇ ಆಗುತ್ತಿತ್ತು. ಎಲ್ಲದರ ಮೇಲಿನ ಕೋಪವನ್ನೂ ತಾಯಕ್ಕ ಬಿಡುತ್ತಿದುದು ಮಗಳಮೇಲೆಯೆ. ಪುಟ್ಟತಾಯಿಯ ಮೇಲೆ ಪ್ರಯೋಗಿಸುತ್ತಿದ್ದ ರೋಷದ ಬಾಣಗಳಲ್ಲಿ ಅರ್ಧ ಮಲ್ಲೇಶನಮೇಲೆ ಪ್ರಯೋಗಿಸಿದ್ದರೆ ಅವನಂತ ಹಳ್ಳಿಯ ಹುಡುಗರೇ ಇರುತ್ತಿರಲಿಲ್ಲ. ಉಳಿದರ್ಧವನ್ನು ಪುಟ್ಟತಾಯಿಯಮೇಲೆ ಪ್ರಯೋಗಿಸಿದ್ದರೆ. ಅವಳಿಗೆ ಪರಿವೆಯಿರುತ್ತಿರಲಿಲ್ಲ. ಅವಳು ಎಷ್ಟೋ ಸಂತೋಷಪಡುತ್ತಿದ್ದಳು. ಹಾಗಾಗದಿದ್ದುದರಿಂದ ಪುಟ್ಟತಾಯಿಗೆ ತಾಯಿಯಮೇಲೆ ಬೇಸರ ಹುಟ್ಟುತ್ತಿತ್ತು. ಬಲು ಬೇಸರವಾದಾಗ ಅಂದೇಬಿಡುತ್ತಿದ್ದಳು.

'ನಮ್ಮಪ್ಪ ಸಾಯಕ್ಕೆ ಬದಲು ನೀನಾದರೂ ಸಾಯಬಾರದಾಗಿತ್ತ. ನನಗೆಷ್ಟೋ ಚಂದಾಗಿರದು'

ಪುಟ್ಟತಾಯಿ ಮನಸ್ಸಿಗೆ ಬಂದದ್ದನ್ನು ಬಂದಹಾಗೆಯೇ ಆಡಿಬಿಡುವ ಪದ್ಧತಿ. ಆಗ ತಾಯಕ್ಕನಿಗೆ ತನ್ನ ಗಂಡನ ನೆನಪಾಗುವುದು. ತನ್ನ ಗಂಡನಿಗೆ ಪುಟ್ಟತಾಯಿಯನ್ನು ಕಂಡರೆ ಎಷ್ಟು ಆಸೆ ಎಂಬುದೂ ಜ್ಞಾಪಕಕ್ಕೆ

ಬರುತ್ತಿತ್ತು ಈಚೀಚೆಗೆ ಪುಟ್ಟತಾಯಿಯು ಹೇಳುವಂತೆ ಆಗಿದ್ದರೆ ತನಗೂ ಚೆನ್ನಾಗಿರುತ್ತಿತ್ತು ಎನ್ನಿಸುತ್ತಿತ್ತು. ಮಗಳು ಆ ಮಾತು ಎತ್ತಿದ ದಿನಮಾತ್ರ ಅವಳಿಗೆ ಮಗಳಲ್ಲಿ ಕನಿಕರ. ಆ ದಿನವೇ ಪುಟ್ಟತಾಯಿಯ ತಲೆಯಲ್ಲಿ ಒಂದಷ್ಟು ಹೇನುಗಳು ಸತ್ತು ಕೂದಲಿಗೆ ಎಣ್ಣೆ ಬೀಳುತ್ತಿದ್ದುದು.

ಬಿಸಿಲಿನಲ್ಲಿ ಅಮ್ಮನ ಒತ್ತಿಗೆ ಸೇರಿಕೊಂಡು ಕಾಲುಚಾಚಿ ಕುಳಿತು ತಲೆಗೆ ಎಣ್ಣೆ ಹಾಕಿಸಿಕೊಂಡು ಹೇನು ಕುಕ್ಕಿಸಿಕೊಳ್ಳುವ ಸೌಖ್ಯ ನಮ್ಮ ಹಳ್ಳಿಯ ಹೆಣ್ಣುಮಕ್ಕಳಿಗೇ ಗೊತ್ತು. ಅದನ್ನು ವರ್ಣಿಸಿ ಸ್ಪಷ್ಟಪಡಿಸುವುದು ಯಾರಕೈಲೂ ಸಾಧ್ಯವಾಗದ ಕೆಲಸ-ಅವರಿಂದಲೂ ಆಗದ ಕೆಲಸ. ಹಾಗೆ ಅವರಿಗಾದ ಆನಂದವನ್ನು ಅದನ್ನು ಕೊಟ್ಟವರಿಗೆ ಹಿಂತಿರುಗಿಸುತ್ತಾರೆ. ಪುಟ್ಟತಾಯಿಯೂ ತನ್ನ ಕೇಶ ಸಂಸ್ಕಾರವಾದಮೇಲೆ ತಾನೆದ್ದು ತನ್ನ ತಾಯಿಯ ತಲೆಯನ್ನು ಸೋಸಲು ಕುಳಿತುಕೊಳ್ಳುತ್ತಿದ್ದಳು. ತಾಯಿ ಮಗಳ ಈ ಆತ್ಮೀಯತೆಯ ರಸನಿಮಿಷದಲ್ಲಿ ಸಂಭಾಷಣೆ ಏರ್ಪಡುತ್ತಿತ್ತು.

'ಪುಟ್ಟ ಅದೇನಾರಿ ತಲೇಲಿ ಏನು ಎಚ್ಚಿಸ್ಕಂಡಿದೀಯಮ್ಮಿ! ನನಗೆ ಕೈ ಬಿಡುವಾಗಿದ್ದಾಗ ಕೂತ್ಕಂಡು ಏಸಿಡೀಸ್ಕಬಾರ್ದ'

'ನೀನ್ಯಾವಾಗಲೂ ಸಿಡಾರ್ ಅಂತ್ಲೇ ಇರ್ತಿದ್ದಯಲ್ಲವ್ವ! ಮಾತಾಡ್ಸಕ್ಕೇ ಅಂಜತದೆ, ಇನ್ನು ಏನು ಕುಕ್ಕೋಡು ಅಂದರೆ ನೆತ್ತಿನೇ ಕುಕ್ಕುಬುಟ್ಟೆಯೋ ಏನೋ!'

'ಆ.....ನೀನು ಮಾತು ಕಲಿತುಬಿಟ್ಟೆ. ಇವತ್ನಂಗೇ ನಿನ್ನ ಬುದ್ಧಿ ಸದಾ ಇದ್ದರೆ ನಾನ್ಯಾಕೆ ಸಿಡಾರ್‌ಅನ್ನಿ ಪುಟ್ಟ ? ಇನ್ಮೇಲೆ ಬುದ್ದಿಯಾಗಿರು'

'ನನ್ನ ಬುದ್ಧಿ ಇಷ್ಟೇಕಣವ್ವ. ಯಾವಾಗಲೂ ಇಂಗೀಯೇ. ಮಲ್ಲೇಸನಷ್ಟು ಚುರುಕಾಗಿಲ್ಲ—ಏನುಮಾಡ್ಲಿ'

'ಅವನ ಚುರುಕುಬದ್ಧಿ ಏನು ಎಲ್ಲಿ—ಮನೆಹಾಳುಬುದ್ಧಿ'

'ಐ ಅಂಗೆನ್ಬೇಡಕಣವ್ವ. ಮಲ್ಲುಬುದ್ಧಿ ನಿಜವಾಗಲೂ ಚೂಟಾಗದೆ. ಅವ್ವ ಅವನಿಗೆ ಓದ್ಸದ್ನ ಬುಡಸಿಬುಟ್ಟೇಯವ್ವ ?'

'ನಾನವನ್ನ ಪುನಾ ಆ ಒಳೇ ಇರೋ ಊರಿಗೆ ಕಳೀಸಕ್ಕಿಲ್ಲ ಪುಟ್ಟ. ಅವನು ಓದಿ ಬೂದಿ ಮುಕ್ಕದಷ್ಟ್ರಲ್ಲೇ ಅದೆ.'

*

೫೬

'ಚೆ....ಚೆ ಅಂಗಮಾಡಬ್ಯಾಡಕಣವ್ವ. ನಮ್ಮಟ್ಟೇಲಿ ಅವನೊಬ್ಬ ನಾದರೂ ಓದಿ ದೊಡ್ಡಮನಸ್ನಾಗ್ಲಿ. ಕಳೀಸವ್ವ'

'ಊ. ಒಳೇಲಿ ಬಿದ್ದು ಜೀವ ಕೊಂದ್ಕತನೆ ಅಷ್ಟೆ. ಅವನ ದೊಡ್ಡ ಮನಸ್ತ ನಾನೂ 'ಉಚ್ಚ' ಎಳ್ದ. ಇಸ್ಕೂಲಿಗೆ ತಲೆ ತಪ್ಪಸ್ಕಂಡು, ಕಾಸು ಕಟ್ಕಂಡು ಗೋಲಿ ಆಡ್ತನಂತೆ. ನಾವಿಲ್ಲಿ ಒಟ್ಟೆಬಟ್ಟೆ ಕಟ್ಟಿ ಇವನ್ನ ಅಲ್ಲಿಗೇ ಕಳೀಸಿದ್ರೆ ಇವನು ಮಾಡೋ ಉಪಕಾರ ಇಷ್ಟೆ—ನಾನು ಕಳೀಸ ಕ್ಕಿಲ್ಲ ಅವನ್ನ'

"ಇಲ್ಲ ಕಣವ್ವ. ಇನ್ನುಮೇಲೆ ಅಂಗೆ ಮಾಡದಿಲ್ಲ, ಏನಾದರೂ ಮಾಡವ್ವ. ಅವನ್ನ ಇಸ್ಕೂಲಿಗೆ ಕಳಿಸದೇ ಇರಬ್ಯಾಡಕಣವ್ವ."

'ದಿನಬೆಳಗಾದರೆ ನಿಮ್ಮಿಬ್ಬರಿಗೂ ಕದನ ತಪ್ಪಿದ್ದಲ್ಲ. ಅದೇನು ಪುಟ್ಟೆ ಇವತ್ತು ಅವನ ಮೇಲೆ ನಿಂಗೆ ಶಾನೆ ಪ್ರೀತಿ ಬಂದುಬುಟ್ಟದಲ್ಲ?'

'ನಮ್ಮ ಮಲ್ಲು ಅಲ್ವೇನವ್ವ ಆವನು? ಏನೇ ಕದನಾ ಆಡಿದರೂ'

'ನಮ್ಮ ಮಲ್ಲು' ಎನ್ನುವ ಪುಟ್ಟತಾಯಿಯ ಮಾತು ಬಹಳ ಸಿಹಿ ಯಾಗಿ ತಾಯಕ್ಕನ ಕಿವಿಯನ್ನು ತಲುಪಿತು. ಆ ಮಾತು ಅವಳ ಕಿವಿಯ ಮೇಲೆ ಬಿದ್ದಘಳಿಗೆಯಲ್ಲಿ ತಾಯಕ್ಕ, ಮಗ ಮಲ್ಲೇಶನ ಸಕಲ ತಪ್ಪುಗ ಳನ್ನೂ ಮನ್ನಿಸಿಬಿಟ್ಟಳು. ಮಲ್ಲೇಶ ಈಗೆಲ್ಲಿರಬಹುದೆಂಬ ಯೋಚನೆಗೆ ಅವಳ ಮನಸ್ಸು ತೊಡಗಿತು.

ಮಲ್ಲೇಶ ನೀರಿನಲ್ಲಿ ಮುಳುಗಿಹೋಗಿದ್ದ ದಿನದಲಾಗಾಯಿತು ಸ್ಕೂಲಿಗೆ ಹೋಗುತ್ತಿರಲಿಲ್ಲ. ತಾಯಕ್ಕ ಖಂಡಿತವಾಗಿ ಅವನು ಊರು ಬಿಟ್ಟು ಎಲ್ಲಿಗೂ ಹೋಗಕೂಡದೆಂದು ಕಟ್ಟುಮಾಡಿಬಿಟ್ಟಿದ್ದಳು. ಅವನಿಗೆ ಯಾವ ಕೆಲಸವೂ ಇರಲಿಲ್ಲ. ಸ್ಕೂಲಿಗೆ ಕಳುಹಿಸುವುದಿಲ್ಲವೆಂಬ ಕೋಪ ವನ್ನು ತೆಗೆದು ಅವನು ಓದುತ್ತಲೂ ಇರಲಿಲ್ಲ. ಊಟದಹೊತ್ತಿನಲ್ಲಿ ಮಾತ್ರ ಮನೆಯ ಮುಖ ಕಾಣುತ್ತಿದ್ದುದು. ಉಳಿದ ಹಗಲು ಹೊತ್ತೆಲ್ಲಾ ಕೆರೆಯ ಕೆಳಗಿನ ಮಂಟಪದ ಬಳಿಯ 'ಕೆಂಜಗ'ದ ಗಿಡದಹತ್ತಿರ, ರಾತ್ರಿಯ ಅರ್ಧಹೊತ್ತೆಲ್ಲಾ ನಾಟಕದ 'ಕಂಪನಿಮನೆ'ಯಲ್ಲಿ—ಉಳಿದ ಎರಡುಝಾವ ಮಾತ್ರ ಮನೆಯಲ್ಲಿ ನಿದ್ದೆ.

ಪುಟ್ಟತಾಯಿಯು ತನ್ನ ತಾಯಿಗೆ ತಮ್ಮನ ಪರವಾಗಿ ಶಿಫಾರ್ಸು ಮಾಡಿದ ದಿನ ಭಾನುವಾರ. ಆದಿನ ಮಲ್ಲೇಶ, ಹುಚ್ಚನನ್ನೂ ಮಧ್ಯಾಹ್ನ ಕೆಂಜಗದ ಗಿಡದ ಹತ್ತಿರಕ್ಕೆ ಕರೆದನು. ಹುಚ್ಚನಿಗೆ ಈಚೀಚೆಗೆ ಮಲ್ಲೇಶ ನೆಂದರೆ ಮಹಾಕೇಡಿಗನೆಂಬ ಭಾವನೆ ಬಂದುಬಿಟ್ಟದ್ದುದರಿಂದ ಅವನು ಮಲ್ಲೇಶನ ಮಾತಿಗೆ ಉತ್ತರವನ್ನೇ ಕೊಡಲಿಲ್ಲ. ಈಚೆಗೆ ಚಿದಂಬರ, ಹುಚ್ಚ ಇಬ್ಬರೂ ತನ್ನ ಬಗೆಗೆ ಇದೇರೀತಿಯ ಅಸಹ್ಯಭಾಷನೆ ತಳೆದಿರುವುದು ಮಲ್ಲೇಶನನ್ನೂ ಬಲುಹಿಂಸೆ ಪಡಿಸುತ್ತಿತ್ತು. ಅವರಿಬ್ಬರೂ ಒಳ್ಳೆಯ ಹುಡುಗರೆನಿಸಿಕೊಂಡು ಸ್ಕೂಲಿಗೆ ಹೋಗುತ್ತಿದ್ದುದು ಮಲ್ಲೇಶನಿಗೆ ಹೊಟ್ಟೆ ಕಿಚ್ಚನ್ನೂ ಉಂಟುಮಾಡುತ್ತಿತ್ತು. ಈ ಭಾನುವಾರ ಖಂಡಿತ ಹುಚ್ಚ, ಚಿದಂಬರರ ಸ್ನೇಹವನ್ನು ಪುನಃ ಗಳಿಸಿ ಅವರ ಮೂಲಕ ತಮ್ಮ "ಅವ್ವ" ನಿಗೆ ಹೇಳಿಸಿ ಸ್ಕೂಲಿಗೆ ಹೋಗುವುದಕ್ಕೆ ಅವಕಾಶ ಮಾಡಿಕೊಳ್ಳಬೇಕೆಂದು ಗೊತ್ತು ಮಾಡಿಕೊಂಡಿದ್ದ ಮಲ್ಲೇಶನಿಗೆ ಹುಚ್ಚನ ಮೌನದಿಂದ ನಿರಾಶೆ ಯಾಯಿತು.

"ಲೋ ಹುಚ್ಚ! ನಿಮಗೆಲ್ಲಾ ನಾನೇನ್ರೋ ಮಾಡಿರದು? ನನ್ನ ಕಂಡರೆ ದಯ್ಯ ಕಂಡಂಗಾಡ್ತೀರಲ್ಲ—ಮಾತಾಡ್ರೋ!"

ಎಂದು ಬಲವಂತಮಾಡಿದ ಮಲ್ಲೇಶನಿಂದ ದೂರವಾಗಲು ಹುಚ್ಚ ಕಾಲುಗಳನ್ನು ಬೀಸಾಗಿ ಹಾಕಿ ಹೊರಟ. ಮಲ್ಲೇಶ ಕೈಗೆ ಒಂದು ಕಲ್ಲೆತ್ತಿ ಕೊಂಡು,

"ಹುಚ್ಚ ಎ! ನಿಂತ್ಗತೀಯೋ ಇಲ್ವೊ? ಇಲ್ನೋಡೋ"— ಕಲ್ಲನ್ನು ತೋರಿಸಿದ. ಹುಚ್ಚ ಹಿಂದಿರುಗಿನೋಡಿ ನಿಂತ. ಅವನಿಗೆ ಆಗಲೇ ಒಂದುಬಾರಿ ತಲೆ ಗಿರ್ರೆಂದು ತಿರುಗಿತ್ತು. ಒಡ್ಡ ಮಲ್ಲೇಶನ ಕೈ ಯಿನ ಕಲ್ಲು ಖಂಡಿತ ತನ್ನಮೈಯ ರಕ್ತ ಹೊರತರುವುದೆಂದು ತೀರ್ಮಾನಿಸಿ

"ಕಲ್ಲು ಬಿಸಾಕು ಮಲ್ಲು—ಅದ್ನ್ಯಾಕೆ ತಕಂಡೆ"

ಕನಿಕರವನ್ನು ಯಾಚಿಸುವ ಧ್ವನಿಯಲ್ಲಿ ಕೇಳಿದ ಹುಚ್ಚ. ತಟ್ಟನೆ ಮಲ್ಲೇಶ ಕಲ್ಲನ್ನು ತನ್ನ ಹಣೆಗೇ ಕುಕ್ಕಿಕೊಂಡು ಬಾಧೆಪಡುತ್ತಾ,

"ಇದಕ್ಕೆ—"ಎಂದನು. ಅವನ ಹಣೆಯಲ್ಲಿ ರಕ್ತ ಕಾಣಿಸಿತು. ಹುಚ್ಚ ಆ ಬಟ್ಟುರಕ್ತವನ್ನು ಕಂಡು ಕರಗಿಹೋದ. ಓಡಿಹೋಗಿ ಮಲ್ಲೇಶನ ಹಣೆಗೆ ಅಂಗೈಯನ್ನು ಒತ್ತಿಹಿಡಿದ. ಮಲ್ಲೇಶ ಕಣ್ಣಿನಲ್ಲಿ ನೀರುಹಾಕಿಕೊಂಡ. ಅವರಿಬ್ಬರೂ ಪುನಃ ಸಂಗಕಟ್ಟಿಕೊಂಡು ಆಗಿಯೇಹೋಯಿತು. ಹಣೆ ಚೆಚ್ಚಿಕೊಂಡು ಸ್ನೇಹಿತ ಹುಚ್ಚನನ್ನು ಜೊತೆಗೆ ಕರೆದುಕೊಂಡು ಮನೆಯೊಳಕ್ಕೆ ಬಂದ ಮಗನನ್ನು ಕಂಡು ತಾಯಕ್ಕ ಬಾಗಿಲಿಗೆ ಓಡಿಬಂದು ಅವನನ್ನು ಹಿಡಿದುಕೊಂಡಳು. ಹುಚ್ಚ ಸವಿಸ್ತಾರವಾಗಿ ನಡೆದುದನ್ನೆಲ್ಲಾ ವಿವರಿಸಿದ ತಾಯಕ್ಕನಿಗೆ ಮಗನ ಹಣೆಯಲ್ಲಿ ರಕ್ತವನ್ನು ಕಂಡ ಆ ಹೊತ್ತಿನಲ್ಲಿಯೂ ಮಲ್ಲೇಶನ ವಿಚಿತ್ರ ಆಕ್ರೋಶವನ್ನು ಕೇಳಿ ತಿಳಿದು ನಗುಬಂದಿತು. ಹುಚ್ಚನಿಗೆ ಹಳೆಯ ವೈಮನಸ್ಸು ಅದರಿಂದ ಮರೆಸಿಹೋದಂತೆಯೇ ತಾಯಕ್ಕನ ಕೋಪವೂ ಆ ನಗುವಿನಲ್ಲಿ ಮರೆಸಿಹೋಯಿತು.

ಎಮ್ಮೆ ಕರೆದುಕೊಳ್ಳಲು 'ಕೊಳದಪ್ಪಲೆ'ಯನ್ನು ಬೆಳಗಿಕೊಳ್ಳುತ್ತಿದ್ದ ಪುಟ್ಟತಾಯಿಯನ್ನೂ ತಾಯಕ್ಕ ಕೂಗಿ ಕರೆದಳು.

'ಲೇ ಪುಟ್ಟ, ನೋಡುಬಾ ಮಲ್ಲೇಶನ್ನ! ತಲೆ ಒಡಕಂಡು ಬಂದವ್ನೆ. ಈಗತಾನೆ ಒಗಳ್ತಾ ಇದ್ದಲ್ಲ ಇವನ್ನ! ಇವನ ಬೈರೂಪ ನೋಡುಬಾ'

ಪುಟ್ಟತಾಯಿ ಆತುರದಿಂದ ಹೊರಗೆ ಬಂದಳು. ತಮ್ಮನ ಅಂಗಿಯ ಮೇಲೆ ಬಿದ್ದಿದ್ದ ಎರಡು ತೊಟ್ಟು ರಕ್ತ ಅವಳನ್ನು ಚುಚ್ಚಿತು. ನಡೆದದ್ದನ್ನು ಹುಚ್ಚನಕೈಲಿ ವಿಶದವಾಗಿ ತಿಳಿದುಕೊಂಡಮೇಲೆ ತಮ್ಮನಲ್ಲಿ ಅವಳಿಗೂ ಒಂದು ತರಹ ಅಭಿಮಾನವೇ ಮೂಡಿತು.

ಗಾಯಕ್ಕೆ ಕುಂಕುಮ ಹಚ್ಚುತ್ತಾ ತಾಯಕ್ಕ 'ಈ ಬುದ್ಧಿಯಿಂದಲೇ ನೀನು ಆಳಾಗದು. ಈ ಆಟದಿಂದ್ಲೇ ನಿನಗೆ ಇಸ್ಕೋಲು ತಪ್ಪದು'ಎಂದಳು

ಮಲ್ಲೇಶ 'ಇಲ್ಲಕಣವ್ವ ಇನ್ನುಮೇಲೆ ಒಳೇಕಡೇ ಹೋಗಕ್ಕಿಲ್ಲ. ಇಸ್ಕೂಲಿಗೆ ತಪ್ಪಿಸ್ಕಳಕ್ಕಿಲ್ಲ, ನಾಳಿಂದ ಓಯ್ತೀನಿ ಕಣವ್ವ' ಎಂದ ಮೆಲ್ಲನೆ.

'ನೋಡ್ದ್ಯವ್ವ ನಾ ಏನೇಳ್ದಿ? ಅವನಿಗೂ ಬಲು ಬೇಜಾರಾಗದೆ. ಇನ್ಮೇಲೆ ಹಿಂದ್ಲಂಗಾಡಕ್ಕಿಲ್ಲ. ಸರಿಯಾಗಿ ಓದ್ತನೆ'

ಪುಟ್ಟತಾಯಿ ಅವನ ಪ್ರಾರ್ಥನೆಗೆ ಒತ್ತಾಸೆಯಾಗಿ ಹೇಳಿದಳು. 'ನೋಡವೆ, ನೋಡವೆ' ಎಂದು ತಾಯಕ್ಕನ ಬಾಯಿ ಸುಮ್ಮನಾಯಿತು. ಆದರೆ ಅವಳ ಬುದ್ದಿ ಏನನ್ನೋ ಹೊಂಚುತ್ತಿತ್ತು. ಆ ದಿನವೆಲ್ಲ ಹಾಗೆ ಆ ಬುದ್ಧಿ ಎಲ್ಲೋ ಅಲೆದಾಡಿಬಂತು. ರಾತ್ರಿ ಊಟಮಾಡಿ ಮಲಗುವ ಸಮಯದಲ್ಲಿ ತಾಯಕ್ಕ ಮಲ್ಲೇಶನನ್ನು ಕೇಳಿದಳು.

"ನೀನು ಒಳೀಗೆ ಬಿದ್ದಕಂಡಿದ್ದ ಜಿನ, ನಿನ್ನಾಊರಿಗೆ ಕರ್ಕಂಡು ಬಂದ್ರಲ್ಲ ಸಿಮ್ಮುಪಾದ್ರು—ಅವರ ಮನೆ ನಿಂಗೊತ್ತಾ ಮಲ್ಲು"

"ಗೊತ್ತು ಕಣವ್ವ, ರಾಕ್ಷಸನ ಚೌಕದತ್ರ, ಆ ಚೌಡೀಗುಡಿ ಹಿಂದೆ"

"ನಾಳೇ ನಾನೂ ಬತ್ತೀನಿ, ಅವರ ಮನೇಗೆ ಓಗವೆ. ಕರ್ಕೊಂಡೊಯ್ತೀಯಾ ?"

"ಯಾಕವ್ವ"

"ನಿಂಗ್ಯಾಕೋ, ಇಸ್ಕೋಲಿಗೆ ಓಗಬೇಕೂಂದ್ಯೆಲ್ಲಾ ಅದಕ್ಕೆ ನಿಮ್ಮ ಆ ಉಪಾದ್ರುಕೈಲಿ ಒಸಿ ಮಾತಾಡಬೇಕು. ಅವರೆಸರೇನ—ಮರತೋಯ್ತು?

" ಬುದ್ದಿಮೇಷ್ಟ್ರು ಕಣವ್ವ"

"ಆಂಗಂದ್ರೇನೋ"

"ಎಲ್ಲರೂ ಅವರನ್ನ ಬುದ್ದಿ ಬುದಿ ಅಂತರೆ. ಎಡ್‌ಮೇಸ್ಟ್ರು ಬುದ್ಧೀ ಅಂತ್ಲೇ ಅವರನ್ನ ಕೂಗದು"

"ಸರಿ ಸರಿ. ಈಗ ಗ್ಯಪ್ತಿಯಾಯಿತು. ದೇವರಾಜೇ ಅರಸಿನವರೂ ಅಂದರು ಆಜಿನ. ವಾಸಿಯೇ ಆಯಿತು."

ಇವೆಲ್ಲ ಏತಕ್ಕೆ ಎಂಬುದು ಮಲ್ಲೇಶನಿಗೆ ಬಗೆಹರಿಯದೇ ಅದನ್ನು ಬಿಟ್ಟುಕೊಟ್ಟು ನಿದ್ದೆಹೋದನು. ಬೆಳಗಾದಮೇಲೆ ಮನೆಗೆಲಸಗಳನ್ನೆಲ್ಲಾ ತಾಯಕ್ಕ ಬೇಗಬೇಗ ಮುಗಿಸಿ ಮಕ್ಕಳಿಬ್ಬರಿಗೂ ಊಟಕ್ಕಿಟ್ಟಳು. ಎಮ್ಮೆ ಬಿಟ್ಟುಕೊಂಡು ಹೊರಟ ಪುಟ್ಟತಾಯಿಗೆ ತಾನು ಮಲ್ಲೇಶನೊಡನೆ ತಾಲ್ಲೂಕಿಗೆ ಹೋಗಿದ್ದು ಬರುವುದಾಗಿಯೂ ಪುಟ್ಟತಾಯಿ ಹಿಂದಿರುಗಿ ಮನೆಗೆ ಬರುವುದರೊಳಗೆ ಬಂದುಬಿಡುವುದಾಗಿಯೂ ಅಕಸ್ಮಾತ್ ಬರದೇ ಹೋಗಿ

ದ್ದರೆ ಕಾಳಕ್ಕನ ಕೈಲಿ ಮನೆಯ ಬೀಗದಕಾಯಿ ಇರುತ್ತದೆಯೆಂದೂ ಹೇಳಿ ಕಳುಹಿಸಿದಳು.

ಕಾಳಕ್ಕ ಬೀಗಕೊಟ್ಟಳು. ಮಲ್ಲೇಶನ ಸ್ಕೂಲಿನ ಅಲಂಕಾರ ಮುಗಿದ ಮೇಲೆ ತಾಯಕ್ಕ ಮನೆಗೆ ಬೀಗಹಾಕಿ ಅರ್ಧ ಮುಸುಗೆಳೆದು ಹೊರಟಳು. ಕೆರೆಯ ನೀರಿಗೆ ಹೋಗುತ್ತಿದ್ದ ಹೆಂಗಸರಿಗೆಲ್ಲ ತಾನು ಹೊರಟ ಕೆಲಸವನ್ನು ಅರ್ಧಂಬರ್ಧ ಹೇಳಿ ಎಡಕ್ಕೆ ತಿರುಗಿಕೊಳ್ಳುವುದಕ್ಕೂ ಎಡದಿಂದ ಸೆತ್ತಿ ನಿಂಗಪ್ಪ ಬಂದು ಹೋದುದಕ್ಕೂ ಸರಿಯಾಯಿತು ತಲೆಯ ಅರ್ಧಕ್ಕಿದ್ದ ಸೆರಗನ್ನು ತಲೆತುಂಬಾ ಹೊದ್ದು ತಾಯಕ್ಕ' ಬಿರಬಿರನೆ' ಹೊರಟಳು. ಸೆತ್ತಿ ನಿಂಗಪ್ಪ ನಾಲ್ಕಾರು ಬಾರಿ ತಿರುಗಿ ತಿರುಗಿ ನೋಡಿಕೊಂಡು ಊರಕಡೆ ಹೋದನು.

ದಾರಿಯುದ್ದಕ್ಕೂ ಮಲ್ಲೇಶ ಪ್ರಶ್ನೆಗಳ ಮಳೆಯನ್ನೇ ಕರೆಯುತ್ತಿದ್ದರೂ 'ಹೂ, ಇಲ್ಲ' ಎನ್ನುವ ಪದಗಳಲ್ಲೇ ದಾರಿಸಾಗಿಸಿದಳು—ತಾಯಕ್ಕ. ಅವಳ ತಲೆಯಲ್ಲಿ ಒಂದೇ ಯೋಚನೆ. ತಾನು ಹೊರಟಿರುವ ಕೆಲಸ ನೆರವೇರುವುದೋ ಇಲ್ಲವೊ ಎಂಬುದು. ಆ ಉಪಕಾರವನ್ನು ಕೇಳುವ ಸಂದರ್ಭದಲ್ಲಿ ತಾನು ಹೇಗೆ ಹೇಗೆ ನಡೆದುಕೊಳ್ಳಬೇಕು. ಯಾವ ಮಾತುಗಳನ್ನಾಡಬೇಕು ಎನ್ನುವುದನ್ನವಳು ಒಳಗೇ ಸಿದ್ಧಪಡಿಸಿಕೊಳ್ಳುತ್ತಿದ್ದಳು.

ಆ ಸಿದ್ಧತೆ, ಮಲ್ಲೇಶ 'ಅವ್ವಾ ಇದೇ ನಮ್ಮ ಬುದ್ಧೀಮೇಷ್ಟ್ರ ಮನೆ' ಎನ್ನುವವರೆಗೆ ನಡೆದಿತ್ತು- ಮನೆಯು ಬಲು ಚಿಕ್ಕದು. ಹಳೆಯಕಾಲದ ಹೆಂಚಿನ ಮನೆ. ತಲೆಬಾಗಿಲಿರುವ ಮಣ್ಣಿನಗೋಡೆಯಲ್ಲಿಯೂ ಸುಣ್ಣದ ಪ್ರಭಾವ ಅಷ್ಟಿರಲಿಲ್ಲ. ಮನೆಯಬಾಗಿಲು ಓರೆಯಾಗಿತ್ತು. ಆ ಓರೆಯಾದ ಬಾಗಿಲಿನ ಸಂದಿಯಿಂದ ಮಲ್ಲೇಶನಿಗೆ ಅವರ ಸೈಕಲ್ಲು ಕಂಡುಬಂದು 'ಮನೇಲೇ ಅವ್ರೆ ಕಣವ್ವ' ಎಂದನು. ತಾಯಕ್ಕ ಮೆಲ್ಲಗೆ 'ಕೂಗು ಮಲ್ಲು' ಮಲ್ಲೇಶನಿಗೆ ಅವಳಷ್ಟು ಭಯವಿರಲಿಲ್ಲವಲ್ಲ. ಅವನು ಗಲಾಟೆಯಾಗಿಯೇ ಕೂಗಿದನು ಅದರಿಂದ ತಾಯಕ್ಕನಿಗೆ ಬಲು ಸಂಕೋಚವಾಯಿತು.

"ಸಾ, ಸಾ" ಮಲ್ಲೇಶನ ಕೂಗು ನಡೆದೇ ಇತ್ತು.

ಕೊನೆಗೊಮ್ಮೆ ದೇವರಾಜೇ ಅರಸಿನವರು ಹೊರಗೆ ಬಂದರು. ಬಂದೊಡನೆಯೇ ಕಣ್ಣಿಗೆ ಬಿದ್ದ ಎರಡು ವ್ಯಕ್ತಿಗಳ ಗುರ್ತನ್ನೂ ಹಿಡಿದರು.

"ಓ. ಕೆ. ಎಸ್. ಮಲ್ಲೇಶಯ್ಯಾ. ಏನಯ್ಯ ಬಂದೆ. ನಿಮ್ಮ ತಾಯಿಯಲ್ಲವೇ ಇವರು ? ಎನಮ್ಮ....ಏನು ಸಮಾಚಾರ"

"ನಮ್ಮ ಮಲ್ಲು—ತಾವು ಅವನ್ನ ಕಕ್ಕಂಡುಬಂದು ಊರಿಗೆ ಬುಟ್ಟಾಗ್ಲಿಂದ್ಲೂ ಇಸ್ಕೂಲಿಗೆ ಬರ್ನೆ ಇಲ್ಲ."

"ಹ್ಞೂ. ಅವನ್ಹೆಸರ್ನ ರಿಜಿಸ್ಟ್ರಿಂದ ತೆಗೆದು ಹಾಕಿಬಿಡಬೇಕು ಅಂತ ಹೆಡ್‌ಮಾಸ್ಟರು ಹೇಳಿಕಳಿಸಿದ್ದರು. ಅದ್ಯಾಕಮ್ಮ ಹಾಗೆ ಮಾಡಿದ್ರಿ. ಇಲ್ಲ ಅವನೇ ಚಕ್ಕರ್ ಹಾಕ್ತಾ ಇದ್ನೊ"

"ಇಲ್ಲಾ ಸಾ"

"ಇಲ್ಲ ಬುದ್ಧಿ, ನಾನೇ ಅವನ್ನ ಕಳಿಸ್ನಿಲ್ಲ. ಕಳೀಸ್ನೇ ಬಾರ್ದು ಅಂತ ಮಾಡಿದ್ದಿ. ಈಗೊಂದೆಳ್ಡು ಜಿನದಿಂದ ಎಲ್ಲರೂ ಕಳೀಸೂ ಅಂತ ಬಲು ಬಲವಂತ ಮಾಡಿದ್ರು....ಅದಕ್ಕೆ ತಮ್ಮ ತಾವ್ಕೆ ಬಂದೆ"

"ಕಳೀಸಮ್ಮ ಅದಕ್ಕೆ ನನ್ನ ಹತ್ತಿರಕ್ಕೆ ಯಾಕೆ ಬರಬೇಕಾಗಿತ್ತು"

"ಬುದ್ದಿ, ನನಗೆ ನಮ್ಮ ಉಡುಗನ ಮೇಲೆ ನೆಚ್ಚಿಗೆಯಿಲ್ಲ. ಅವನು ಬಲೆ ಒರಟ, ತುಂಟ"

"ಅದಕ್ಕೆ ?"

"ಅದಕ್ಕೆ ಅವನ್ನ ತಮ್ಮ ಸುಬರ್ದು ಬುಡವೇ ಅಂತ ಬಂದೆ. ತಾವು ಆ ಜಿನ ಅವನ ಜೀವ ಉಳೀಸಿ ಪುಣ್ಯ ಕಟ್ಕಂಡಿದೀರಿ. ಇನ್ನುಮೇಲೆ ನೀವೇ ಅವನಿಗೆ ಓದುಬರಾ ಕೊಟ್ಟು ಉದ್ಧಾರ ಮಾಡಬೇಕೂಂತ...."

"ನನ್ನ ಸುಫರ್ದಿಗೆ ಬಿಡೋದೆ? ಅಯ್ಯೋ ಅಯ್ಯೋ! ನಿನಗೆ ತಿಳೀದೋ ಏನೋ! ನಮ್ಮಂಥಾ ಬಡಮೇಷ್ಟ್ರಿಗೆ ಅಂಥಾ ದೊಡ್ಡ ಉಪಕಾರಗಳನ್ನ ಮಾಡೋ ಯೋಗ್ಯತೆ ಇರುತ್ಯೆ ?"

"ಇಲ್ಲಾ ಬುದ್ಧಿ. ದಿಕ್ಕಿಲ್ದೇ ಇದ್ದ ಒಬ್ಬ ಹೆಂಗಸಿಗೆ ಸಲುವಾಗಿ ತಾವಷ್ಟು ಮಾಡಿಕೊಡ್ಲೇಬೇಕು ಒಡೆಯ—ದೊಡ್ಡ ಮನಸ್ಸುಮಾಡಿ"

"ಇಲ್ಲವ್ಮ್ಮ ನಾವು ನೀನು ತಿಳ್ಕೊಂಡಿರೋ ಅಷ್ಟು ದೊಡ್ಡೋರಲ್ಲವ್ಮ್ಮಾ"

"ಬುದ್ದಿ, ನೀವೊಪ್ಕೊಳ್ಳೀಬೇಕು. ಇಲ್ದೇ ಇದ್ರೆ ನಾನು ಉಡಗನ್ನ ಊರಿಗೇ ಕರ್ಕೊಂಡು ಒಂಟೋಯ್ತೀನಿ. ಒಪ್ಕಂಡ್ರೆ ಸಂತೋಸವಾಗಿ ನಿಮ್ಮ 'ಮೊಳ್ಳಿಗೆ' ಆಕಿ ಬಿಟ್ಟು ನಗನಗತಾ ಊರಿಗೋಯ್ತೀನಿ"

"ಇನ್ನ್ಯಾರೂ ಈ ಊರ್ನಲ್ಲಿ ನಿನಗೆ ಬೇಕಾದವರಿಲ್ಲವೇನಮ್ಮ?''

"ಇಲ್ಲಾ ಬುದ್ದಿ. ನಾನು ಇವನ ಭಾರ ಎಲ್ಲಾ ನಿಮ್ಮ ಮೇಲೇ ಒರಗಿಸ್ಬುಟ್ಟು ಓಗಲ್ಲ ಒಡೆಯಾ. ಅವನಿಂದ ನಿಮಗೊಂದಿಷ್ಟೂ ಕಷ್ಟವಾಗದಂಗೆ ನಡ್ಕೋತೀನಿ ಬುದ್ದಿ"

"ಹಾಗಂದ್ರೆ"

"ಬಡವಳ ಕೈಲಾದಷ್ಟು ದವಸ, ದಾನ್ಯ, ತರಕಾರಿ, ಆಲು, ಮೊಸರು ಒದಗಿಸ್ಕೊಡ್ತೀನಿ ಬುದ್ದಿ. ಊರ್ನಲ್ಲಿದ್ದರೆ ಅವನು ಉಣ್ತೌರ್ಲಿಲ್ವ ಬುದ್ದಿ, ಏನೋ ಒಬ್ಬ ಉಡಗನ್ನ ಕಾಪಾಡಿಬುದ್ಧಿ!"

"ಅಯ್ಯೋ! ಅಮ್ಮಾ ಇದೆಲ್ಲ ನಮಗೆ ತುಂಬಾ ಹೊಸ ಪದ್ಧತಿ. ಇದೊಂದು ವಿಷಯ ಬೇಡ''

"ಅಂಗನ್ಬೇಡಿ ನಿಮ್ಪಾದ. ಬೇಕಾದ್ರೆ ಒಂದೇಡು ಜಿನ ಯೋಚನೆ ಮಾಡೇಳಿ ನನ್ನೊಡೆಯಾ! ಇಲ್ಲಾ ಅಂದ್ಬುಡಬೇಡಿ''

"ಇದಕ್ಕೆಲ್ಲಾ ಯಾಕಮ್ಮ ಯೋಚನೆ? ಇಷ್ಟೂ ನಮಗೆ ತಿಳಿಯದೆ? ಸಾಧ್ಯವಾಗೋಮಟ್ಟಿಗೆ ಕಾಣೆ!"

ತಾಯಕ್ಕನನ್ನು ಮುತ್ತಲು ಬರುತ್ತಿದ್ದ ನಿರಾಶೆಯ ಕಾರ್ಮೋಡಗಳನ್ನು ತಡೆಯುತ್ತಾ ಕೊನೆಯ ಪ್ರಯತ್ನದ ಮಾತನ್ನಾಡಿದಳು.''

"ಇಲ್ಲಾ ಬುದ್ಧಿ. ಇನ್ನೊಂದು ಮೂರು ಜಿನ ಬುಟ್ಕಂಡು ಬತ್ತಿವಿ. ಆಗ್ಲೂ ಬೇಕಾದರೆ ಇಲ್ಲಾ ಅಂತ ಏಳಿಬುಡಿ ಬುದ್ದಿ. ನಾವೊಯ್ತೀವಿ ಬುದ್ದಿ....ಅಡ್ಡ ಬಿದ್ದೆ''

ತಾಯಕ್ಕ ಆತುರ ಆತುರವಾಗಿ ಆ ಮಾತನ್ನಾಡಿ, ಅರಸಿನವರ ಉತ್ತರಕ್ಕಾಗಿ ಕಾಯದೇ ಹೊರಟೇಬಿಟ್ಟಳು. ಆಗತಾನೆ ತನ್ನ ತಾಯಿ ಇಲ್ಲಿ

ಯವರಿಗೆ ಬಂದ ಕಾರಣವನ್ನು ತಿಳಿದು, ಇನ್ನು ತನ್ನ ಊರಿನ ಮುಖವನ್ನೇ ಕಾಣುವಂತಿಲ್ಲವೇನೋ ಎಂದು ಹೆದರಿದ್ದ ಮಲ್ಲೇಶ ತನ್ನ ತಾಯಿಗಿಂತ ಮುಂಚಿತವಾಗಿ ಮಧ್ಯದಾರಿಗೆ ಹಾರಿದ್ದನು. ದೇವರಾಜೇಅರಸಿನವರು ತಾಯಕ್ಕನ ಮಾತಿಗೆ ತಕ್ಕ ಪ್ರತ್ಯುತ್ತರವನ್ನು ಸಮಯಕ್ಕೆ ಸರಿಯಾಗಿ ಕೊಡಲಾರದೇ ಅವರನ್ನೇ ನೋಡುತ್ತ ನಿಂತುಬಿಟ್ಟಿದ್ದರು. ಆ ಬೀದಿಯಿಂದ ಬೇರೆಯ ಬೀದಿಗೆ ತಿರುಗುವಾಗಲೂ ತಾಯಕ್ಕ ಅವರ ಮನೆಯ ಕಡೆ ಹಿಂದಿರುಗಿ ನೋಡಲಿಲ್ಲ. ಅವಳಿಗೆ ಅವರೆಲ್ಲಿ ಹಿಂಬಾಲಿಸಿ ಬಂದು 'ಇಲ್ಲ'ವೆಂದು ಖಚಿತವಾಗಿ ಹೇಳಿಬಿಡುವರೋ ಎಂಬ ಹೆದರಿಕೆ.

ಸಧ್ಯ ಆ ದಿನದಿಂದಲೇ ಅರಸಿನವರ ಮನೆಯಲ್ಲಿ ಉಳಿದುಬಿಡಬೇಕಾಗುವುದೇನೋ ಎಂಬ ಗಂಡಾಂತರದಿಂದ ಪಾರಾಗಿದ್ದ ಮಲ್ಲೇಶನು ತಾಯಿಯನ್ನು ಯಾವ ತಿಂಡಿಗೂ ಒತ್ತಾಯ ಮಾಡಲಿಲ್ಲ. ತಾಯಕ್ಕನಿಗೂ ಯಾವ ಅಂಗಡಿ ಮುಂಗಟ್ಟುಗಳ ಕೆಲಸವೂ ಇರಲಿಲ್ಲ. ಇಬ್ಬರೂ ಊರನ್ನೇ ಗುರಿಯಾಗಿಟ್ಟುಕೊಂಡು ನಡೆದರು. ಬಂದ ಕೆಲಸ ಬಲುಬೇಗನೆ ಆಗಿ ಹೋಗಿತ್ತಲ್ಲ.

ಮಲ್ಲೇಶ ಯಥಾಪ್ರಕಾರ ಮಾತಿಗೆ ಮೊದಲು ಮಾಡಿದ್ದನು.

"ಮೂರುಜಿನ ಬುಟ್ಕಂಡು ಬಂದಯವ್ವ ?"

"ಊ....ಬಂದು ಕೇಳ್ಕತೀನಿ. ಅವರಟ್ಟೇಲಿದ್ದಯಾ ಮಲ್ಲು–ಅವರೊಪ್ಕಂಡ್ರೆ ?"

"ಇರ್ತೀನಿ ಕಣವ್ವ. ನಮ್ಮ ಬುದ್ದಿ ಮೇಸ್ಟ್ರು ಬಲು ಒಳ್ಳೆಯೋರು"

"ಅವರ ಮನೇಗೆ ಯಾವಾಗ್ಲಾದ್ರೂ ಓಗಿದ್ಯ ಮಲ್ಲು ?"

"ಓಗಿದ್ದೆ ಕಣವ್ವ. ಅವತ್ತೊಂಜಿನ ನನ್ನೂ ಹುಚ್ಚನ್ನೂ ಮಾವನ ಕಾಯಿ ಕೊಟ್ಟು ಇಸ್ಕೂಲಿಂದ ಮನೇಗೆ ಕಳೀಸಿದ್ರು"

"ಅವರ ಮನೇಲಿ ಯಾರ್‍ಯಾರವ್ರೆ ಮಲ್ಲು"

"ಒಬ್ಬ ದೊಡ್ಡ ಹೆಂಗಸರವ್ರೆ ಅವರ ಹೆಡ್ತಿ ಅಂತೆ"

"ಅವರೆಂತಾವರು ಮಲ್ಲು—ಒಳ್ಳೆಯೋರಾ ?"

"ಗೊತ್ತಿಲ್ಲ ಕಣವ್ವ"

ಅಷ್ಟು ಹೊತ್ತಿಗೆ ತಾಯಕ್ಕನ ಮಾತು ಗಕ್ಕನೆ ನಿಂತುಹೋಯಿತು. ಹಿಂದಿನಿಂದ ಶಬ್ದಮಾಡುತ್ತಾ ಬರುತ್ತಿದ್ದ ಬಸ್ಸೊಂದನ್ನು ನೋಡಲು ಅವಳು ಹಿಂತಿರುಗಿ ನೋಡಿದಾಗ ಅವಳ ಕಣ್ಣಿಗೆ ತಮ್ಮನ್ನೇ ಹಿಂಬಾಲಿಸಿ ಬರುತ್ತಿದ್ದ ಸೆತ್ತೆನಿಂಗಪ್ಪನು ಬಿದ್ದುದೇ ಅದಕ್ಕೆ ಕಾರಣ. ಕ್ಷಣದಲ್ಲಿ ಅವಳ ಮೆದುಳೇ 'ವಿಲಿವಿಲಿ' ಎಂದು ಮಿಸುಕಾಡಿದಂತಾಯಿತು.

ಕಿರೀಕಾಟಿಗೆ ಅಲ್ಲಿಂದ ಇನ್ನೂ ಎರಡು ಮೈಲಿಗಳಿದ್ದವು. ಆಗ ಸುಮಾರು ಮಧ್ಯಾಹ್ನ ಮೂರುಘಂಟೆಯಿರಬೇಕು. ಆ ಬಿಸಿಲಿನ ಹೊತ್ತಿನಲ್ಲಿ ನಿರ್ಜನವಾದ ಆ ರಸ್ತೆಯಲ್ಲಿ ಈ ಕೇಡಿಗನೊಡನೆ ಹೇಗೆ ದಾರಿ ಸವೆಸುವುದೆನ್ನುವುದು ತಾಯಕ್ಕನ ಸಮಸ್ಯೆಯಾಯಿತು. 'ಅಲ್ಲೇ ಎಲ್ಲಾದರೂ ಸ್ವಲ್ಪಹೊತ್ತು ನಿಂತು ಅವನನ್ನೇ ಮುಂದಕ್ಕೆ ಬಿಟ್ಟುಬಿಡೋಣವೇ' ಎನ್ನಿಸಿತು. ಹಾಗೆ ಕಾಲಹರಣಮಾಡಿದಮೇಲೆ ಸಂಜೆಯಾಗಿಹೋಗಿ ಮುಂದೆ ಅವನು ಕಾಯುತ್ತ ನಿಂತಿದ್ದರೆ ಗತಿಯೇನು ಎಂದವಳ ಜಾಣತನವು ಅವಳನ್ನೆಚ್ಚರಿಸಿತು. ಮತ್ತೊಮ್ಮೆ ಹಿಂದಿರುಗಿ ನೋಡುವಹಾಗಿಲ್ಲ. ಈ ಚಿಂತೆಗಳ ಮಧ್ಯೆ ತಾಯಕ್ಕ ನಿಗಿದ್ದುದು ಒಂದೇ ಧೈರ್ಯ. ಸಧ್ಯಕ್ಕೆ ಮಲ್ಲೇಶನಾದರೂ ಜೊತೆಯಲ್ಲಿದ್ದಾನಲ್ಲ ಎಂಬುದೇ ಅವಳ ಆ ಧೈರ್ಯ ಕಾರಣ.

ಈಚಲತೋಪಿಗೆ ಇನ್ನೂ ಕೂಗಳತೆ ಇದೆ ಎನ್ನುವವರೆಗೂ ಸೆತ್ತೆ ನಿಂಗಪ್ಪನ ಸುಳಿವು ಹತ್ತಿರದಲ್ಲಿ ಕಂಡುಬರಲಿಲ್ಲ. ತಾಯಿಮಕ್ಕಳಿಬ್ಬರೂ ಸರಸರನೆ ಹೊರಟಿದ್ದರು. ತಾಯಿಯ ನಡಿಗೆಗೆ ಮಗ ಸಣ್ಣ ಓಟಕ್ಕೇ ತೊಡಗಿದ್ದನು. ಸ್ವಲ್ಪ ಸುಸ್ತಾದಮೇಲೆ ಮಲ್ಲೇಶ, ತಾಯಿಯ ಅವಸರಕ್ಕೆ ಸರಿಯಾದ ಕಾರಣ ತಿಳಿಯದೇ ವೇಗವನ್ನು ಕಡಿಮೆ ಮಾಡಿದನು. ತಾಯಕ್ಕನೂ ಹಾಗೆಯೇ ಮಾಡಬೇಕಾಯಿತು.

ನಡಿಗೆಯ ವೇಗಕ್ಕೆ ಮಲ್ಲೇಶನ ಕಾಲಹೆಬ್ಬೆರಳ ಗಾಯಕ್ಕೆ ಕಟ್ಟಿದ್ದ ಬಟ್ಟೆ ಬಿಚ್ಚಿಹೋಗಿ ಮಲ್ಲೇಶ ನಿಂತಾಗ ತಾಯಕ್ಕ ಕದ್ದುಕದ್ದು ಹಿಂದಿರುಗಿ ನೋಡಿದಳು. ಬೆನ್ನು ಹತ್ತಿದ ಭೇತಾಳ ಬರುತ್ತಲೇ ಇತ್ತು. ಮಲ್ಲೇಶ ಹತ್ತಿರದ ಮರವೊಂದರ ನೆರಳಿನಲ್ಲಿ ಕುಳಿತೇ ಗಾಯವನ್ನು ಕಟ್ಟಿಕೊಳ್ಳಲು ಮೊದಲುಮಾಡಿದನು. ತಾಯಕ್ಕ ನಿಲ್ಲಲಾರದೆ, ಹೊರಡಲಾರದೆ ನಿಂತಳು.

ಇನ್ನೊಮ್ಮೆ ಹಿಂದಿರುಗಿ ನೋಡಿದಳು. ಆ ಒಂಟಿ ಭೇತಾಳವೂ ನಿಂತು ಸಾಲುಮರದಡಿಯಲ್ಲಿ ಮಲಗಿದ್ದವನೊಬ್ಬನೊಡನೆ ಏನನ್ನೋ ಮಾತನಾಡುತ್ತಿತ್ತು. ಅಲ್ಲಿಗೆ, ಅವನು ಬರುತ್ತಿದ್ದುದು ತನ್ನನ್ನು ಗೋಳುಹೊಯ್ದುಕೊಳ್ಳುವುದಕ್ಕಾಗಿಯೇ ಎಂದು ತಾಯಕ್ಕನಿಗೆ ನಿಶ್ಚಯವಾಯಿತು.

ಹೀಗೆಯೇ ಸಾಗಿತು ಆ ಮೂವರ ಊರದಾರಿ. ಈಚಲ ತೋಪು ಬಂದಾಗ ತಾಯಕ್ಕನಿಗೆ ಕಳವಳ ಹೆಚ್ಚಿತು. ಅವಳು ತಲೆತಗ್ಗಿಸಿ ಸಾಧ್ಯವಾದಷ್ಟು ಹಿಂದಿನ ದಾರಿಯನ್ನೇ ನೋಡುತ್ತಿದ್ದಳು. ಅವಳ ಕಳವಳಕ್ಕೆ ತಕ್ಕಹಾಗೆ ಅವಳು ನೋಡಿಕೊಳ್ಳುತ್ತಿದ್ದಷ್ಟು ದೃಷ್ಟಿಯಾವರಣದಲ್ಲಿ ನೆರೆಳೊಂದು ಬಂದಿತು. ಅದು ಸೆತ್ತೆ ಸಿಂಗಪ್ಪನದೇ! ಮರುಘಳಿಗೆಯಲ್ಲೇ ಅವನ ಧ್ವನಿಯೂ ಕೇಳಿಸಿತು.

"ಏನಾ ಮಲ್ಲು—ಪ್ಯಾಟೆಗೋಗಿದ್ಯಾ ?"

ಅಷ್ಟು ಹೊತ್ತಿನವರೆಗೂ ಸೆತ್ತೆ ನಿಂಗಪ್ಪನನ್ನು ಕಾಣದಿದ್ದ ಮಲ್ಲೇಶ ಆಶ್ಚರ್ಯದಿಂದ "ಓ! ಮೆಷ್ಟ್ರು. ಇದ್ಯಾನಾ ಮೇಷ್ಟ್ರೆ—ನೀವೂ ಬಂದಿದ್ರ್ಯಾ" ಎಂದ.

ತಾಯಕ್ಕ ಸೆರಗನ್ನು ಮತ್ತಷ್ಟು ಎಳೆದುಕೊಂಡು ರಸ್ತೆಯ ಇನ್ನೊಂದು ಅಂಚಿಗೆ ನಡೆದಳು. ನಿಂಗಪ್ಪ ತಲೆಗೆ ಕಟ್ಟಿದ್ದ ವಸ್ತ್ರದಲ್ಲೇ ಕಟ್ಟಿಕೊಂಡಿದ್ದ ಒಂದು ಗಂಟನ್ನು ಬಿಚ್ಚಿಕೊಂಡು, ಅದರಿಂದ ಏನೋ ತಿಂಡಿಯನ್ನು ತೆಗೆದು ಬಾಯಿಗೆ ಹಾಕಿಕೊಂಡನು. ಅವನ ಅಭೀಷ್ಟದಂತೆ ಮಲ್ಲೇಶನೂ ಬಾಯಿ ಬಾಯಿ ಬಿಟ್ಟುಕೊಂಡು ಅವನ ಆ ಗಂಟನ್ನೇ ನೋಡಿದನು.

"ಏನೇನು ತಿನ್ನಕ್ಕೆ ತಕಂಡೆ ಮಲ್ಲು ಪ್ಯಾಟೇಲಿ ?" ಎನ್ನುತ್ತಾ ಸೆತ್ತೆ ನಿಂಗಪ್ಪ ಗಂಟಿನಿಂದ ಖಾರದ ಬೂಂದಿ ಬೆರಸಿದ ಕಡಲೇ ಪುರಿಯನ್ನು ತೆಗೆದು ಮಲ್ಲೇಶನ ಜೇಬಿಗೆ ತುಂಬಿದನು. ಮಲ್ಲೇಶನಿಗೆ ನಾಟಕದ ಮೇಷ್ಟ್ರ ಮೇಲೆ ಒಮ್ಮಿಂದೊಮ್ಮೆಗೇ ಅಭಿಮಾನ ಹುಟ್ಟಿತು.

"ಏನೂ ತಕಳ್ಳಿಲ್ಲ ಮೇಷ್ಟ್ರೆ. ನಮ್ಮ ಬುದ್ಧಿ ಮೇಷ್ಟ್ರುಂತ ಒಬ್ರವರೆ —ಅವರನ್ನ ನೋಡಕ್ಕೆ ಹೋಗಿದ್ವಿ. ನಾನು ಪುನಾ ಇಸ್ಕೂಲಿಗೆ ಸೇರ್ಕತೀನಿ."

"ಮತ್ತೆ. ಅದು ಬುಟ್ಟು ಊರಲ್ಲಿ ಫೋಲೀ ಅಲದ್ರೆ ಚಂದವಾ? ಜಾಣ ನೀನು—ಓದಿ ಬುದ್ಧಿವಂತನಾದರೆ ನಿಮ್ಮವ್ವನಿಗೆ ಎಷ್ಟು ಸಂತೋಸ ಗೊತ್ತಾ!"

"ಓತ್ತೀನಿ ಮೇಷ್ಟ್ರೆ. ಬೀಯೇ ಓತ್ತೀನಿ."

"ನಮ್ಮನ್ನೆಲ್ಲಾ ಆಗ ಮರೆತು ಬುಡ್ತೀಯೇನೋ?"

"ಇಲ್ಲಾ"

"ನೀನಿಲ್ಲ ಅಂತೀಯೇ, ದೊಡ್ಡೋನಾದ ಮೇಲೆ ಮರೆತುಬುಡ್ತೀಯೆ. ನಿಮ್ಮನೆಯೋರೆ ಅಂಗೆ. ಮರವೆ ಜಾಸ್ತಿ"

ಮಲ್ಲೇಶನಿಗೆ ಆ ಮಾತು ಅಸಂಬದ್ಧವಾಗಿ ತೋಚಿರಬೇಕು. ಅವನು ಸುಮ್ಮನಾದನು. ನಿಂಗಪ್ಪ ಆ ಮಾತನ್ನಾಡಿದುದೂ ಮಲ್ಲೇಶನಿಗೆಂದಲ್ಲವೇ ಅಲ್ಲ. ತಾಯಕ್ಕನಿಗೂ ಅದರ ಸೂಕ್ಷ್ಮ ತಿಳಿಯಿತು. ಅವಳು ಒಳಗಿಂದೊಳಗೆಯೇ ಹಲ್ಲುಕಡಿದಳು—ಕೋಪದಿಂದ ಸಣ್ಣಗೆ ಬೆವರಿದಳು—ಭಯದಿಂದ.

ಹೆದರಿದವರ ಮೇಲೆ ಕಪ್ಪೆ ಎಸೆದಂತೆ ನಿಂಗಪ್ಪನ ಬಾಯಿಂದ 'ತಾಯೀ' ಎಂಬ ಒಂದು ಮಾತು ಬಂದೇ ಬಂದಿತು. ತಾಯಕ್ಕ ಬೆಚ್ಚಿದಳು. ನಿಂಗಪ್ಪ ತಡೆಯಲಾರದೆ ನೇರವಾಗಿ ಮಾತನ್ನು ತಾಯಕ್ಕನ ಕಡೆಗೇ ತಿರುಗಿಸಿದನು.

"ತಾಯಿ, ಅದೇನಾ ಮೇಷ್ಟ್ರು ಮನೇಗೆ ಓಗಿದ್ದದು"

"..............."

"ಮಾತಾಡಕ್ಕಿಲ್ವಾ? ತಾಯಿ. ನನ್ನ ಕಂಡರೆ ಯಾಕೆ ನಿನಗಾಗಕಿಲ್ಲಾ! ಅದ್ಯಾಕಷ್ಟು ಕೋಪ? ಬ್ಯಾಡ ತಾಯಿ. ಒಸಿ ನಿಧಾನವಾಗಿ ಯೋಚನೆಮಾಡಿ ನನ್ನ ಮೇಲಿನ ಮುನಿಸು ಬುಟ್ಟುಬುಡು, ತಾಯಿ?"

"ದಿಕ್ಕಿಲ್ಲದ ಎಂಗಸು ಅಂತ ನೀವು ಗಂಡಸ್ಗಳು ಇಂಗೇ ಏನಣ್ಣ ನಡವಳಿಕೆ ನಡ್ಕಳದು ಇದೆಲ್ಲಾ ಚೆಂದಾಗಿಲ್ಲ"

ಕೊನೆಯಲ್ಲಿದ್ದ ನಿಂಗಪ್ಪ, ಮಲ್ಲೇಶ ತಾಯಕ್ಕನ ಮಧ್ಯೆ ನಡೆಯಲು ಬಂದ.

"ಅದೇನು ಚಂದಾಗಿಲ್ಲ ಏಳು ತಾಯಿ. ಬಾಯ್ಬುಟ್ಟು ಮಾತಾಡು—ಅಷ್ಟಾದರೂ ನನ್ನ ಮೇಲೆ ದಯಮಾಡಗು"

"ನಮ್ಮವ್ವನಿಗೆ ನಿಮ್ನ ಕಂಡರೆ ಕ್ವಾಪವಾ ಮೇಷ್ಟ್ರೆ? ಅದ್ಯಾಕವ್ವಾ?" ಮಲ್ಲೇಶ ಮಧ್ಯೆ ಪ್ರವೇಶಿಸಿ ಉಭಯತಾಪಿ ವಿಚಾರಣೆಗೆ ಬಂದ.

"ನೋಡು ಮಲ್ಲು ಮತ್ತೆ—ನಾನೇನು ಅಷ್ಟು ಕೆಟ್ಟೋನಾ ಮಲ್ಲು? ನಿಮ್ಮವ್ವ ನೆನ್ನೆ ನನ್ನ ಕಂಡ್ರೆ ಎಷ್ಟು ಪಿರೀತಿಯಾಗಿದ್ಲೊ ಅಂತಿಯೇ?"

ತಾಯಕ್ಕ ತುಳಿದ ಹಾವಿನಂತೆ ದುರುಗುಟ್ಟಿ ಹಿಂದಿರುಗಿ ನಿಂಗಪ್ಪನ ಮುಖವನ್ನು ನೋಡುತ್ತಾ ಗುಡುಗಿದಳು.

"ಏನಯ್ಯ ಯಾರೂಂತ ತಿಳ್ಕಂಡು ಮಾತಾಡ್ತಾ ಇದೀಯೇ? ಕೆ ಲಾಗದೋಳು ಅಂತ ತಿಳ್ಕೋಬೇಡ. ಎದೆ ಸೀಳಿ ಬಿಟ್ಟೇನು. ಹುಸಾರು, ನಿನ್ನ ದಾರಿ ಇಡ್ಕಂಡು ನೀನೋದ್ಯೋ ಸರಿ ಇಲ್ದೆ ಹೋದರೆ ಆಡ್ಡದ್ನ ಮಾಡಿ ತೋರಸ್ತೀನಿ ಮುರುಮುಗನೆ!"

ಆ ಮಾತು ಪೂರ್ತಿಯಾಗುವವರೆಗೆ. ದಿಗ್ಭ್ರಾಂತನಾಗಿದ್ದ ನಿಂಗಪ್ಪ ಮುಗಿದ ತಕ್ಷಣ ಚೇತರಿಸಿಕೊಂಡು. ಹೆಜ್ಜೆ ಮುಂದುಮಾಡಿ ತಾಯಕ್ಕನ ಬಳಿಗೇ ನಡೆದ. ಮಲ್ಲೇಶ ಏನೂ ತಿಳಿಯದೆ ಅವರಿಬ್ಬರನ್ನೇ ನೋಡುತ್ತ ಬಂದ. ಬಾಯಿ ಪುರಿಯನ್ನು ಆಡಿಸುತ್ತಲೇ ಇತ್ತು.

ಬಿಸಿಲು ಹಣ್ಣು ಹಳದೀ ಬಣ್ಣಕ್ಕೆ ತಿರುಗುತ್ತಿತ್ತು. ದನಕರುಗಳೆಲ್ಲವೂ ಊರಿನ ಕಡೆಗೆ ಹೊರಟುಬಿಟ್ಟಿದ್ದವು. ಸುತ್ತಿನ ಭೂಮಿ ನಿರ್ಜನವಾಗಿತ್ತು. ಬೆಳಗಿನಿಂದ ಬಿಸಿಲಲ್ಲಿ ದಣಿದು ನೆಲ ನಿಟ್ಟುಸಿರಿಡುತ್ತಿತ್ತು. ಹಕ್ಕಿಗಳ ಶಬ್ದ ಘಳಿಗೆ ಘಳಿಗೆಗೆ ಹೆಚ್ಚುತ್ತಿತ್ತು. ನಿಂಗಪ್ಪ ಮತ್ತೊಮ್ಮೆ ದೃಷ್ಟಿಯನ್ನು ಸುತ್ತಲೂ ಓಡಿಸಿ ನೋಡಿದ. ಬೇರೆ ಯಾರ ಕಣ್ಣುಗಳೂ ಇಲ್ಲ. ಮಲ್ಲೇಶ ಒಬ್ಬನೇ ಬೇರೆಯವನಾಗಿರುವವ. ದಾರಿಬಿಟ್ಟು ಎಡಗಡೆಯ ಒತ್ತಿಗೆ ನಡೆಯುತ್ತಿದ್ದ ತಾಯಕ್ಕನ ಬಳಿಗೆ ನಿಂಗಪ್ಪ ಸರಸರನೆ ಹೋದ. ಅವಳೂ ಹೆಜ್ಜೆಗಳನ್ನು ಆತುರ ಪಡಿಸಿದರೂ ನಿಂಗಪ್ಪನ ಕೈಗೆ ಆಕೆಯ ಎಡ ಭುಜ ಸಿಕ್ಕೇಸಿಕ್ಕಿತು.

"ಏನ್ಮಾಡೀಯೆ ಮಾಡು ತಾಯಿ ! ನಿನ್ನ ಕೈಲಿ ಸತ್ತರೂ ಸರಿಯೆ ಇವತ್ತು ಒಂದು ತೀರ್ಮಾನಕ್ಕೆ ಬರದೇ ಬುಡಕ್ಕಿಲ್ಲ."

ತಾಯಕ್ಕ ಚಿಗರಿಯಂತೆ ದಾರಿಯಿಂದ ದೂರಕ್ಕೆ ಹಾರಿದಳು. ಅವಳಿಗೇನು ಮಾಡಬೇಕೆಂಬುದು ತಿಳಿಯಲಿಲ್ಲ. ನೆಲದಮೇಲೆ ಗಕ್ಕನೆ ಕುಳಿತು ಗಟ್ಟಿಯಾಗಿ ಅಳತೊಡಗಿದಳು. ಮಲ್ಲೇಶನಿಗೂ ಅಳುಬಂತು, ನಿಂಗಪ್ಪನ ದಾರಿ ಮರೆತುಹೋದಂತಾಯಿತು. ಅವನು ಸುಮ್ಮನೆ ನಿಂತ. ತಾಯಕ್ಕನ ಧ್ವನಿ ಏರುತ್ತ ನಡೆಯಿತು. ಅವನ ಊಹೆ ಹಾಳಾಗಿ ಹೋಗಿ ಬೇರೆ ಉಪಾಯಗಾಣದೆ ತನ್ನ ಕಾಲುಗಳ ಮಾತನ್ನೇ ಕೇಳಬೇಕಾಗಿ ಬಂತು. ಅವನು ಮುಂದಮುಂದಕ್ಕೆ ಚಲಿಸಿದಂತೆಲ್ಲ ತಾಯಕ್ಕನ ಅಳುವಿನ ಶ್ರುತಿ ತಗ್ಗುತ್ತ ಬಂದಿತು. ನಿಂಗಪ್ಪ ಬಹುದೂರವಾದನು.

ಆದರೂ, ಎಲೇ ತೋಟದ ಮರದ ಗುಂಪಿನ ಬಳಿ ನಿಂಗಪ್ಪನನ್ನವಳು ನಿರೀಕ್ಷಿಸಿಯೇ ಇದ್ದಳು. ಹಾಗಾಗಲಿಲ್ಲ. ನಿಂಗಪ್ಪ 'ಇರಲಿ, ಒಂದೇ ಜಿನದಲ್ಲಿ ಎಲ್ಲಾ ಆಗಬೇಕೂ ಅಂದ್ರೆ ಎಂಗೆ ; ಇನ್ನೊಂದ್ಜಿನ ಇನ್ನೊಂದು ತರಾ ನೋಡವೆ' ಎಂದುಕೊಂಡು ಅವನು ಊರಿನ ಕಡೆಗೇ ಗಮನವಿಟ್ಟು ಹೊರಟುಹೋಗಿದ್ದನು. ತಾಯಕ್ಕ ಅವನೊಡನೆ ಮಾತನಾಡಬೇಕಾಗಿ ಬಂದಿದ್ದಾಗ್ಗೆ ಮಾತಿನಲ್ಲಿ ತೋರಿಸಿದ ಧೈರ್ಯ, ಕಣ್ಣುಗಳಲ್ಲಿ ತೋರಿಸಿದ ಭೀಕರತೆ ಅವಳ ಅಂತರಂಗದಿಂದ ಬಂದುದಲ್ಲ. ಆ ಸಮಯಕ್ಕೆ ದೈವಾಯತ್ತವಾಗಿ ಬಂದಿದ್ದಿರಬಹುದು. ಊರು ಕಣ್ಣಿಗೆ ಬಿದ್ದಮೇಲೂ ನಿಂಗಪ್ಪನು ರಸ್ತೆಯಲ್ಲಿಲ್ಲದುದನ್ನು ಕಂಡು ತಾಯಕ್ಕ ಘನವಾದ ನಿಶ್ವಾಸವೊಂದನ್ನು ಬಿಟ್ಟು ನಡೆದಳು. ಹೆದರಿ, ಬೆದರಿ ನಡುಗುತ್ತಿದ್ದ ಅವಳ ಸರ್ವಸ್ವ ಹತೋಟಿಗೆ ಬಂದಿತು. ಮಲ್ಲೇಶನಿಗೆ ಹಾಗೇಕಾಯಿತೆಂಬುದರ ಬಗ್ಗೆ ಇಲ್ಲದ ಸಮಾಧಾನದ ಕೆಲವು ಮಾತುಗಳನ್ನು ಹೇಳುವುದರಲ್ಲಿ ಊರು ಬಂದಿತು.

ಎರಡುಮೂರು ದಿನಗಳು ಈ ಸೆತ್ತಿನಿಂಗಪ್ಪನ ಕಾಟದ ಯೋಚನೆಯಲ್ಲೇ ಕಳೆದುಹೋಯಿತು. ಹೊಲಕ್ಕೆ ಹೊರಟರೆ ಅವನ ಚಿಂತೆ, ಸೂರ್ಯ

ಮುಳುಗಿದರೆ ಅವನ ಗಾಬರಿ. ರಾತ್ರಿ ದೀಪ ತುಂಬಿ ಮಲಗಿದರೆ ಅವನ ಭಯ. ಹೀಗಾಗಿ ತಾಯಕ್ಕನಿಗೆ ಸೆತ್ತೆಸಿಂಗಪ್ಪನು ಮಾಯಾಸುರನಾಗಿ ಮೆರೆದನು. ಈ ಅವಸ್ಥೆಯಲ್ಲಿ ತಾಯಕ್ಕನಿಗೆ ಮಲ್ಲೇಶನ ಯೋಗಕ್ಷೇಮವೇ ಮರೆತುಹೋಗಿತ್ತು. ಕೊನೆಗೆ ಮಲ್ಲೇಶನೇ ಅದನ್ನು ಜ್ಞಾಪಿಸಿದನು. 'ಅವ್ವಾ—ಬುದ್ದಿ ಮೇಷ್ಟ್ರು ಮನೆಗೆ ಓಗದಿಲ್ಲವವ್ವ? ಮರ್‍ತೋಯ್ತು?' ಎಂದವನು ನೆನಪಿಸಿದ ಮೇಲೆ ತಾಯಕ್ಕನಲ್ಲಿ ಹೊಸ ಸಮಸ್ಯೆ ಉದ್ಭವವಾಯಿತು.

ಅವಳಿಂದದನ್ನು ಬಗೆಹರಿಸಲಾಗಲಿಲ್ಲ. ಅದನ್ನವಳು ಕಾಳಕ್ಕನಲ್ಲಿಗೆ ತೆಗೆದುಕೊಂಡುಹೋದಳು. ಕಾಳಕ್ಕ, ತೊಗರಿ ಒತ್ತರಿಸುತ್ತಿದ್ದವಳು ತಾಯಕ್ಕನನ್ನು ಕಂಡೊಡನೆ ಕೆಲಸವನ್ನು ತನ್ನ 'ವಾರಗಿತ್ತಿ'ಗೆ ವಹಿಸಿ ಬಂದು ತೊಟ್ಟಿಯಲ್ಲಿ ಕಾಲಿಳಿಬಿಟ್ಟು ಕುಳಿತಳು. ತಾಯಕ್ಕನ ಮುಖ ಗೆಲುವಾಗಿಲ್ಲದುದನ್ನು ಕಂಡು ಕಾಳಕ್ಕ ಆ ಮುಖಕ್ಕೆ ನಗುವನ್ನು ತುಂಬಲು ಹೇಳಿದಳು.

'ಏನಾ ತಂಗಮ್ಮ ಮಗಳಿಗೆ ಈ ವರ್ಸವೇ ಮದುವೇ ಅನ್ನೊ ಅಂಗೆ ಕಾಣ್ತದಲ್ಲ ನಿನ್ನ ಮೊಕದಲ್ಲಿ'

'ಊ. ನನ್ನ ಪಾಡಿಗೆ ಇನ್ನದೊಂದು ಕೇಡು ಉಳಿಕಂಡದೆ ಅಕ್ಕ. ಆಗದೆಲ್ಲ ಆಯ್ತು. ಅಪ್ಪನ ಲಗ್ನದ ಸಾಲವೇ ಇನ್ನೂ ತೀರಿಲ್ಲ. ಇನ್ನು ಮಗಳ ಮದುವೆ ಬಂದುಬುಡ್ತು! ನಾನಿದ್ದಂಗೇ ಅದು ಆಗೋಮಟ್ಟಿಗೆ ಕಾಣೆ'

'ಅದ್ಯಾಕಾ ತಾಯಿ ಅಂಗಂದೀಯೇ! ನೀನಲ್ಲದೇ ಇನ್ಯಾರು ಇದ್ದಾರು ಮಕ್ಕಳಿಗೆ.'

'ಇಲ್ಲ ಕಾಳಕ್ಕ ಈಜನದ ಕೋಟಲೇ ಒಳಗೆ ಬಡವರು, ದಿಕ್ಕಿಲ್ಲದವರೂ ಬದುಕದೇ ಮುಸ್ಸಾರವಾಗದೆ'

'ಯಾವ ಜನ ತಾಯಿ ?'

'ಕಾಳಕ್ಕ ನೀನಾದರೂ ಒಬ್ಬಳು ನನ್ನಗೋಳು ಕೇಳಕ್ಕಿದೀಯಲ್ಲಕ್ಕ. ನಾನೇನು ಮಾಡಲಿ ಏಳಕ್ಕ ಇಂಗೆ ಜೀವತಗೀತರಲ್ಲ ನನ್ನದಾ ?'

ತಾಯಕ್ಕನ ಕಣ್ಣಲ್ಲಿ ತಟಪಟನೆ ನೀರು ಚಿಮ್ಮಿತು. ಕಾಳಕ್ಕ ಸಮಾಧಾನಪಡಿಸಿದಳು. ತಾಯಕ್ಕ ತಮ್ಮ ಮಾತಿನ ಶಬ್ದ ಯಾರ ಕಿವಿಗೂ ತಲುಪಲಾರದೆಂದು ಧೃಢ ಮಾಡಿಕೊಂಡು ತನ್ನ ಕತೆಗೆ ಪ್ರಾರಂಭಿಸಿದಳು. ಮಲ್ಲೇಶನು ನೀರಿಗೆ ಬಿದ್ದಿದ್ದ ದಿನದ ಲಾಗಾಯ್ತು, ಮಗನೊಡನೆ ಅವನ 'ಬುದ್ಧಿ ಮೇಷ್ಟ್ರ' ಮನೆಗೆ ಹೋಗಿದ್ದು ಬಂದ ದಿನದವರೆಗೆ ನಡೆದ ಸೆತ್ತಿ ನಿಂಗಪ್ಪನ ಪ್ರಸಂಗವನ್ನು ಹೇಳಿದಳು. ಕಾಳಕ್ಕ ಹಲ್ಲುಕಡಿದು ನೆಟಿಕೆಗಳನ್ನು ಮುರಿದಳು. ಹಿಡಿಶಾಪ ಹಾಕಿದಳು. ತಾಯಕ್ಕ ನೆಲವನ್ನೇ ನೋಡುತ್ತ ನಿಶ್ಯಬ್ದವಾಗಿ ಅಷ್ಟುಹೊತ್ತು ಕುಳಿತಿದ್ದಳು. ಕಾಳಕ್ಕ ಹಿಂದಿನದೊಂದು ತಾಯಕ್ಕನದೇ ವಿಷಯವನ್ನು ನೆನಪಿಗೆ ತಂದಳು.

'ಆವತ್ತೊಂಜಿನ ಆ ಚಿಕ್ಲಿಂಗಯ್ಯನ ಕತೆ ಏಳಿದೆ. ಇದೇನು ಬಂದದೇ ಈ ಹಾಳಾದವಕ್ಕೆ. ಗಂಡಸತ್ತವರ ಕಂಡರೆ ಎಷ್ಟು ಅಗ್ಗ ಮಾಡಕಂಡು ಬುಟ್ಟವ್ರೆ. ತಾಯೀ, ನೀಯಾಕೆ ನಿಮ್ಮಣ್ಣನ ಹಟ್ಟೀಗೆ ಒಂಟೋಗಬಾರದು ?'

'ಕಾಳಕ್ಕ. ನನ್ನ ಮಕ್ಕಳಿಗೆ ಸರೋಗಕ್ಕಿಲ್ಲ. ಇಲ್ಲಿ ಬದುಕೆಲ್ಲ ಆಳಾಗೋಯ್ತುವೆ. ಎಲ್ಲಕ್ಕಿಂತ ಹೆಚ್ಚಾಗಿ ಇವತ್ತೇಳ್ತೀನಿ ಕೇಳು. ಆವನೆಡ್ತೀಗೂ ನನಗೂ ಸರಿಬೀಳಲಿಕ್ಕಿಲ್ಲ.

'ಅದು ಕಷ್ಟ. ಓಗ್ಲೀಬುಡು. ಎನ್ನುತ್ತಿದ್ದಂತೆಯೇ ಕಾಳಕ್ಕನಿಗೆ ಏನೋ ಹೊಳೆದಂತಾಯಿತು. ಅವಳ ಕಣ್ಣುಗಳಲ್ಲಿ ಜಾಣತನ ಹೊಳೆಯಿತು.

'ತಾಯಿ, ಒಂದು ಕೆಲಸಾ ಮಾಡೀಯ ? ಈ ಚಿಕ್ಲಿಂಗಪ್ಪನಿಗೆ ಆ ಸೆತ್ತಿ ನಿಂಗನ ಸುದ್ದಿ ಏಳಿಬುಡು ಮತ್ತೆ. ಅವರವರೇ ಬಡಿದಾಡ್ತರೆ'

ತಾಯಕ್ಕನಿಗೆ ಕಾಳಕ್ಕನ ಈ ಮಾತು ಹಾಸ್ಯವಾಗಿ ಕಂಡಿತೇ ಹೊರತು, ಅದರಲ್ಲಿ ಯಾವ ವಿಧವಾದ ಸಮಾಧಾನವೂ ಸಿಕ್ಕಿದಂತಾಗಲಿಲ್ಲ. ಬದಲು ಒಂದು ವಿಧವಾದ ಹೆದರಿಕೆಯೇ ಉಂಟಾಯಿತು. ಕೂಡಲೇ ಆ ಮಾತನ್ನು ಅಲ್ಲಿಗೆ ನಿಲ್ಲಿಸಿ ಮಲ್ಲೇಶನ ವಿದ್ಯಾಭ್ಯಾಸದ ಮಾತನ್ನೆತ್ತಿಕೊಂಡಳು. ಮಾರನೆಯದಿನ ತಾಲ್ಲೋಕಿಗೆ ತನ್ನೊಡನೆ ಬಂದು ಮಲ್ಲೇಶನಿಗೆ ಉಪಕಾರಮಾಡಿಕೊಡಬೇಕೆಂದು ಕಾಳಕ್ಕನನ್ನು ಕೇಳಿಕೊಂಡಳು. ಅವಳು ಒಪ್ಪಿಕೊಂಡಮೇಲೆ ಅಶಾಂತವಾಗಿದ್ದ ತಾಯಕ್ಕನ ಮನ

ಸ್ಸಿಗೆ ಸ್ವಲ್ಪ ನೆಮ್ಮದಿ ಸಿಕ್ಕಿತು. ಅದು ಸಿಕ್ಕದಿದ್ದರೆ ಅಂದು ಪೂರ್ತಿ ಅವಳ ಹೊಟ್ಟೆಗೆ ತುತ್ತು ಆಹಾರವೂ ಸೇರುತ್ತಿರಲಿಲ್ಲ, ಕಣ್ಣಿಗಷ್ಟು ನಿದ್ದೆ ಬರುತ್ತಿರಲಿಲ್ಲ.

ಒಪ್ಪಿಕೊಂಡಿದ್ದಂತೆ ಮಾರನೆಯ ಬೆಳಿಗ್ಗೆ ಕಾಳಕ್ಕನೇ ತಾಯಕ್ಕ ನನ್ನು ಹೊರಡಿಸಿಕೊಂಡು ತಾಲ್ಲೋಕಿಗೆ ಹೊರಟಳು. ಊರುಕಳೆದು ಬಹಳ ದೂರವಾಗುವವರೆಗೂ ತಾಯಕ್ಕನಿಗೆ ಸೆತ್ತೆಯ ಭಯವಿದ್ದೇ ಇದ್ದಿತು. ಅವಳ ಬೆದರಗಣ್ಣುಗಳನ್ನು ಕಂಡು ಕಾಳಕ್ಕ ನಕ್ಕು 'ನನ್ನಂತಾ ದಯ್ಯ ನಿನ್ನ ಸಂಗಡ ಇರೋವಾಗ್ಲೂ ಬತ್ತದಾ ಆ ಮೂದೇವಿ! ಸುಮ್ನೆ ಬಾ ತಾಯಿ' ಎಂದು ಸಮಾಧಾನ ಪಡಿಸಿ ಕರೆದುಕೊಂಡು ಹೊರಟಳು. ಸೆತ್ತೆ ನಿಂಗಪ್ಪನಿಗೆ ಆದಿನ ಅವರು ತಾಲ್ಲೋಕಿಗೆ ಹೋಗುವ ವಿಷಯವೇ ತಿಳಿದಿರ ಲಿಲ್ಲ. ಅವನು, ಅವರು ಊರುಬಿಡುವಾಗ ತೆಂಕಳ್ಳಿಯ ಚಾವಡಿಯಲ್ಲಿ ಕುಳಿತು ಆ ಊರಿನ ನಾಲ್ಕಾರು ಜನಗಳಿಗೆ 'ಶಿವಜಲಂಧರ' ನಾಟಕದ ಹುಚ್ಚನ್ನು ಹಿಡಿಸುತ್ತಿದ್ದನು.

ಮಲ್ಲೇಶ, ತಾಯಕ್ಕ, ಕಾಳಕ್ಕ, ಮೂವರೂ ತಾಲ್ಲೋಕನ್ನು ಸೇರಿ ದರು. ಕಾಳಕ್ಕ, ತಾನು ಅಂಗಡೀಬೀದಿಗೆ ಹೋಗಿ ಒಂದಷ್ಟು ವ್ಯಾಪಾರ ಮುಗಿಸಿಕೊಂಡು ಚೌಡೀ ಗುಡಿ ಹತ್ತಿರಕ್ಕೆ ಬಂದು ಅಲ್ಲಿ ತಾಯಕ್ಕನಿಗಾಗಿ ಕಾಯುತ್ತಿರುವುದಾಗಿ ಹೇಳಿ ಬೇರಾದಳು. ಮೊದಲಿನಂತೆ ತಾಯಕ್ಕ ಮಲ್ಲೇ ಶರು ಬುದ್ಧಿ ಮೇಷ್ಟ್ರ ಮನೆಯ ಬಾಗಿಲನ್ನುಸೇರಿದರು. ಮಲ್ಲೇಶನ ಕೂಗಾಟ ನಡೆಯಿತು. ಬುದ್ಧಿಯವರು ಹೊರಗೆ ಬಂದರು. ತಾಯಕ್ಕ ಪರೀಕ್ಷಿಸು ವವಳಂತೆ ಅವರ ಮುಖವನ್ನು ನೋಡಿದಳು ಅವರು ತಾಯಕ್ಕನನ್ನು ಗಮನಿಸಿದ ಮೇಲೂ ಮುಖದಲ್ಲಿ ನಕಾರದ ಗೆರೆಗಳು ಮೂಡಲಿಲ್ಲ. ತಾಯ ಕ್ಕನ ಹೃದಯದಲ್ಲಿ ಧೈರ್ಯ ತುಂಬಿ ಬಂದಿತು. ಅವರಿಗೆ ಕೈಮುಗಿದಳು.

'ನಮಸ್ಕಾರ ತಾಯಿ'ಎಂದರು ಮೇಷ್ಟ್ರು. ಅನಂತರ ಕೆಲವು ಎಣಿಕೆ ಗಳಷ್ಟು ಮೌನವಾದ ಮೇಲೆ 'ಒಳಕ್ಕೆ ಬಾಮ್ಮ' ಎಂದು ಮನೆಯೊಳಕ್ಕೇ ಹೋದರು. ತಾಯಿ ಮಕ್ಕಳಿಬ್ಬರೂ ಮನೆಯನ್ನು ಹೊಕ್ಕರು. ತಾಯಕ್ಕ

ಬಾಗಿಲನ್ನು ದಾಟುತ್ತಿದ್ದಂತೆಯೇ ಒಂದು ಹೆಂಗಸು 'ನಿನ್ನ ಹೆಸರೇನು ?' ಎಂದಿತು. ತಾಯಕ್ಕ ಮೃದುವಾಗಿ 'ತಾಯಕ್ಕ ಅಂತ ಕಣವ್ವ' ಎಂದಳು. ಅವಳ ಉತ್ತರದಿಂದ ಪ್ರಶ್ನೆ ಕೇಳಿದ ಹೆಂಗಸಿಗೆ ಅಸಮಾಧಾನವಾದಂತೆ ತೋರಿತು. ಆಕೆ ಪುನಃ ಹಿಂದಿರುಗಿ ನೋಡದೆ ಒಳಕ್ಕೆ ಹೊರಟು ಹೋದಳು.

ಮೇಷ್ಟ್ರು ನಿಧಾನವಾಗಿ ಮಾತನಾಡಿದರು.

'ಏನವ್ವಾ ಏನು ಮಾಡಿದಿರಿ. ಯಾರಾದರೂ ಸಿಕ್ಕಿದರೇನು ಈ ಊರಲ್ಲಿ ನಿಮ್ಮ ಕಡೆಯವರು ?'

ತಾಯಕ್ಕ ನಿರಾಶೆ ಬೆರೆತ ಧ್ವನಿಯಲ್ಲಿ ಹೇಳಿದಳು.

'ನಾನ್ಯಾರನ್ನೂ ನೋಡನಿಲ್ಲ ಬುದ್ದಿ. ನೀವಲ್ಲ ಅಂದಮೇಲೆ ಮುಂದಿನ ಮಾತು ಅಂತ ಬಂದಿವ್ನಿ'

'ಓ ! ಕಿರೀಕಾಟಿಯಿಂದಲೇ ಬಂದು ಅವನು ಓದೋಕ್ಕಾಗೋದೇ ಇಲ್ಲವೊ ಹಾಗಾದರೆ ?'

'ಇಲ್ಲಾ ನನ್ನೊಡೆಯಾ. ಅವನಿಗೆ ಅಂಗಾದರೆ ಒಬ್ಬರ ಎದರಿಕೆಯೂ ಇಲ್ಲದೆ ಕೆಟ್ಟೋಯ್ತನೆ ಅಂತ ಬುದ್ದಿ. ಏನೋ ಬಡವರ ಮೇಲೆ ದಯಾ ಮಡಗಿ ನನ್ನ ಉಡಗನ್ನ ತಮ್ಮ ಆಸ್ರಯಕ್ಕೆ ಒಪ್ಪಿಸ್ಕಬೇಕು' ತಾಯಕ್ಕನಿಗೆ ಅನುಮಾನ ಇನ್ನೂ ಇತ್ತು.

'ಆದರೆ ಒಂದು ಮಾತು. ನಮ್ಮ ಮನೇಲಿ ಅವನಿದ್ದರೆ ಸಣ್ಣಪುಟ್ಟ ಕೆಲಸಗಳನ್ನು ಅವನಿಗೆ ನಾವು ಹೇಳಬೇಕಾಗಬಹುದು. ಅದರಿಂದ ನೀವು ತಾಯಿಮಕ್ಕಳಿಗೆ ಮನಸ್ಸು ಕೆಡಬಾರದು. ಅದನ್ನೊಂದು ಸ್ವಲ್ಪ ಯೋಚಿಸಿ ನೋಡು'

ಈ ಮಾತಿನಿಂದ ತಾಯಕ್ಕನಿಗೆ ತುಂಬಾ ಸಂತೋಷವಾಯಿತು. ಅವಳು ಮತ್ತೊಂದು ಸಾರಿ ಎರಡು ಕೈಗಳನ್ನೂ ಜೋಡಿಸಿ 'ಅಯ್ಯಯ್ಯೋ ನಮಗೆ ಮನಸ್ಸು ಕೆಡದೂ ಅಂದ್ರೇನು ಬುದ್ದಿ. ತಮ್ಮ ಸೇವೆ ಮಾಡಿದರೆ ಉಡುಗನ ಏಳು ಜಲ್ಮದ ದರಿದ್ರ ಅರೀತದೆ ಬುದ್ದಿ? ತಾವದನ್ನ ಯೋಚನೇನೆ

ಮಾಡಬಾರದು. ಅಷ್ಟು ದೊಡ್ಡ ಮನಸು ಮಾಡಿದ್ರಲ್ಲ. ನಾವೆಷ್ಟೋ ಪುಣ್ಯ ಮಾಡಿದ್ದೋ' ಎಂದು ತನ್ನ ಹಿಗ್ಗಿದ ಮುಖದಿಂದ ತನ್ನ ಕೃತಜ್ಞತೆಯನ್ನು ಅರ್ಪಿಸಿದಳು.

ಅವಳ ಪರೀಕ್ಷೆಗೆಂದೋ ಏನೋ ಒಳಗಿಂದ ಆ ಹೆಂಗಸು ಹೊರಗೆ ಬಂದು 'ಲೋ ಹುಡುಗ ಮೂರುಕಾಸಿಗೆ ಊಟದೆಲೆ ತಕಂಡು ಬಾರೋ ನೋಡವೆ' ಎಂದಿತು. ಹೊಟ್ಟೆಯಲ್ಲಿ ಕೊಂಚ ಜಾಗವಾಗಿದ್ದ ಮಲ್ಲೇಶನಿಗೆ ಅದು ತಮ್ಮ ಊಟಕ್ಕೆನಿಸಿತು. ಅವನು ಹಿಂದು ಮುಂದು ನೋಡದೆ ಅವರ ಕೈಯಿನ ಕಾಸನ್ನು ತೆಗೆದುಕೊಂಡು ಹೊರಗೋಡಿದನು.

———

೫

ಗುಜ್ಜಗೆರೆ ಚಿಕ್ಕಲಿಂಗಪ್ಪನವರು ಜೊತೆಯಲ್ಲೊಬ್ಬನನ್ನು ಕರೆದು ಕೊಂಡು ಬಂದಿದ್ದರು. ಅವರು ತಾಯಕ್ಕನ ಮನೆಯ ಬಳಿ ಬಂದಾಗ ಮಧ್ಯಾಹ್ನ ನಾಲ್ಕು ಗಂಟೆಯಿರಬಹುದು. ಅವರನ್ನು ಕಂಡ ಒಡನೆಯೇ ಎಂದಿನಂತೆ ತಾಯಕ್ಕನಿಗೆ ಬೇಸರವಾಯಿತು. ಅವರ ಸಾಲದ ಜ್ಞಾಪಕ ವಾಯಿತು. ಹಾಗೆಯೇ ಮೊನ್ನೆ ತನ್ನ ಬಳಿ ಇಪ್ಪತ್ತೈದು ರೂಪಾ ಯಿಗಳಿದ್ದದ್ದು ಜ್ಞಾಪಕ ಬಂದು ಕೈ ಕೈ ಹಿಸುಕಿಕೊಂಡಳು. ಆ ಇಪ್ಪತ್ತೈದು ರೂಪಾಯಿಗಳೂ ಮಲ್ಲೇಶನ ಹೊಸ ಬಟ್ಟೆ, ಪುಸ್ತಕ ಗಳಿಗೂ, ಬುದ್ಧಿ ಮೇಷ್ಟ್ರು ಮನೆಗೆ ಕೊತ್ತುಂಬರಿಬೀಜ, ಮೆಣಸಿನ ಕಾಯಿ ಗಳನ್ನು ತೆಗೆದು ಕೊಟ್ಟಿದ್ದಕ್ಕೂ ಸರಿಹೋಗಿತ್ತು. ಆ ಇಪ್ಪತ್ತೈದು ರೂಪಾಯಿ ಇದ್ದಾಗಲೇ ಚಿಕ್ಕಲಿಂಗಪ್ಪನವರು ಬಂದಿದ್ದರೆ ಅವರಿಗೇ ಕೊಟ್ಟು ಬಿಡಬಹುದಾಗಿತ್ತು ಎಂದುಕೊಂಡಳು ತಾಯಕ್ಕ. ಎಂದುಕೊಂಡಳು ಅಷ್ಟೆ.

ಬಂದಿದ್ದವರಿಬ್ಬರಿಗೂ ಮಜ್ಜಿಗೆ ಕೊಟ್ಟಾಯಿತು. ಚಿಕ್ಕಲಿಂಗಪ್ಪ ನವರು ಮಾತನಾಡಿ ಬಂದಿದ್ದ ಹೊಸ ವ್ಯಕ್ತಿ ತಮ್ಮ ಊರಿನವರೆಂತಲೂ, ಹೆಸರು ಮಲ್ಲಪ್ಪನೆಂತಲೂ, ಅವರಿಗೆ ಮೂವರು ಗಂಡುಮಕ್ಕಳೆಂತಲೂ, ಕೊನೆಯವನಿಗೆ ಮದುವೆಯಾಗಿಲ್ಲವೆಂತಲೂ ತಿಳಿಸಿದರು. ತಾಯಕ್ಕ ನಿಗೆ ಅದೆಲ್ಲ ಏಕೆಂಬುದೇ ಅರ್ಥವಾಗಲಿಲ್ಲ. ಅವಳು ಆ ಮಾತನ್ನು ಕಷ್ಟ ಸುಖಗಳ ಕಡೆಗೆ ತಿರುಗಿಸಿ, ದುಡ್ಡುಕಾಸಿನ ವಿಷಯಕ್ಕೆ ಬಂದು ಚಿಕ್ಕಲಿಂಗಪ್ಪ ನವರ ಸಾಲವನ್ನು ಸಾಧ್ಯವಾದಷ್ಟು ಬೇಗ ತೀರಿಸಿಬಿಡುವುದಾಗಿ ತಿಳಿಸಿ ದಳು. ಚಿಕ್ಕಲಿಂಗಪ್ಪನವರಿಗೆ ಅದರ ಪ್ರಸ್ತಾಪವೇ ಬೇಕಿರಲಿಲ್ಲ. ಬೇಸರ ದಿಂದೊಂದು ಬಾರಿ ಮೀಸೆಯ ಕುಡಿಗಳನ್ನು ತೋರುಬೆರಳಿನ ಹಿಂಭಾಗ ದಿಂದ ಸವರಿ ಹೇಳಿದರು.

'ಆ ನೂರುರೂಪಾಯಿನ ಯಿಸ್ಯ ಒಂದುಕಡೆ ಇರ್ಲಿ ತಾಯಿ. ನಿನ ಗಿರೋ ಈ ಕಷ್ಟದಲ್ಲಿ ಅದ್ನೂ ಒಂದು ಯಾಕೆ ತಲೆಗೆ ತಗತೀಯಾ. ಅತ್ವಾ

ನಾನು ಬಂದರೆ ನಿನಗೆ ಅದೇ ಗ್ಯಪ್ತಿಗೆ ಬತ್ತದೊ? ಅಂಗಾದರೆ ಏಳು ನಿನ್ನ ಟ್ಟತಾವ್ಕೆ ಬರದ್ನೇ ಬುಟ್ಟುಬುಡ್ತೀನಿ'

ತಾಯಕ್ಕನಿಗೆ ಅದು ಅಪೇಕ್ಷಿತ ವಿಷಯವಾದರೂ ಸಾಂಪ್ರದಾಯಿಕ ವಾಗಿಯಾದರೂ ಹಾಗಲ್ಲ ಎಂದು ಹೇಳಲೇಬೇಕಾಗಿತ್ತು.

'ಅಯ್ಯೆಯ್ಯೋ ಅಂಗಲ್ಲ ಕಣಣ್ಣಾಯ್ಯ! ಋಣ ಒಳಗೇ ಕೊರೆಯೋ ರೋಗ ಇದ್ದಂಗೆ. ಒಟ್ಟು ನನಗೆ ಒಂದುಸಾವಿರರೂಪಾಯಿ ಆಸ್ತೀಮೇಲೆ ಸಾಲ ಅದೆ ನಿಮ್ಮದೊಂದು ನೂರು ಹಂಗೆ ಅದೆ, ಮನೇಕರ್ಚು ಎಚ್ಚತ್ಲೇ ಅದೆ'

'ಊ, ನಿನ್ನುಡಗನ್ನ ಐದು ರೂಪಾಯಿನ ಪರೀಕ್ಷೆ ಇಸ್ಕೂಲಿಗೆ ಕಳೀ ಸಿದೀಯೆ ಅದು ಬೇರೆ ಒಸ ಕರ್ಚು................

ಆ ಮಾತು ಮುಗಿದೇ ಇರಲಿಲ್ಲ. ಮನೆಯೊಳಕ್ಕೆ ಎಮ್ಮೆ ನುಗ್ಗಿತು. ಆದರ ಹಿಂದೆ ಮಾಮೂಲಿನಂತೆ ಪುಟ್ಟತಾಯಿ ಬಂದಳು. ಚಿಕ್ಕಲಿಂಗಪ್ಪ ಆಡುತ್ತಿದ್ದ ಮಾತಿನ ಮಧ್ಯೆ ಸ್ವಲ್ಪ ಮೌನದಿಂದಿದ್ದು ಪುನಃ ಅದೇ ಧಾಟಿ ಯಲ್ಲೇ ಮುಂದುವರಿಸಿದರು.

............ ಇದೋ ಈ ಮಗಳು ಬೇರೆ ಲಗ್ನಕ್ಕೆ ಲಾಯಕ್ಕಾ ಗೋದ್ಲೂ........ನೋಡ್ವಾ ಮಲ್ಲಪ್ಪ ಈ ಎಣ್ಣೇ ಪುಟ್ಟತಾಯಿ ಅಂದ್ನಲ್ಲ— ಅವಳು.'

ಪುಟ್ಟತಾಯಿಯನ್ನು ಮಲ್ಲಪ್ಪನೂ, ಮಲ್ಲಪ್ಪನನ್ನು ಪುಟ್ಟತಾ ಯಿಯೂ ಪರಸ್ಪರ ಚೆನ್ನಾಗಿ ನೋಡಿಕೊಂಡರು. ಪುಟ್ಟತಾಯಿಯ ನೋಟ ದಲ್ಲಿ ಅರ್ಥವಿರಲಿಲ್ಲ. ಮಲ್ಲಪ್ಪನ ದೃಷ್ಟಿಯಲ್ಲಿ ಪರೀಕ್ಷೆ ಮಾಡುವವನ ಚೂಪಿತ್ತು. ತಾಯಕ್ಕನಿಗೆ ಆ ಚೂಪಿನ ದೃಷ್ಟಿಯ ಇಂಗಿತ ಸ್ವಲ್ಪ ತಿಳಿವಿಗೆ ಬಂದಹಾಗಾಯಿತು. ತಕ್ಷಣವೇ ಅವಳ ಮುಖದಲ್ಲಿ ನಗೆ ಮೂಡಿತು. ತನ್ನ ಮಗಳಿಗೆ ಆಗಲೇ ಮದುವೆಯ ಏರ್ಪಾಡಿನ ದಿನ ಬಂದುಬಿಟ್ಟಿತೇ ಎಂದು ಆಶ್ಚರ್ಯದಿಂದ ಕೂಡಿದ ಹುಡುಗಾಟದ ನಗೆ ಅವಳ ಕಣ್ಣಂಚಿನಲ್ಲಿ ಮಿಂಚಿತು.

ಅವಳ ಊಹೆ ನಿಜವಾದುದೇ ಎಂದು ಚಿಕ್ಕಲಿಂಗಪ್ಪನವರು ತಿಳಿಸಿದ ಮೇಲೆ ತಾಯಕ್ಕನ ಆ ನಗು ಇನ್ನೂ ಹೆಚ್ಚಿತು. 'ಅಣ್ಣಯ್ಯ ಇದೇನಾ! ನಮ್ಮ ಪುಟ್ಟೇಗೀಗಾಗ್ಲೇ ಲಗ್ನದ ವಯಸಾ! ಚಂದಾಯ್ತು' ಎಂದ ತಾಯಕ್ಕನ ಮುಖ ಚಿಕ್ಕಲಿಂಗಪ್ಪನವರಿಗೆ ಬಲು ಸಿಹಿಯಾಗಿ ತೋರಿತು.

'ಅಂಗಂದ್ರೇನು ತಾಯಿ! ನಿನ್ನ ಮಗಳಿಗೆ ಹನ್ನೆರಡು ವರ್ಸದ ಅತ್ತಅತ್ರ ಅಲ್ಲವಾ?.....ನನ್ನ ಕೊನೇ ತಮ್ಮನ ಲಗ್ನದಲ್ಲಿ ಇವಳು ಕೂಸಲ್ವಾ' ಎಂದರು.

'ಆಗಲಿ ಅಂಗಂತ ನನಗೆ ಮಗಳ ಮದುವೆ ಮಾಡೋ ಸಕ್ತಿ ಇದ್ದದಾ ಅಣ್ಣಯ್ಯ. ನನ್ನ ತಾಪತ್ರಯ ತಿಳಿದೋರು........ ನೀವೇ ಏಳಿ'ಎಂದು ತಾಯಕ್ಕ ಆ ವಿಷಯವನ್ನು ಮರೆಮಾಚಿಬಿಡುವ ಪ್ರಯತ್ನ ಮಾಡಿದಳು.

ಚಿಕ್ಕಲಿಂಗಪ್ಪ "ನೋಡು ತಾಯಿ, ಋಣಾನುಬಂದಾ ಇದ್ರೆ ನೀನೂ ತಪ್ಸಕ್ಕಾಗಕ್ಕಿಲ್ಲ, ನಾನೂ ತಪ್ಸಕ್ಕಾಗಕ್ಕಿಲ್ಲ. ನಮ್ಮೂರು ಮಲ್ಲಪ್ಪನ ಕೊನೇ ಉಡುಗ ಬಲೇ ಯೋಗ್ಯ. ಒಳ್ಳೇ ಒರಟಾಳು, ಇಟ್ಟೊಬಟ್ಟೆಗೆ ಅಣಿ ಯಾದ ಮನೆ, ಒಸದಾಗಿ ಒಲಗಿಲ ಮಾಡ್ಕಂಡವ್ರೆ. ಅವರೂ ಆ ಉಡಗನ ಲಗ್ನ ಈವರ್ಸವೇ ಮಾಡಬುಡಬೇಕೂಂತವ್ರೆ ನೋಡು. ಯೋಚನೆ ಮಾಡು."

ತಾಯಕ್ಕನಿಗೆ ಕಷ್ಟವೇ ಬಂದಿತು. ಅವಳು ಅಂತಹ ಮಾತುಗಳಿಗೆ ಸಿದ್ಧಳಾಗಿಯೇ ಇರಲಿಲ್ಲ. ಚಿಕ್ಕಲಿಂಗಪ್ಪನವರ ಮಾತು ಎತ್ತಿಹಾಕುವಂತ ಹುದೂ ಆಗಿರಲಿಲ್ಲ. ಇಷ್ಟರಮಧ್ಯೆ ಕೊಟ್ಟಿಗೆಯಲ್ಲಿದ್ದ ಪುಟ್ಟತಾಯಿಯ ನಾಚಿಕೆಯ ನಲಿದಾಟವನ್ನು ನೋಡಿ ತಾಯಕ್ಕನಿಗೆ ನಗು ಹುಚ್ಚುಹುಚ್ಚಾಗಿ ಉಕ್ಕಿಬರುತ್ತಿತ್ತು. ಕೊನೆಗೆ ದೇವರು ಬುದ್ಧಿಯನ್ನು ಕಳಿಸಿಕೊಟ್ಟು ಉಪ ಕಾರ ಮಾಡಿದನು.

ತಾಯಕ್ಕ, "ನಾನೇನಾಯೋಚನೆ ಮಾಡದು ಅಣ್ಣಯ್ಯ....ನಾನೊಬ್ಬೇನಾ ಈ ಮಕ್ಕಳಿಗೆ—ಅವರ ಸೋದರಮಾವನೂ ಅವನಲ್ಲ. ಅವನ್ಗೆ ಸೇರಿಲ್ವಾ ಈ ಹೈಕಳ ಕಷ್ಟಾಸುಕ?'' ಎಂದಳು.

ಅದರಿಂದ ಚಿಕ್ಕಲಿಂಗಪ್ಪನವರಿಗೆ ಸಮಾಧಾನವೇ ಆಯಿತು. "ಔದು, ನಿಜ. ನೋಡ್ದ್ಯಾ? ತಾಯಿ, ಏನೋ ಅಂತಿದ್ದೆ. ನೀನೂ ಬಲು ಜಾಣೆ. ನಿಜ. ಇದರ ಒಣೆ ನಿನ್ನೊಬ್ಬಳಮೇಲೇ ಯಾಕಾ ? ಬಸವಣ್ಣನ ಕಿವೀಗೂ ಆಕು. ನನ್ನ ಎಸರೇಳು. ಅಯ್ಯೋ ಪಾಪ....ನೀನು ಒಬ್ಬೊಂಟಿಗಿತ್ತಿ.... ಎಣ್ಣೆಂಗಸು, ಏನು ಮಾಡೀಯೇ ?'' ಎಂದು ಮಾತು ಮುಗಿಸಿ ಮೇಲಕ್ಕೆದ್ದರು.

"ಒಬ್ಬೊಂಟಿಗಿತ್ತಿ, ಎಣ್ಣೆಂಗ್ಸು" ಎಂಬ ಅವರ ಎರಡು ಮಾತು ತಾಯಕ್ಕನಲ್ಲಿ ಯಾವುದೋ ಅಡಗಿದ್ದ ವಿಷಯವನ್ನು ನೆನಪಿಗೆ ತರುವಂತಿದ್ದವು. ತಟ್ಟನೆ ಅದರ ನೆನಪಾಗದೇ ಹೇಳಿದಳು. "ಅಯ್ಯೋ, ನಿಮ್ಮಂತಾವ್ರ ಬುದ್ಧಿಯೇ ಎಲ್ಲರಿಗೂ ಇದ್ರೆ ಎಷ್ಟೋ ಜನ ನನ್ನಂತಾ ಗಂಡಸತ್ತವೆಂಗಸರ ಜೀವ ಉಳ್ಕತ್ತದೆ ಅಣ್ಣಯ್ಯ. ಆದರೆ ಏನು ಏಳವೆ? ನಮ್ಮಂಥಾವರ್ನ ಕಂಡರೆ ಎಲ್ಲರಿಗೂ ಸರಾಗ."

ಅಷ್ಟುಹೊತ್ತಿಗೆ ಮಲ್ಲಪ್ಪ ಮನೆಯನ್ನು ಬಿಟ್ಟು ದೂರಹೋಗಿದ್ದುದರಿಂದ ತಾಯಕ್ಕ ಅಷ್ಟು ಮಾತುಗಳನ್ನಾಡುವ ಧೈರ್ಯಮಾಡಿದಳು, ಆ ಮಾತು ಚಿಕ್ಕಲಿಂಗಪ್ಪನವರಿಗೂ ಅನ್ವಯಿಸಲೆಂದು. ಆಗ ಕಾಳಕ್ಕನ ಸಲಹೆ ನೆನಪು ಬಂದಿತು. ಇನ್ನೂ ಚಿಕ್ಕಲಿಂಗಪ್ಪನವರು ದೂರ ಹೋಗಿರಲಿಲ್ಲ, ಅಥವಾ ಅವರಿಗಿನ್ನೂ ದೂರವಾಗುವ ಮನಸ್ಸಾಗಿರಲಿಲ್ಲವೇನೋ, ಮತ್ತೊಂದು ಮಾತಿನ ಕೊಂಡಿಯನ್ನು ಜೋಡಿಸಿದರು.

"ಅಂಗಂದ್ರೇನು ತಾಯಿ ?....ನಿಮ್ಮಂತಾವ್ರ ಕಂಡ್ರೆ ಸರಾಗವಾ ?"

ತಾಯಕ್ಕನಿಗೆ ಒಂದು ಘಳಿಗೆ ಜಾಣತನ ಕೆಲಸಮಾಡಲಿಲ್ಲ. ಏಕೋ ಕಾಳಕ್ಕನ ಸಲಹೆ ಸಾಧುವಾಗಿ ಕಂಡುಬಿಟ್ಟಿತು. ಹೆಗಲಮೇಲೆ ಕೈಯಿಟ್ಟ ಸೆತ್ತೆನಿಂಗನ ಕೈಯನ್ನು ಕಡಿದುಹಾಕಿಸಬೇಕೆಂಬಷ್ಟು ಕೋಪ ತಾಯಕ್ಕನ ಹಲ್ಲುಗಳನ್ನು ಮಸೆಸಿತು. ಅವಳು ಚಿಕ್ಕಲಿಂಗಪ್ಪನವರೊಡನೆ ಆ ಪ್ರಸ್ತಾಪ ಎತ್ತಿಯೇಬಿಟ್ಟಳು. ಅವಳ ಕಂಠ ಗದ್ಗದಿತವಾಯಿತು.

"ನನ್ನಂತಹ ಒಂಟಿಹೆಂಗಸು ಇರಬಾರದು ಅಣ್ಣಯ್ಯ. ಊರಿನಕಳ್ಳರಿ

ಗೆಲ್ಲ ನಮ್ಮ ಬೆಳಸಿನಮೇಲೇ ಕಣ್ಣು, ಊರಿನ ಪುಂಡರಿಗೆಲ್ಲ ನನ್ನಂತಹವ್ರ ಸಂಸಾರದಮೇಲೇ ಕಣ್ಣು."

" ಯಾರು ತಾಯಿ? ಅಂತಾವರು ಯಾರು ಏಳು ಒಸಿನೋಡವೆ ''

" ಆ ನಾಟಕ ಕಲಿಸಕ್ಕೆ ಬಂದವ್ನಲ್ಲ—ಆ ಸೆತ್ತೆನಿಂಗ, ಅವನು ಅಣ್ಣಯ್ಯ. ಅವನಿಗೆ ಈ ಊರ್ನಲ್ಲಿ ಏಳೋರು ಕೇಳೋರು ಯಾರೂ ಇಲ್ಲಾಂತ ಕಾಣಿಸ್ತದೆ. ರಾತ್ರಿನಾಗ ಚಾವಡಿ, ಮಾರೀಗುಡಿ ಎಲ್ಲಾ ಬುಟ್ಟು ಬುಟ್ಟು ಬೇಕೂಂತ್ಲೆ ಬಂದು ನನ್ನ ಜಗಲಿಮೇಲೆ ಮಲೀಕತಿದ್ದ ಕಣಣ್ಣಯ್ಯ. ನನಗೆ ಬೆಳಗಾನ ಜೀವದಲ್ಲಿ ಜೀವ ಇರತಿರನಿಲ್ಲ. ಈಗೊಸಿಜಿನದ ಹಿಂದೆ ನಾನು ನಮ್ಮುಡುಗನ್ನ ಇಸ್ಕೂಲಿಗೆ ಸೇರ್ಸಕ್ಕೋಗಿದ್ದು ಬತ್ತಾ ಇರೋವಾಗ ಕಾಡುಮೇಲೆ ಒಬ್ಬಂಟಿ ಎಂಗಸನ್ನ ಇಡಿದು ನಿಲ್ಲಿಸ್ಬುಟ್ಟಿದ್ದಾ ಅಣ್ಣಯ್ಯ— ಏನು ಗತಿ ? ಈ ಊರ್ನಲ್ಲಿ ಗಂಡಸರೇ ಇಲ್ಲವೋ ಏನೊ ?

" ಆ? ಆಮೇಲೆ "

'' ಆಮೇಲೇನ ? ರಂಪಮಾಡ್ಬುಟ್ಟೆ. ನನ್ನ ಕಿರಿಚಾಟಕ್ಕೆ ಬೆದರಿ ಹಿಂತಿರುಗೂ ನೋಡ್ದೇ ಒಂಟೋದ—ಹಗಲೂ ಮೂರೊತ್ತೂ ನನಗೆ ಆ "ಯಮನ ಭಯವೇ ಆಗದೆ—ಏನುಮಾಡ್ಲಿ ?

" ಊ, ಇರ್ಲಿಬುಡು. ಎಲ್ಲಾರ್ನೂ ಬುಟ್ಟು ನನ್ನ ಕಿವಿಮೇಲೆ ಆಕಿದೆ ಯಲ್ಲ ಈ ಯಿಸಯಾನ ಅದೇ ಒಂದು ಸಂತೋಸ! ತಾಯಿ, ಇನ್ನು ಆ ಪಯಿಂಟು ನನಗಿರಲಿ ಬುಡು. ಈಜಿನದ ಮಾತು ಒಸಿ ಬಸವಣ್ಣ ಒಪ್ಗೊಳೊ ಅಂಗೇಳು— ಏನು ?''

ಪುನಃ ಪುಟ್ಟತಾಯಿಯ ಮದುವೆಯ ಮಾತು ! ತಾಯಕ್ಕನಿಗೆ ಅದೇ ಒಂದು ದೊಡ್ಡ ಸೋಜಿಗ. " ಇನ್ನು ಆ ಪಯಿಂಟು ನನಗಿರಲಿ ಬುಡು " ಎಂದು ಬಲವಾದ ಮೀಸೆ ಹೊತ್ತ ಒಬ್ಬ ಪ್ರಭಾವಶಾಲಿಯಾದ ವ್ಯಕ್ತಿ ಸೆತ್ತೆ ನಿಂಗನ 'ಪಯಿಂಟ'ನ್ನು ತನ್ನ ಜವಾಬ್ದಾರಿಗೆ ತೆಗೆದುಕೊಂಡಿರುವಾಗ ಅಂತಹ ವ್ಯಕ್ತಿಗೆ ಇಲ್ಲವೆನ್ನುವುದು ಹೇಗೆ ? ತಾಯಕ್ಕ ತಲೆಯನ್ನಲ್ಲಾಡಿಸಿ ಸಮ್ಮತಿ ಸೂಚಿಸಿದಳು. ಚಿಕ್ಕಲಿಂಗಪ್ಪನವರು ನಾಲ್ಕಾರು ಬಗೆಯ ತಿಂಡಿ ಯನ್ನುಹೊಂದಿರುವ ಹುಡುಗನಷ್ಟು ಸಂತೋಷಪಡುತ್ತಹೊರಟುಹೋದರು.

ಹೆಣ್ಣನ್ನು ನೋಡಲು ಬಂದಿದ್ದ ಮಲ್ಲಪ್ಪನ ಮುಖ ಯಾವ ಭಾವನೆಯನ್ನೂ ತೋರಿಸದ ಮರದ ಮುಖವಾಗಿದ್ದು ತಲೆತಗ್ಗಿಸಿಕೊಂಡು ಹೊರಟು ಹೋಯಿತು.

ಅಂದು ಬೆಳಗಾಗುವವರೆಗೂ ತಾಯಕ್ಕನಿಗೆ ಪುಟ್ಟತಾಯಿಯದೇ ಚಿಂತೆ. ಪುಟ್ಟತಾಯಿಗೆ ನಿದ್ದೆ! ಅವಳಿಗೆ ಆ ಯೋಚನೆ ನಾಚಿಸಿ ನಲಿಸಿ ದುದು ಮಲ್ಲಪ್ಪ ಕಣ್ಣೆದುರಿಗಿರುವವರೆಗೆ ಮಾತ್ರ. ತಾಯಕ್ಕನಿಗೆ ಹಾಗಲ್ಲ ಅವಳಿಗೆ ಈಗ ಸತ್ತೆ ಸಿಂಗಪ್ಪನ ಯೋಚನೆಯ ಕೋಟಲೆಯಿಲ್ಲ. ಮಲ್ಲೇಶನ ಯೋಗಕ್ಷೇಮದ ಚಿಂತೆಯೂ ಇಲ್ಲ. ಚಿಕ್ಕಲಿಂಗಪ್ಪನವರ ಮನಸ್ಸಿನ ಪ್ರಕಾರ ಅವರ ಸಾಲದ ತಗಾದೆಯೂ ಇಲ್ಲ. ಇಂತಹ ನಿಶ್ಚಿಂತೆಯ ಪರಿಸ್ಥಿತಿಯಲ್ಲಿ ಹುಡುಗಾಟದಂತಿದ್ದ ಮಗಳ ಮದುವೆಯ ಯೋಚನೆ ತಾಯಕ್ಕನಲ್ಲಿ ತಾನೇ ತಾನಾಗಿ ಮೆರೆಯಿತು.

ನೆನ್ನೆಮೊನ್ನೆಯ ಕೂಸು ಪುಟ್ಟತಾಯಿ. ಅವಳಿಗೆ ಮದುವೆ? ತನ್ನ ಈ ಅನಾಥ ಪರಿಸ್ಥಿತಿಯಲ್ಲಿ ತಾನೊಂದು ಮದುವೆ ಮಾಡುವಷ್ಟು ಯೋಗ್ಯತೆ ಇದೆಯೆ? ಮದುವೆಯ ಖರ್ಚಿಗೆ ಹಣ ಒದಗಿಸುವುದು ಹೇಗೆ? ಪುನಃ ಸಾಲ! ಇನ್ನು ಯಾರ ಬಳಿ? ಚಿಕ್ಕಲಿಂಗಪ್ಪನವರ ಹತ್ತಿರವೇ! ಮದುವೆ ಮಾಡಿಕೊಡಲು ಒಪ್ಪಿ ಕೇಳಿದರೆ ಇನ್ನೂರುಮುನ್ನೂರು ರೂಪಾಯಿಗಳಿಗೆ ಇಲ್ಲವೆನ್ನುವುದಿಲ್ಲ. ಅಯ್ಯೋ! ಪುನಃ ಆತನ ಬಳಿಯೇ ಸಾಲ ಮಾಡ ಬೇಕಾದ ಪ್ರಸಂಗವಲ್ಲ? ಹ್ಞು! ಹೇಗೋ. ದುಡ್ಡಿನ ಯೋಚನೆಯಿರಲಿ; ಹುಡುಗಿಗೆ ಚಿನ್ನಬಣ್ಣದ ವಿಷಯಕ್ಕೆ ಯಾವ ಬಲವಂತವನ್ನೂ ಮಾಡದಿದ್ದರೆ ಖರ್ಚು ದುಬಾರಿ ಆಗುವುದೇ ಇಲ್ಲ. ಅದು ಸರಿ, ಪುಟ್ಟಿಗೆ ಲಂಗ ಹಾಕಿ ಕೊಳ್ಳುವುದೇ ಸರಿಯಾಗಿ ಬರೆದು. ಇವಳು ಮದುವೆಯಾಗಿ ಗಂಡನ ಮನೆಗೆ ಹೋಗಿರಬಲ್ಲಳೇ? ಅಯ್ಯೋ ತನ್ನ ಮದುವೆಯಾದಾಗ ತನಗೆತಾನೆ ಎಷ್ಟು ವಯಸ್ಸು? ಹೆಚ್ಚುಕಡಿಮೆ ಇದೇ! ಸ್ವಲ್ಪ ತಲೆಗಿಲೆ ಬಾಚಿ ಸರಿ ಯಾದ ಸೀರೆ ಉಡಿಸಿದರೆ ಪುಟ್ಟತಾಯಿ ಸುಮಾರಾಗಿ ಕಾಣಿಸಿದರೂ ಕಾಣಿಸ ಬಹುದು. ಸಾಕು ಹೇಗೋ ಯಾರೋ ತಾವಾಗಿ ಬಂದು ಬಲವಂತ ಮಾಡುತ್ತಿರುವಾಗ ಯಾಕೆ ಬಿಡಬೇಕು? ಋಣಾನುಬಂಧವಿದ್ದರೆ ಆಗಿಯೇ

ಹೋಗಲಿ. ಇವಳೇನು ರಾಜಕುಮಾರಿಯೇ ? ಹೇಗೋ ತಿನ್ನಲುಉಣ್ಣಲು ಇದೆಯಂತಲ್ಲ. ಹುಡುಗಿಯನ್ನು ಮನೆಯಿಂದ ದಾಟಿಸಿದರೆ ಎಷ್ಟೋ ಒಳ್ಳೆಯ ಹೆಸರು. ಮಲ್ಲೇಶನಿಗೇನು ? ನೂರುಜನ ಬರುತ್ತಾರೆ, ನಮ್ಮ ಹುಡುಗಿ ತಮ್ಮ ಹುಡುಗಿಯೆಂದು ! ನಮ್ಮಂತಹವರ ಮನೆಯ ಹುಡುಗಿಯ ರದೇ ಕಷ್ಟ !............ —ಅದೆಲ್ಲ ಸರಿ, ಹುಡುಗನನ್ನೇ ನೋಡದೆ ಇಷ್ಟೆಲ್ಲ ಯೋಚನೆಮಾಡಿಬಿಡಬಹುದೇ ?........ಹ್ಞು ! ಗುಜ್ಜಗೆರೆ ಇಲ್ಲಿಂದ ಎಷ್ಟು ದೂರದ ಹಳ್ಳಿ ಮಹಾ ! ನಮ್ಮೂರಿನಲ್ಲೇ ಯಾರನ್ನಾದರೂ ಕೇಳಿದರೆ ಗಂಡು ಹೇಗಿದೆ ಎಂಬುದು ಗೊತ್ತಾಗಿಹೋಗುತ್ತದೆ. ಅದಿರಲಿ; ಈಗ ನಮ್ಮ ಬಸ ವಣ್ಣನ ಮಾತು. ಅವನೇನು 'ನಾನು ಮಾಡ್ತೀನಿ' ಅಂದ್ರೆ 'ಬೇಡ' ಅನ್ನೊ ಹಾಗಿದೆಯೇನು ? ಅವನಿಗೇನು ಬೇಕಾಗಿದೆ ನಮ್ಮ ಕಷ್ಟ ? ಏನೋ ಒಂದು ಹೆಸರಿನ ಬೆಂಬಲ. ಯೋಚನೆ ಮಾಡುವುದಕ್ಕೆ ಕಾಲಾವಧಿ ಸಿಕ್ಕುವುದಕ್ಕೆ ಒಂದು ನೆವ. ಏನಾದರಾಗಲಿ ಒಂದು ಮಾತು ಕೇಳಬೇಕಲ್ಲ ! ಅಂತೂ ತಾಯಿಲ್ಲದ ತೌರಿಗೆ ಹೋಗಲೇಬೇಕು. ಥೂ ! ಆ ಚಂಡಾಲಿ 'ಚನ್ನೂರಿ' ಮುಖದರ್ಶನ ಮಾಡಬೇಕಲ್ಲಪ್ಪ ಪುನಃ........

ಈ ಧಾಟಿಯಲ್ಲಿ ತಾಯಕ್ಕನ ಬುದ್ಧಿ ನಡೆದಿತ್ತು. ಎಂದರೆ ಪುಟ್ಟ ತಾಯಿಯ ಮದುವೆ ಯೋಚನೆ ಮೊದಲು ಹಾಸ್ಯಾಸ್ಪದವಾಗಿದ್ದುದು, ಆಗ ಬಹುದಾದ ಕೆಲಸವೆಂದೇ ತೋರಿ ಒಂದು ಕಡೆ ನಿರ್ಧರಿಸಿಟ್ಟು, ಅದನ್ನು ಸಾಧಿಸುವ ವಿಧಾನವನ್ನು ಆಲೋಚಿಸುವ ಘಟ್ಟಕ್ಕೆ ಬಂದಿತ್ತು ಎಂದಂತಾ ಗಿತ್ತು. ತನ್ನ ಶಕ್ತಿಯಿದ್ದಷ್ಟು ತಾಯಕ್ಕ ಆ ವಿಷಯದ ವಿವೇಚನೆ ನಡೆಸಿ ಇನ್ನುಳಿದ ಅಲ್ಪಸ್ವಲ್ಪ ಭಾಗದ ಸಲಹೆಗೆ ಕಾಳಕ್ಕನಲ್ಲಿಗೂ ಹೋದಳು. ಕಾಳಕ್ಕ ತಾಯಕ್ಕನ ಆತುರವನ್ನು ಬೇಡವೆಂದರೂ ಮದುವೆಯನ್ನು ಬೇಡ ವೆನ್ನಲಿಷ್ಟಪಡಲಿಲ್ಲ. 'ಆಗ ಅಗಿಂದ್ದರೆ ಆಗೇ ತೀರತದೆ' ಎನ್ನುವ ಭವಿಷ್ಯ ನುಡಿದು ಕಾಳಕ್ಕ ತನ್ನ ಸಮ್ಮತಿಯನ್ನು ಕೊಟ್ಟಳು. ಮುಂದಿನ ಶನಿವಾರ ಮಲ್ಲೇಶನನ್ನು ಊರಿಗೆ ಕರೆಸಿಕೊಂಡು ಅವನೊಡನೆ ತೌರಿಗೆ ಹೋಗಿಬರುವು ದೆಂದು ಗೊತ್ತಾಯಿತು. ಅದೇಕೋ ತಾಯಕ್ಕನಲ್ಲಿ ಸೆತ್ತೆ ನಿಂಗಪ್ಪನ ಭೀತಿಯೇ ಕಂಡುಬರಲಿಲ್ಲ. ಕಾಳಕ್ಕನೇ ಜ್ಞಾಪಿಸಿದಳು. ತಾಯಕ್ಕ

ತಾನು ಕಾಳಕ್ಕನ ಸಲಹೆಯಂತೆ ಚಿಕ್ಕಲಿಂಗಪ್ಪನವರಲ್ಲಿ ಆ ವಿಷಯವನ್ನೆಲ್ಲಾ ಹೇಳಿರುವುದನ್ನು ತಿಳಿಸಿ ಕಾಳಕ್ಕನಿಗೆ ಸಂತೋಷವನ್ನು ಕೊಟ್ಟಳು. ಕೊನೆಗೆ ಮಲ್ಲೇಶ ಬರುವುದಕ್ಕಾಗದಿದ್ದರೂ ತಾನೊಬ್ಬಳೇ ಮೂರು ಹರಿದಾರಿಯ ದೂರದ ತನ್ನ ತೌರೂರಾದ ತಾಣ್ಯಕ್ಕೆ ಹೋಗಲು ಸಿದ್ಧಳಾಗಿರುವುದಾಗಿ ತಿಳಿಸಿದಳು.

ಹಾಗೆಯೇ ಆಯಿತು. ಆ ಶನಿವಾರ ಮಲ್ಲೇಶ ಏಕೋ ಊರಿಗೆ ಬರಲೇ ಅಲ್ಲ. ತಾಯಕ್ಕ ದಿನಪೂರ್ತ ಕಾದುನೋಡಿದಳು. ಮಲ್ಲೇಶ ಬರುವುದಿಲ್ಲವೆಂದು ಖಚಿತವಾಯಿತು. ಹುಚ್ಚನ ಕೈಲಿ ಹೇಳಿಕಳುಹಿಸುವುದಕ್ಕೆ ಬದಲಾಗಿ ತಾನೇ ಹೋಗಬೇಕಾಗಿತ್ತು ಎಂದುಕೊಂಡಳು. ರಾತ್ರಿ ಮಲಗುವ ವೇಳೆಯಲ್ಲಿ ಹುಚ್ಚನ ಮನೆಗೆ ಹೋಗಿ ವಿಚಾರಿಸಿದಳು. 'ಪರೀಕ್ಷೆ ಹತ್ತಿರ ಬಂತು ಓದ್ಕಬೇಕು, ಇದೂ ಅಲ್ಲದೇ ಅಮ್ಮಾವರು ಊರಿಗೆ ಹೋಗಕ್ಕಾಗೊಲ್ಲ ಮನೇಗೆ ಯಾರ‍್ಯಾರೋ ಬಂದವರೆ ಅಂದು ಬುಟ್ಟರಂತೆ. ಅದಕ್ಕೆ ಬರಕ್ಕಾಗಕ್ಕಿಲ್ಲ. ಅಂದು ಬುಟ್ಟ ಇಂದು' ಎಂದ ಹುಚ್ಚ. ಶುಕ್ರವಾರ ಬರುತ್ತೇನೆಂದು ಹೇಳಿಕಳುಹಿಸಿದ್ದ ಮಗ ಶನಿವಾರ ಹೀಗೆ ಹೇಳಿಕಳುಹಿಸಿದ್ದನ್ನು ಕಂಡು ತಾಯಕ್ಕನಿಗೆ ಬಲು ಅತೃಪ್ತಿಯಾಯಿತು. ಆದರೆ ಮಗ ಕಳುಹಿಸಿದ್ದ ಕಾರಣಗಳು ಬಲು ದೊಡ್ಯವು. ಮೊದಲನೆಯದು ಪಾಠದ್ದು ಎರಡನೆಯದು ಮನೆಯವರಲ್ಲಿ ಅವನಿಗಿದ್ದ ವಿಧೇಯತೆಯದು. ತಾಯಕ್ಕ ಮಗನನ್ನು ಮನ್ನಿಸಿ ಹಿಂದಿನಿಂದ ಕಾಳಕ್ಕನೆದುರಿಗೆ ಜಂಭಕೊಚ್ಚಿದಂತೆ ಒಂಟಿಯಾಗಿಯೇ ಹೊರಡಲು ಸಿದ್ಧಳಾದಳು.

ಆದಿತ್ಯವಾರ ಅವಳು ಎದ್ದದ್ದು ಬೆಳಗಿನ ಝಾವ ಮೂರು ಗಂಟೆಯ ಸುಮಾರಿಗೆ. ಹೇಳಬೇಕಾದುದನ್ನೆಲ್ಲಾ ಮಗಳಿಗೆ ಅಂದಿನ ರಾತ್ರಿಯೇ ಹೇಳಿದ್ದುದರಿಂದ ಅವಳನ್ನು ಏಳಿಸುವಗೋಜಿಗೇ ಹೋಗಲಿಲ್ಲ, ಎದ್ದು ಆತುರವಾಗಿ ಮುಖತೊಳೆದುಕೊಂಡು, ಹಿಟ್ಟನ ಬುತ್ತಿಯನ್ನು ಕಂಕುಳಿಗೆ ಇರುಕಿಕೊಂಡು ತಲೆಯಮೇಲೆ ಸೆರಗನ್ನು ಹಾಕಿ, ಬಾಗಿಲೆಳೆದುಕೊಂಡು ಹೊರಟೇಬಿಟ್ಟಳು. ನಾಟಕದವರಿಗೆ ರಾತ್ರಿಯೇ ಮುಗಿದಿರಲಿಲ್ಲ. ಹಾರ‍್ಮೋನಿಯಂ 'ಜೊಯ್' ಎಂದು ಬೋರ್ಗರೆಯುತ್ತಿತ್ತು. ತಾಯಕ್ಕನಿಗೆ ನಿರಾಳ

ವಾಯಿತು. 'ಆ ಪಿಶಾಚಿ ಹಾರ್ಮ್ಮನಿ ಮುಂದೇ ಕೂತದೆ' ಎನ್ನುವ ಧೈರ್ಯ ಅವಳಿಗೆ ಹೊಸ ಉತ್ಸಾಹ ಕೊಟ್ಟಿತು. ಬಿರಬಿರನೆ ಕತ್ತಲೆಯಲ್ಲಿ ಸೇರಿ ಹೋದಳು.

ಹೊತ್ತು ಹುಟ್ಟುವುದಕ್ಕೆ ಇನ್ನೂ ಬಹಳ ಹೊತ್ತಿರುವಾಗಲೇ ದೊಡ್ಡ ರಸ್ತೆಯಿಂದಾಚೆಗೆ ಜನಗಳು ಕಂಡು ಬರುತ್ತಿರುವುದನ್ನು ನೋಡಿದಮೇಲೆ ತಾಯಕ್ಕನಿಗೆ ನರಿಯಾಲದ ಸಂತೆಯ ಜ್ಞಾಪಕ ಬಂದಿತು. ನರಿಯಾಲದ್ದು ಭಾನುವಾರದ ಸಂತೆ. ಅದು ತಾಣ್ಯಕ್ಕೆ ಹೋಗುವ ದಾರಿಯಲ್ಲಿ ಸಿಕ್ಕುತ್ತದೆ. ಕಿರಿಕಾಟಿಯಿಂದ ಅಲ್ಲಿಗೆ ಹೋಗುವ ದಿಕ್ಕಿನಲ್ಲೇ ಮುಂದುವರೆದರೆ ಐದು ಮೈಲಿಗಳ ದೂರದಲ್ಲಿ ತಾಣ್ಯ. ನರಿಯಾಲದಲ್ಲಿ ಬಲಕ್ಕೆ ತಿರುಗಿ ಹೊರಟರೆ ನಾಲ್ಕು ಮೈಲಿ ದೂರದಲ್ಲಿ ಗುಜ್ಜಗೆರೆ.

ಎಷ್ಟಾದರೂ ಸಂತೆ. ತಾಯಕ್ಕನು ಆಕರ್ಷಿತಳಾಗಿ ಸಂತೆ ಮಾಳದೊಳಗೆ ನುಗ್ಗಿದಳು, ಮಗನಿಗೊಂದು ಟೋಪಿಯನ್ನು ತೆಗೆದುಕೊಂಡಳು. ಒಂದೂವರೆರೂಪಾಯಿ. ಅವಳಿಗೆ ಮಗನ ತಲೆಯಳತೆಯ ಪರಿಜ್ಞಾನವೂ ಇಲ್ಲವಾಗಿತ್ತು. ಹದಿಮೂರಾಣೆಕೊಟ್ಟು ಒಂದು ಮಣಿ ಸರ ತೆಗೆದುಕೊಂಡಳು. ಪುಟ್ಟತಾಯಿಗಲ್ಲ. ಬಸವಣ್ಣನ ಮಗಳು ಪಾರೋತಿಗೆ. ಅವಳಲ್ಲದೆ ಇನ್ನಿತರ ಚಿಕ್ಕಮಕ್ಕಳಿಗೆಂದು ನಾಲ್ಕಾಣೆ ಬತ್ತಾಸು ಕಟ್ಟಿಸಿಕೊಂಡಳು. ಅಲ್ಲೇ ಹೆಂಗಸೆನ್ನುವ ಪರಿವೆಯೂ ಇಲ್ಲವೆಂಬಂತೆ ಅವಳ ಮೇಲೆ ಸಂಪೂರ್ಣವಾಗಿ ನುಗ್ಗಿ ಮುಂದಿನ ಯಾವುದೋ ಒಂದು ವ್ಯಕ್ತಿಯನ್ನು ಕೂಗುತ್ತ ಚಿಕ್ಕಲಿಂಗಪ್ಪನವರು ಮುಂದೆ ಹೋದರು. ತಕ್ಷಣ, ಮೊದಲೇ ಗೊತ್ತಿದ್ದವರಂತೆ ಹಿಂದಿರುಗಿನೋಡಿ "ಓ ! ತಾಯಿ. ನೀನಾ ?........ಯಾರೋ ಅಂತಿದ್ದೆ. ಏನು ಸಂತೆಗೆ ಬಂದಿದ್ಯಾ" ಎಂದು ಬೆದರುತ್ತಾ ಕೇಳಿದರು. ತಾಯಕ್ಕನಿಗೆ ಬಲು ಬೇಸರವಾಯಿತು. ಅದನ್ನು ತೋರಿಸದೆ ಯಾವುದೋ ಗಾಬರಿಯಲ್ಲಿ "ಇಲ್ಲ" ಎಂದಳು.

"ಮತ್ತೆ"

"ತಾಣ್ಯಕ್ಕೆ ಹೋಗವೇ ಅಂತ ಒಂಟಿದ್ದೆ........"

"ಸರಿ ಸರಿ........ಸಥ್ಯ ನನ್ನ ಮೇಲೆ ಅಂದರೆ ನನ್ನ ಮಾತಿನ ಮೇಲೆ ಅಷ್ಟು ಇಸ್ವಾಸ ಅದೆ ಆಂತಾಯ್ತಲ್ಲ. ನಡ್ಕಂಡೇ ಓದಯಾತಾಯಿ ?"

"ಇನ್ನೇನು ಮಾಡದು ಅಣ್ಣಯ್ಯ........ಎಷ್ಟು ದೂರ ಅದೆ ಇನ್ನೇನು ಸಿಕ್ತಲ್ಲ"

"ಐ. ಇನ್ನೂ ಎಲ್ಲಾ ತಾಯಿ. ಬಾ ನನ್ನ ಕೂಟೆ. ತಾಣ್ಯಾದ ಗಾಡಿ ಅದೆ ನಮ್ಮೋರೊಬ್ಬರದು, ಅದರಲ್ಲಿ ಓಗೂವಂತೆ"

"ಬ್ಯಾಡಿ ಅಣ್ಣಯ್ಯ"

"ಒಳ್ಳೆ ಅಣ್ಣಯ್ಯ ! ಅದೆಂತಾ ಅಣ್ಣಯ್ಯ ತಾಯಿ ? ಅದೆಲ್ಲಾ ಬ್ಯಾಡ, ನೀ ಬಾ ಏಳ್ತಿನಿ."

"ಇಲ್ಲಾ ನಾನು ಓಯ್ತೀನಿ."

"ತಾಯಿ, ನೀ ಬರಲೇಬೇಕು ಇಂದು. ಒಕ್ಕಳ್ಳಿ ಬಾ ಇಲ್ಲಿ ಆ ಓಟಲಲ್ಲಿ ನಿನ್ನ ಅಳಿಯಾ ಆಗೋನು ಕೂತವನೆ. ತೋರಿಸ್ತೀನಿ ಬಾ !"

ಚಿಕ್ಕಲಿಂಗಪ್ಪನವರು ಹೊಸ ಬಲೆ ಬೀಸಿದರು, ತಾಯಕ್ಕನ ನಕಾರ ತಪ್ಪಲಿಲ್ಲವಾದರೂ ಅವರನ್ನದು ಸಂಪೂರ್ಣ ನಿರಾಶೆಗೊಳಿಸಲಿಲ್ಲ. ಮತ್ತೆ ಸ್ವಲ್ಪ ಒತ್ತಾಯಮಾಡಿದುದರಲ್ಲಿ ತಾಯಕ್ಕ ಭಾವೀ ಅಳಿಯನನ್ನು ಕಾಣುವ ಆಸೆಯಿಂದ ಚಿಕ್ಕಲಿಂಗಪ್ಪನವರನ್ನು ಹಿಂಬಾಲಿಸಿದಳು. ಹಿಂದೆ ಹಿಂದೆ ಬರುತ್ತಿದ್ದ ತಾಯಕ್ಕನನ್ನು ತಮ್ಮ ಸಮಕ್ಕೆ ಕರೆದುಕೊಳ್ಳಲು ಅವರು ತುಂಬಾ ಪ್ರಯತ್ನಪಟ್ಟರು. ಆಗಲಿಲ್ಲ. ತಾವೇ ನಿಧಾನಮಾಡಿ ಅವಳ ಹತ್ತಿರ ಬರಲು ನೋಡಿದರು ಅದೂ ಆಗಲಿಲ್ಲ. ಅಷ್ಟರಲ್ಲಿ ಅವಳಳಿಯ ಕುಳಿತಿದ್ದ ಹೋಟಲು ಬಂದೇ ಬಿಟ್ಟಿತು. 'ಅಲ್ನೋಡು ತಾಯಿ, ಆ ದುಡ್ಡೀಸ್ಕೋ ಳೋನ ಹಿಂದೆ ಕೂತವನಲ್ಲ ನೀಲಿ ಶರಟಿಕ್ಕಂಡು ಅವನೇ—ಚೆಂದಾಗೆ ನೋಡ್ಕೋ' ಎಂದು ಚಿಕ್ಕಲಿಂಗಪ್ಪನವರು ಗುರುತಿಸಿಕೊಟ್ಟವನನ್ನು ತಾಯಕ್ಕ ನೋಡಿದಳು.

ತಲೆ ತುಂಬ ಕೂದಲು. ಹಿಂದೆ ದೊಡ್ಡ ಗಂಟು. ಕಪ್ಪು ಆಳು. ಕಿವಿಯಲ್ಲಿ ಕಡಕು. ನೀಲಿಯ ಶರಟು. ಹೆಗಲಮೇಲೊಂದು ಮಣಕು ಮಫ್ಲರು. ತಿಳುವಾದ ಕೊಳಕಾದ ಬೊಂಬಾಯಿ ಪಂಚೆಯ ಲುಂಗಿ.

ಬಿಳಿಯ ಬಣ್ಣದ ಎಕ್ಕಡ. ವಯಸ್ಸು ಸುಮಾರು ಇಪ್ಪತ್ಮೂರು ವರ್ಷವಿರ ಬಹುದು. ತುಂಡುಮೂಗಿನ ಆಸಾಮಿ.

ಅವನು ತಾಯಕ್ಕನನ್ನು ಗಮನಿಸಲಿಲ್ಲವಾಗಿ ಅವಳು ಅವನನ್ನು ಸಂಪೂರ್ಣವಾಗಿ ನೋಡಿಕೊಳ್ಳುವುದು ಸಾಧ್ಯವಾಯಿತು. ಅವನು ಟೀ ಕುಡಿಯುತ್ತಿದ್ದು ತಟ್ಟನೆ ಚಿಕ್ಕಲಿಂಗಪ್ಪನವರ ಸುಳಿವನ್ನು ಪತ್ತೆ ಹಚ್ಚಿ ಹೊರಕ್ಕೆ ಓಡಿಬಂದನು 'ಪ್ಪೊ! ಪಟೇಲರೆ........ಸ್ವಾಮ್ಯೋ' ಎನ್ನುತ್ತ ಅವರ ಬೆನ್ನುಬಿದ್ದನು. ತಾಯಕ್ಕನನ್ನು ದಾಟಿ ಅವರನ್ನು ಹಿಡಿದು ನಿಲ್ಲಿಸಿದನು. ಅನಂತರ ಪತ್ತೆ ಸಿಕ್ಕಿದವರಂತೆ ಪಟೇಲರು ಅವನನ್ನು ಪ್ರಿಯವಾಗಿ ಮಾತ ನಾಡಿಸಿದರು. ತಾಯಕ್ಕ ತಮ್ಮ ಜೊತೆಯಲ್ಲಿರುವುದನ್ನು ಅವನಿಗೆ ತಿಳಿಯ ದಂತೆ ಮಾಡಲು ಅವಳ ಕಡೆಯ ಗಮನವನ್ನು ಬಿಟ್ಟು ಅವಳಿಗೆ ಮರೆಯಾಗಿ ನಿಂತರು. ಅವಳು ತನ್ನ ದಾರಿಯನ್ನು ತಾನು ಹಿಡಿದು ಬಿಡುವಳಲ್ಲ ಎಂಬ ಸಂಕಟ ಮಾತ್ರ ತುಂಬಿತ್ತು. ಹೊಸ ವ್ಯಕ್ತಿಯಲ್ಲಿ ಆಸಕ್ತಿಯಿದ್ದ ತಾಯಕ್ಕ ಅವನನ್ನೇ ಗಮನಿಸಿಕೊಳ್ಳುತ್ತಿದ್ದಳು.

ಆತ "ಒಳ್ಳೇ ಪರವಿಲ್ಲಕಾ ಸಾಮ್ಯೋ ನೀವೂವಿ. ಸಂತೆಗೆ ಬಂದು ಬತ್ತೀನಿ ಅಂದ್ಬುಟ್ಟು ಬೆಳಗ್ನಿಂದ ಕಣ್ಣಿಗೇ ಬೀಳನಿಲ್ಲವಲ್ಲ! ನಿಮ್ಮನ್ನೇ ನಂಬ್ಕಂಡ್ರೆ ಆಯ್ತು" ಅಂದ.

ಚಿಕ್ಕಲಿಂಗಪ್ಪ ಅವನನ್ನು ಬೇಗ ತೊಲಗಿಸುವ ಏರ್ಪಾಡಿನಲ್ಲಿ "ಈಗ ಅದಕ್ಕೇ ಬಂದಿದೀನಲ್ಲೋ ಮಾದೇವು. ಎಲ್ಲಿ ಉಡಕ್ಲಪ್ಪ ಅಂತಿದ್ದಿ ಸಿಕ್ದೆಲ್ಲಾ.''

ಹುಡುಗನ ಹೆಸರು 'ಮಾದೇವು' ಎಂಬುದು ತಾಯಕ್ಕನಿಗೆ ತಿಳಿದಂತಾ ಯಿತು. ಅವನ ಮಾತಿನ ಧಾಟಿಯಿಂದ 'ಒರಟಾಳು' ಎಂಬುದೂ ನಿಶ್ಚಿತ ವಾಯಿತು. ಅವನ ವೇಷ ಭೂಷಣಗಳಿಂದ ಸ್ವಲ್ಪ 'ಸೋಕಿ'ಯವನೆಂದೂ ತಿಳಿಯಬಂತು. ಅವನು ಚಿಕ್ಕಲಿಂಗಪ್ಪನವರನ್ನು ಕೇಳುತ್ತಿದ್ದುದೇನೆಂಬು ದನ್ನು ತಿಳಿಯಬೇಕೆನ್ನಿಸಿ ಕಿವಿಯೆತ್ತಿದ ತಕ್ಷಣವೇ ಮಾದೇವು ಕೇಳಿದನು.

"ಚಿಲ್ಲಚಿಲ್ರೆ ಆದ್ರೆ ನನಗೆ ಬ್ಯಾಡಿ ಪಟೇಲರೆ, ನನಗಿವತ್ತು ನೂರು ರೂಪಾಯಿ ಒಂದೇ ಗಂಟ್ನಲ್ಲಿಬೇಕು. ಕೊಡೋ ಅಂಗಿದ್ರೆ ಕೊಡಿ.

ಇಲ್ದೇ ಓದ್ರೆ ಬೇಡಿ. ಬೇಸ್ತವಾರದವರ್ಗೂ ತಡೆದರೆ ನಾನೇ ಕೊಡ್ತೀನಿ ಅಂತ ಗುರುಕಾರ್ರು ಏಳವ್ರೆ"

"ನೂರು ಬೇಡಾಕಣೋ ಮಾದೇವು ನನ್ನ ಮಾತು ಕೇಳು. ಈಗಿಪ್ಪ. ತ್ತೈದು ರೂಪಾಯಿ ತಕೋ. ಬೆಟ್ಟದಮ್ಮನ ಜಾತ್ರೆ ಒತ್ತಿಗೆ ಐವತ್ತು ತಕೋ. ಆಮೇಲೊಂದು ತಿಂಗಾ ಬುಟ್ಟು ಇನ್ನು ಇಪ್ಪತ್ತೈದು ತಕೋ ಮಾದೇವು, ಇದೇ ಆಗೋಗ್ನಿಲ್ಲ, ಮದ್ಯ ನಿನಗಿನ್ನೂ ಒಂದು ಸತಿ ದುಡ್ಡು ಬೇಕಾಯ್ತದೆ ಅನ್ಯಾಯವಾಗಿ ತಕಂಡು ಕರ್ಚುಮಾಡಬುಡಬೇಡ."

"ನನ್ನ ಕರ್ಚುಕಟ್ಕಂಡು ನಿಮಗೇನಾ ಪಟೀಲರೇ. ಕೊಡ್ತೀನಿ ಅಂದ ಮೇಲೆ ಅದು ನಂದಾಗೋಯ್ತು. ಅತ್ತಾಗೆ ಕೊಟ್ಟು ಬುಡಿ"

ಚೌಕಾಶಿ ನಡೆದೂ ನಡೆದೂ ಕೊನೆಗೆ ಐವತ್ತುರೂಪಾಯಿಗೆ ನಿಂತಿತು. ಚಿಕ್ಕಲಿಂಗಪ್ಪನವರು ದುಡ್ಡನ್ನು ತೆಗೆದು ಮಾದೇವೂ ಕೈಯಿಗೆ ಹಾಕಿದರು. ತಕ್ಷಣವೇ ಅವನ ಕಾಲುಗಳು ಚಲಿಸಲು ಆತುರಪಟ್ಟವು. ಪಟೀಲರು ಅನುಮತಿಕೊಟ್ಟ ತಕ್ಷಣ ಹೊರಟುಬಿಟ್ಟನು. ಹೋಗುತ್ತಾ ಹೋಗುತ್ತಾ ನೋಟುಗಳನ್ನು ನೋಡಿಕೊಳ್ಳುತ್ತಾ ಹೋದನು. ನೋಟುಗಳ ಪೈಕಿ ಯಾವುದೋ ಒಂದರ ಚಲಾವಣೆಬಗ್ಗೆ ಅನುಮಾನ ಬಂದಿತೇನೋ ಹಿಂದಿರುಗಿದನು. ಚಿಕ್ಕಲಿಂಗಪ್ಪನವರು ಯಾರೋ ಒಬ್ಬ ಹೆಂಗಸಿನೊಡನೆ ಮಾತನಾಡುತ್ತಿದ್ದುದು ಕಂಡುಬಂದಿತು. ನಡೆಯದಿದ್ದರೆ ಆಮೇಲೆ ಅವರಿಗೇ ಹಿಂದಕ್ಕೆ ಕೊಡುವುದೆಂದುಕೊಂಡು ಮಾದೇವು ಹೋಟಲಿನ ಕಡೆಗೇ ನಡೆದನು.

ತಾಯಕ್ಕ ತನ್ನಪಾಡಿಗೆ ತಾನು ಹೋಗುವುದಾಗಿ ಹೇಳುತ್ತಿದ್ದಳು. ಚಿಕ್ಕಲಿಂಗಪ್ಪನವರು ಅವಳನ್ನು ಬಿಡದೆ ತಾಣ್ಯದ ಗಾಡಿಯೊಂದಿರುವುದಾಗಿಯೂ ಅದರಲ್ಲಿ ಕುಳಿತು ಹೋಗಬೇಕೆಂದೂ ಒತ್ತಾಯ ಮಾಡುತ್ತಿದ್ದರು. ಸಂತೆಯಿಂದ ಗಾಡಿಗಳು ಹೊರಡಬೇಕಾದರೆ ಸಂಜೆಯೇ ಆಗಬೇಕು. ಆದುದರಿಂದ ಹೊತ್ತಾಗಿ ಹೋಗುವುದೆಂದು ತಾಯಕ್ಕ ವಾದಿಸಿದರೆ, ಪಟೀಲರು ತಾಣ್ಯದ ಗಾಡಿಯವರು ಹೊಡಿಕೊಂಡು ಬಂದಿದ್ದ ತೆಂಗಿನಕಾಯಿ ಆಗಲೇ ತೀರಿಹೋಗಿದೆಯೆಂದೂ, ಅವರು ಸಂತೆಯಲ್ಲಿ ತೆಗೆದುಕೊಳ್ಳಬೇಕಾದ ಪದಾ

ರ್ಥಗಳೂ ಬಹಳ ಸ್ವಲ್ಪವೆಂದೂ, ಇನ್ನೇನು ಹೊರಟುಬಿಡುವರೆಂದೂ ಪಟೇಲರ ವಾದ. ತಾಯಕ್ಕನಿಗೆ ಏನು ಮಾತಾಡುವುದೆಂಬುದೇ ತಿಳಿಯಲಿಲ್ಲ.

ಅವರ ಉಪಚಾರದ ಮರ್ಮವೇನೆಂಬುದು ಅವಳಿಗೆ ಚೆನ್ನಾಗಿ ಅರಿವಿತ್ತು. ಆದರೂ ಸೌಜನ್ಯಕ್ಕೆ ಕಟ್ಟುಬಿದ್ದು ಸಂತೆಯಲ್ಲಿ ಅವರಿಗೆ ಸಿಕ್ಕಿಬಿದ್ದಿದ್ದಳು. ಅವರು ಕೊಡಿಸಬರುತ್ತಿದ್ದ ತಿಂಡಿತೀರ್ಥಗಳನ್ನು ಒಳ್ಳೆಯ ಮಾತಿನಿಂದ ಹಿಂದಿರುಗಿಸುವುದರಲ್ಲಿ ತಾಯಕ್ಕನ ಬುದ್ಧಿಶಕ್ತಿಗಳೆಲ್ಲವೂ ವ್ಯಯವಾಗುತ್ತಿತ್ತು. ಜನಸಂದಣಿಯ ನೆವದಲ್ಲಿ ಅವರು ಹತ್ತಿರ ಹತ್ತಿರ ಬರುತ್ತಿದ್ದಂತೆಲ್ಲಾ ತಾನು ದೂರ ಸರಿಯುವುದರಲ್ಲೇ ಅವಳ ಚದುರತೆಯ ಪರಮಾವಧಿ ಉಪಯೋಗ ನಡೆಯುತ್ತಿತ್ತು. ಕೊನೆಗೆ ಆ ಜನಸಂದಣಿಯೇ ಅವಳ ರಕ್ಷಣೆಗೂ ಬಂದಂತಾಯಿತು.

ಚಿಕ್ಕಲಿಂಗಪ್ಪನವರ ಪರಿಚಯದವರೊಬ್ಬರು ಬಂದು ಒಂದು ಹಸುವನ್ನು ತೋರಿಸಿ ಅದರ ಬೆಲೆಯ ಅಂದಾಜನ್ನು ಕಟ್ಟುತ್ತಿದ್ದಂತೆಯೇ ತಾಯಕ್ಕ ಜನಸಂದಣಿಯಮಧ್ಯೆ ಇಲ್ಲವಾದಳು. ಅಲ್ಲಿಗೆ ಹೊತ್ತುಬೀಳುವುದಕ್ಕೂ ಇನ್ನೊಂದೇ ಮಾರುದೂರವಿತ್ತು. ಇನ್ನೂ ಉಳಿದಿದ್ದ ಐದು ಮೈಲಿಗಳನ್ನು ತಾಯಕ್ಕ ಸಂತೋಷದಿಂದ ನಡೆದಳು.

ಸರಸರನೆ ನಡೆದಳು. ಅಲ್ಲಲ್ಲಿ ಓಡಿದಳು. ಆತುರದಲ್ಲಿ ಹತ್ತಿರದ ದಾರಿಯೆಂದು ಹೊಲದ ಕಾಲುದಾರಿಗಳಲ್ಲಿ ನುಗ್ಗಿ ಮುಂದೆ ಬೇಲಿಗಳಲ್ಲಿ ಕನ್ನ (ಮಾರ್ಗ)ವಿಲ್ಲದೆ ಹಿಂತಿರುಗಿಬಂದು ಸಾಗಿದಳು. ತಾಣ್ಯದ ಗುಡ್ಡ ಕಣ್ಣಿಗೆ ಬೀಳುವುದಕ್ಕೂ ಸೂರ್ಯ ಮರೆಯಾಗುವುದಕ್ಕೂ ಸರಿಹೋಯಿತು. ಅಂತೂ ಗಂಡಸರು ಕೈಕಾಲು ತೊಳೆದು ಊಟಕ್ಕೆ ಹೊರಡುವ ವೇಳೆಗೆ ಸರಿಯಾಗಿ ತಾಯಕ್ಕ ತನ್ನತೌರನ್ನು ಸೇರಿದಳು.

ಕತ್ತಲೆಯಲ್ಲಿ ಬಂದ ತಾಯಕ್ಕನ ಗುರುತನ್ನು ನಿಧಾನವಾಗಿ ಕಂಡುಹಿಡಿದು ಬಸವಣ್ಣ ಗಾಬರಿಯಿಂದ 'ಇದೇನಾತಾಯಿ ಇಷ್ಟೊತ್ನಲ್ಲಿ ಒಬ್ಬಳೇ ಬಂದೆ ?' ಎಂದ. 'ಒಬ್ಳೇ ಬರದೇ ಇನ್ನೇನು ಮಾಡ್ಲಿ; ಮಲ್ಲೇಸನಿಗೆ ಪರೀಕ್ಸೆ ಅತ್ರವಂತೆ. ಬರಕ್ಕಾಗನಿಲ್ಲ. ಅಂಗೂ ಕಿರೀಕಾಟಿಯಿಂದ ಇಂಜೋದಲ್ಲೇ ಹೊಂಟೆ; ಆದರೆ ಸಂತೇಲಿ ಒತ್ತಾಗೋಯ್ತು' ಎಂದು

ತಾಯಕ್ಕ ಮಡಿಲಿನಲ್ಲಿ ಕಟ್ಟಿದ್ದ ಸಾಮಾನುಗಳನ್ನು ತೆಗೆದು ಪೆಟಾರಿಯ ಮೇಲಿಟ್ಟಳು. ಮಕ್ಕಳೆಲ್ಲ ಹಜಾರದಲ್ಲಿ ಸಾಲಿಗೆ ಮಲಗಿಬಿಟ್ಟಿದ್ದುದರಿಂದ ಗಲಾಟೆಯಾಗಲಿಲ್ಲ. ಕೋಣೆಯಿಂದ ಚನ್ನೀರಮ್ಮ ( ಚನ್ನವೀರಮ್ಮ ) ನಿಶ್ಯಬ್ದವಾಗಿ ಹೊರಗೆ ಬಂದು, ' ಅತ್ಗಮ್ಮಾ ಬಂದ್ರಾ ! ನೀರು ಕೊನ್ನಿ ' ಎಂದಳು.

ಬಸವಣ್ಣನ ಊಟವಾದಮೇಲೆ ಹೆಂಗಸರಿಬ್ಬರದೂ ಊಟವಾಯಿತು. ತಾಯಕ್ಕ ಊಟಮಾಡಿ ಹೊರಗೆ ಬಂದಾಗ ಬಸವಣ್ಣ ದನಗಳ ಹುಲ್ಲು ನೀರು ನೋಡುತ್ತಿದ್ದನು. ತಾಯಕ್ಕ ಇನ್ನೊಂದು ಕಡೆಯ ಹಜಾರದ 'ತೊಂಬೆ' (ಕಣಜ)ಯೊಂದನ್ನು ಒರಗಿ ತೊಟ್ಟಿಯೊಳಗೆ ಕಾಲುಬಿಟ್ಟು ಕುಳಿತಳು. ಬಸವಣ್ಣ ಕೊಟ್ಟಿಗೆಯ ಕೆಲಸವೆಲ್ಲವನ್ನೂ ಮುಗಿಸಿಕೊಂಡು ಬಂದು ತಾಯಕ್ಕನ ಕಡೆಯ ಹಜಾರದ ಸೂರಿನ ಕೆಳಗೆ ಕಟ್ಟಿದ್ದ ಬಿದಿರಿನ ಕವಟಲಿನಲ್ಲಿದ್ದ ತನ್ನ ಕಂಬಳಿಯನ್ನು ಎಳೆದುಕೊಂಡು ಕೇಳಿದ.

"ನೀನಿಲ್ಲಿಗೆ ಬಂದು ಎಷ್ಟು ದಿನವಾಯ್ತು ಗೊತ್ತಾ ತಾಯಿ ?"

"ಮುಂದೆ ಬರೋ ಗೌರೀ ಹಬ್ಬಕ್ಕೆ ನಾಕು ವರ್ಸ"

"ಇಷ್ಟು ಅಪರೂಪವಾಗೋಗಿದ್ಯಲ್ಲ. ಅದೇನ್ತಾಯಿ ಈಗ ನಮ್ಮೂರಿಗೆ ಬಂದ ಪುಣ್ಯ ?"

"ಬರ್ಲೇ ಬೇಕಾಯ್ತುಕಣ್ಣ. ಬಾ ಕೂತ್ಗೊ"

"ಅಂತಾದೇನು ತಾಯಿ, ಮಕ್ಕಳಿಬ್ಬರೂ ಚಂದಾಗವ್ರೆ ತಾನೆ ? ಜೋಳಾ ನಿಮ್ಕಡೆ ಚಂದಾಗವೆ ಅಂತ ಕೇಳಿದ್ದೆ"

"ಎಲ್ಲಾ ಚಂದಾಗದೆಕಣ್ಣ. ಇಲ್ಲೂ ಮಕ್ಕಳು ಮರಿ ಚೆಂದಾಗವೆ ತಾನೆ ?"

"ಅವಕ್ಕೇನಾ ಏಳು ತಾಯಿ"

"ಅದ್ಯಾಕಣ್ಣ ಅಂಗಂದೀಯೇ. ಮಕ್ಕಳ ಮೇಲೆ ಬೇಜಾರು ಪಟ್ಕೋರುಂಟೆ ?............ಅಣ್ಣಾ, ಈಗ ನಾನು ಬಂದಿರೋದೂ ಮಕ್ಕಳ ಮಾತ್ಗೇಯೇ. ನಮ್ಮ ಪುಟ್ಟತಾಯೀನ ಆಗ್ಲೇ ಗುಜ್ಜಗೆರೆಯೋರು ಕೇಳೋಕ್ಕೆ ಬಂದವ್ರೆ. ನಿನ್ನೆಮೊನ್ನೆ ಮರಿ ಅದು. ನೋಡು ಈಗಾಗ್ಲೇ ಮದುವೆ ಮಾತು"

"ಓ ಅಂಗಾ ಸಮಾಚಾರ........ಸಂತೋಸದ ಮಾತೇ ಆಯ್ತು........ ಯಾರೂಂದೇ ? ಗುಜ್ಜಗೆರೆಯೋರಾ ?"

"ಊ್ಣ ! ಆ ಊರಿನ ಪಟೇಲರದು ಬಲೇ ಬಲವಂತವಾಗಿದೆ. ಹುಡುಗನ್ನೂ ಈ ಜಿನ ಸಂತೇಲಿ ನೋಡಿದೆ. ಸುಮಾರಾಗವನೆ. ಅದಕ್ಕೆ ನೀನೂ ನಿನ್ನ ಹೆಡ್ತಿ ಒಂದು ಜಿನದ ಮಟ್ಟಿಗೆ ಬಂದು ಗುಜ್ಜುಗೆರೆಗೆ ಹೋಗಿದ್ದು ಬರಬೇಕೂಂತ ಕೇಳ್ಕಳವೇ ಅಂತ........"

"ಪುಟ್ಟತಾಯಿಗೆ ಎಷ್ಟು ವರ್ಸ ?"

"ಅನ್ನೊಂದು ತುಂಬಿ ಅನ್ನೇರಡನೇ ವರ್ಸವಂತೆ"

"ಸರಿಮತ್ತೆ ಅಂಗಾದರೆ. ಗಂಡನ್ನೂ ನೀನು ಒಪ್ದಂಗೇ ಅಂತ ಕಾಣ್ತದೆ."

"ಇಲ್ಲಾಪ್ಪ, ನೀವೊಪ್ಪದೇ ಎಂಗೆ''

"ನಿನ್ನ ವಿಸಯ ಏಳು. ನಾವೇನು ನಿನ್ನ ಮನೆ ಕಾರ್ಯನಾ ನೆಪಕ್ಕೆ ಬಂದು ನಿಂತ್ಕಂಡು ಮಾಡೋರು"

"ಅಂಗೇನಿಲ್ಲಕಣ್ಣ, ನನಗಿಂತ ಮುಂಚೆ ನೀವೇ ಒಪ್ಪಬೇಕು."

"ನೋಡು ತ್ವಾಯಿ. ನೀನೂ ಗಂಡನಾ ಸುಮಾರಾಗವನೆ ಅಂದು ಬುಟ್ಟದೀಯೆ. ಇನ್ನೇನು ಉಳಿದಿರದು. ಗಂಡಿನ ಮನೆ ಮಠ ನೋಡದು. ಮನೆ ದೇವರುಗಳಿಗೆ ಸರಿಬೀಳ್ತದೋ ಇಲ್ಲವೋ ನೋಡವು ಅಷ್ಟೇತಾನೇ. ಆಗೋಗ್ಲೀ ಬುಡು. ಇದೇ ವರ್ಸದಲ್ಲಿ ಮಾಡುಬುಡಬೇಕೂಂತ ಇದೀಯಾ ?"

"ನೀ ಬಂದು ನೋಡು ಆಮೇಲೆ ಪ್ರಸ್ತಾಪ''

"ಅಷ್ಟೇತಾನೆ, ಏಳು ನಿನಗೂ ನಡಕಂಡು ಬಂದು ಶಾನೆ ದಣಿವಾಗೈತೆ ಮಲೀಕೋ ಓಗು. ಒತಾರೆ ಮಾತಾಡ್ಕಳವೆ''

ಬಸವಣ್ಣ ತಾಯಕ್ಕನಿಗೊಂದು ಕಂಬಳಿತೋರಿಸಿ ತಾನು ಬೀಡೀ ಹಚ್ಚಿಕೊಂಡು ಬೀದಿಯ ಜಗುಲಿಯ ಕಡೆಗೆ ಹೋದನು. ತಾಯಕ್ಕ ಮಕ್ಕಳು ಮಲಗಿದ್ದ ಹಜಾರದಲ್ಲಿ, ಮಕ್ಕಳ ತಲೆದೆಸೆಯಲ್ಲಿ ಒಂದು ಮಂದ ಲಿಗೆ ಹಾಸಿ ಮಲಗಿದಳು. ಚನ್ನೂರಮ್ಮ ಇನ್ನೂ ಕೋಣೆಯಲ್ಲೇ ಸೇರಿ

ಕೊಂಡು ಏನೇನೋ ಶಬ್ದಮಾಡುತ್ತಿದ್ದಳು. ಅಷ್ಟು ಇಷ್ಟು ಹೊತ್ತು ತಾಯಕ್ಕ ಎಚ್ಚರವಾಗಿಯೇ ಇದ್ದಳು. ಚನ್ನೂರಮ್ಮ ಅದು ಯಾವ ಹೊತ್ತಿನಲ್ಲಿ ಬೀದಿಯ ಜಗಲಿಗೆ ಹೋದಳೋ ತಾಯಕ್ಕನಿಗೆ ತಿಳಿಯದು. ಅವಳಿಗೆ ಪಟ್ಟಾದ ನಿದ್ದೆಬಂದಿತ್ತು.

ಪುನಃ ಅವಳಿಗೆ ಎಚ್ಚರಿಕೆಯಾದಾಗ ಬೆಳಿಗ್ಗೆ ಏಳು ಗಂಟೆಗೆ ಮೀರಿ ಹೋಗಿತ್ತು. ಆತುರವಾಗಿ ಎದ್ದು ಮುಖ ತೊಳೆದು ಪೂಜೆ ಮುಗಿಸಿದಳು. ಬಸವಣ್ಣ ತೋಟಕ್ಕೆ ಹೊರಟುಹೋಗಿದ್ದನು. ಚನ್ನೂರಮ್ಮ ನಗುನಗುತ್ತಲೇ ಮಾತನಾಡುತ್ತ ತಾಯಕ್ಕನಿಗೆ ತಂಗಳು ಉಣಬಡಿಸಿದಳು. ಊಟವಾದ ಮೇಲೆ ಮಕ್ಕಳಿಗೆಲ್ಲ ತಿಂಡಿ ಪದಾರ್ಥವನ್ನು ಹಂಚಿದ್ದಾಯಿತು. ಅಣ್ಣ ಮನೆಗೆ ಬಂದತಕ್ಷಣ ತಾನು ಊರಿಗೆ ಹೊರಡುವುದಾಗಿ ತಾಯಕ್ಕ ಚಡಪಡಿಸಿದಳು. ಚನ್ನೂರಮ್ಮ ಅವರು ಬರುವುದು ಮಧ್ಯಾಹ್ನವಾಗುವುದೆಂದು ನಿಧಾನವಾಗಿಯೇ ಹೇಳಿದಳು. ಹಾಗೆಯೇ ಬಸವಣ್ಣ ಬರುವುದೂ ಮಧ್ಯಾಹ್ನ ಒಂದು ಗಂಟೆಯೇ ಅಯಿತು.

ಅವನ ಊಟ ಮುಗಿದ ಮೇಲೆ ತಾಯಕ್ಕ ತನಗೆ ಊರಿಗೆ ಹೊರಡಲು ಅನುಮತಿ ಬೇಡಿದಳು. 'ಇಷ್ಟು ಹೊತ್ತಿನ ಮೇಲೆ ಆಗುವುದಿಲ್ಲ' ಎಂದು ಬಸವಣ್ಣ ಖಂಡಾಖಂಡಿತವಾಗಿ ಹೇಳಿಬಿಟ್ಟನು. ಅವನ ಆ ಖಡಾಖಂಡಿತವಾದ ಧ್ವನಿಯಲ್ಲಿ ಒಂದು ವಿಧವಾದ ಬಿಗಿಯೂ ಇತ್ತು. ಹಿಂದಿನ ದಿನದ ರಾತ್ರಿಯ ಸಂಭಾಷಣೆಯಲ್ಲಿ ಅವನ ಮಾತಿನಲ್ಲಿದ್ದ ಮಾರ್ದವತೆ ಎಲ್ಲಿಯೋ ಮಾಯವಾಗಿತ್ತು.

ನಿಜಕ್ಕೂ ತಾಯಕ್ಕನು ಊರಿಗೆ ಹೊರಡಲು ಹೊತ್ತಾಗಿ ಹೋಗಿದ್ದುದರಿಂದ ಅವಳು ನಿಲ್ಲಲೇ ಬೇಕಾಯಿತು. ಪುಟ್ಟತಾಯಿಯೊಬ್ಬಳೇ ಇದ್ದಾಳೆ ಎಂದು ಘಳಿಗೆ ಘಳಿಗೆಗೂ ಪೇಚಾಡಿಕೊಂಡಳು. ನಾಳೆಯ ಬೆಳಿಗ್ಗೆ ಅಪ್ಪಣೆಯನ್ನೇ ಕೇಳದೇ ಹೊರಡಬಹುದೆಂದಾಗಿದ್ದುದರಿಂದ ಇದ್ದುದರಲ್ಲೇ ಸಮಾಧಾನ ತಂದುಕೊಂಡು ತಾಯಕ್ಕ ಕಾಲವನ್ನು ಕಷ್ಟುಪಟ್ಟು ತಳ್ಳುತ್ತಿದ್ದಳು. ಕೊನೆಗೆ ನಿನ್ನೆ ಅಣ್ಣತಂಗಿಯರು ಮಾತನಾಡುತ್ತ ಕುಳಿತಿದ್ದ ವೇಳೆ ಬಂದಿತು. ಯಾವದಿನ ಬಸವಣ್ಣ ಹೆಂಡತಿಯನ್ನು ಕರೆದು

ಕೊಂಡು ಮೊದಲು ಶಿರೀಕಾಟಿಗೆ ಬರುವುದೆಂಬುದನ್ನು ತೀರ್ಮಾನಿಸಿಕೊಳ್ಳಲು ತಾಯಕ್ಕ ಅಣ್ಣನನ್ನು ಪುನಃ ಮಾತಿಗೆ ಕರೆದಳು. ಅಣ್ಣ, ಒತ್ತಾಯಕ್ಕೆ ಮಾತನಾಡುವವನಂತೆ ತೋರಿಬಂದು ಅವಳಲ್ಲಿ ಪ್ರಾರಂಭದಲ್ಲಿಯೇ ಕಳಂಕ ಏರ್ಪಟ್ಟಿತ್ತು. ಆದರೂ ವಿಧಿಯಿಲ್ಲದೆ ಕೇಳಿದಳು.

‘ ನಾನೂ ಬೆಳಿಗ್ಗೆ ಊರಿಗೋಗುಬಟ್ಟು ಬತ್ತೀನಿ ಕಣಣ್ಣ. ನೀವೆಂದು ಬತ್ತೀರಿ ಅನ್ನದನ್ನ ಒಸಿ ಏಳಬುಟ್ರೆ ನಾನು ಅವರಿಗೆ ಏಳಕ್ಕೆ ಸರಿಯೋಯ್ತದೆ.’

ಸ್ವಲ್ಪಹೊತ್ತು ಬಸವಣ್ಣ ಮಾತನಾಡಲೇ ಇಲ್ಲ. ಅವನ ಮನಸ್ಸಿನಲ್ಲಿ ಯಾವುದೋ ತುಮುಲ ನಡೆಯುತ್ತಿದ್ದಂತಿತ್ತು. ಪುನಃ ತಾಯಕ್ಕ ಅದೇ ಮಾತು ಹಾಕಿದಳು. ಅವನು ಆಳವಾದ ಧ್ವನಿಯಲ್ಲಿ ಹೇಳಿದನು.

‘ ನಾವೊಂದು ಸತಿನೋಡದೇನದೆ ತಾಯಿ, ನೀನೇ ಒಪ್ಪಿಗಿಪ್ಪಿ ಎಲ್ಲಾ ಸಿದ್ದಮಾಡು ನೋಡುವೆ’

‘ ಆ! ಹಂಗಂದ್ರೇನಣ್ಣ. ನೀನೇ ಇಂಗಂದುಬುಟ್ರೆ ಎಂಗೆ ?’

“ ಏನಿಲ್ಲಾ ಕಣೋಗು ತಾಯಿ. ನಿನ್ನ ಕೆಲಸ ನಮ್ಮಿಂದ ನಿಂತೋದದ ? ಈಗ ಸದ್ಯಕ್ಕೆ ನಮಗೂ ಊರುಬುಟ್ಟು ಹೊರಡಕ್ಕೇ ಬಾಳಕಷ್ಟಾ ಆಯ್ತದೆ. ನಿನ್ನ ಮನೆ ಲಗ್ನಾನೂ ಮುಂದ್ನೊರ್ಸ ಆಗಿದ್ರೇ ಚಂದಾಗಿತ್ತು. ಹೆಂಗಾರೂ ಆಗಲಿ ಪುಟ್ಟತಾಯಿ ಋಣಾನುಬಂಧ ಹೆಂಗಿದ್ದದೊ?’

‘ ನಿನ್ನೆರಾತ್ರಿ ಆಡಿದ ಮಾತೆಲ್ಲಾ ಏನಾಯ್ತಣ್ಣ ?’

‘ನಾನೇನಾಡಿದೆ ತಾಯಿ ?’

‘ ..........ಹೋಗ್ಲೀಬುಡು ನೀನೇನ್ಮಾಡಿಯೆ — ಅದು ಅರ್ಧರಾತ್ರಿ ಉಪದೇಶ’

‘ ತಾಯಿ ! ಬಾಯಿಗೆ ಬಂದಮಾತು ಬುಟ್ಟುಬುಡಬೇಡ. ಅವಳಿಗೆ ಪುಟ್ಟತಾಯಿ ಕಂಡರೆ ಎಷ್ಟುಆಸೆ ಅನ್ನದು ನಿನಗೇನು ಗೊತ್ತು ?’

‘ ಗೊತ್ತು ಗೊತ್ತು ! ನಿನ್ನ ಮಾತಿನ ತರದಲ್ಲೇ ಗೊತ್ತಾಗಲಿಲ್ಲವಾ ಅವಳ ಪಿರೀತಿ ’

'ಇಲ್ಲ ಕಣ್ತಾಯಿ; ಅವಳಿಗೆ ಪುಟ್ಟತಾಯೀನ ತನ್ನ ಅಕ್ಕನ ಮಗನಿಗೆ ಮಾಡ್ಕಬೇಕೂ ಅನ್ನೋಆಸೆಯಿತ್ತು. ಅದ್ಯಾಕೆ ಈಗಲೂ ಅದೆ.'

'ಹಂಗಾದರೆ, ಗುಜ್ಜುಗೆರೆ ಗಂಡುತಪ್ಪಿಸಿಬುಡ್ತೀನಿ. ಈಗ್ಲೂ ಕೇಳು ಮಾಡಸ್ತಾಳಂತೇನೊ'

'ಅಂಗನ್ನಕಿಲ್ಲ........ಋಣಾನುಬಂಧ ಮುಖ್ಯ'

"ಓಗಣ್ಣೋ ಸಾಕು. ಈ ಬೂಟಾಟಿಕೆಯೆಲ್ಲ ನನ್ನ ಅತ್ರವೇ ಬುಡ ಬ್ಯಾಡ. ಒಸಿ ಕೇಳು. ಕೊನೇದಾಗಿ ಏಳ್ತೀನಿ. ಇನ್ನು ಪುನಃ ನಿನ್ನ ಕರೆಯಕ್ಕೆ ನಾನು ಬರಕ್ಕಾಗಕ್ಕಿಲ್ಲ. ನೆಂಟಸ್ತನದಲ್ಲಿ ಚೆನ್ನಾಗಿರಕ್ಕಿಲ್ಲ ಅಂತ ತಿಳ್ಕಂಡು ಇನ್ನೊಂದು ಐದಾರು ಜಿನದೊಳಗೆ ಕಿರೀಕಾಟಿಗೆ ನೀವು ಬಂದ್ರೊ ಸರಿ. ಇಲ್ಲದೇ ಇದ್ರೆ ಸಿವ ಮಾಡಿಸಿದಂಗಾಗಲಿ ಓಗು.'

ಎಂದು ಸಿಡಾರನೆ ತಾಯಕ್ಕ ಎದ್ದುನಿಂತಳು. ಬಸವಣ್ಣನಿಗೂ ಅದರಿಂದ ಕೊಂಚ ಅಳುಕೇನೋ ಉಂಟಾಯಿತು. ಅವನ ಒಣ ಸಮಾಧಾನವನ್ನು ತಾಯಕ್ಕ ಕೇಳುವ ಹಾಗಿರಲಿಲ್ಲ. ಅವಳು ರೇಗಿ ಉರಿಯುತ್ತಾ ಹೋಗಿ ಚಾಪೆಯಮೇಲೆ ಬಿದ್ದುಕೊಂಡಳು. ಕೊಟ್ಟಿಗೆಯಲ್ಲಿ ಎತ್ತುಗಳು ಒಂದಕ್ಕೊಂದು ತಿವಿದಾಡುವುದಕ್ಕೆ ಮೊದಲುಮಾಡುವವರೆಗೂ ಬಸವಣ್ಣ ಹಾಗೆಯೇ ಕುಳಿತಿದ್ದು ಅನಂತರ ಎದ್ದುಹೋಗಿ ಎತ್ತುಗಳ ಹಗ್ಗವನ್ನು ತುಂಡುಮಾಡಿ ಕಟ್ಟಿ, ಕಂಬಳಿ ಎಳೆದುಕೊಂಡು ಜಗಲಿಯ ಕಡೆಗೆ ಹೋದನು. ಚನ್ನೂರಮ್ಮನ ಪಾತ್ರೆಗಳ ಶಬ್ದ ಕೋಣೆಯಲ್ಲಿ ನಡೆದೇಇತ್ತು.

ಬಸವಣ್ಣ, ಚನ್ನೂರಮ್ಮನವರ ಮೇಲಿನ ಹೊಟ್ಟೆಕಿಚ್ಚಿಗಾದರೂ ಪುಟ್ಟತಾಯಿಯ ಮದುವೆಯನ್ನು ಮಾಡಿಯೇ ಬಿಡಬೇಕೆಂಬ ಹಟವನ್ನು ಹೊತ್ತು ತಾಯಕ್ಕ ನಿದ್ದೆಮಾಡಿದಳು. ಕೋಳಿ ಕೂಗುತ್ತಿದ್ದಂತೆಯೇ ಮುಳ್ಳುಚುಚ್ಚಿದವಳಂತೆ ಎದ್ದು ಮುಖ ತೊಳೆದು ಮೊದಲು ತಾಣ್ಯವನ್ನು ಬಿಟ್ಟುಹೊರಟಳು. ಹೋಗುತ್ತೇನೆಂದು ಕೂಡ ಚನ್ನೂರಮ್ಮನಿಗೆ ಸರಿಯಾಗಿ ಹೇಳಲಿಲ್ಲ. ಬಸವಣ್ಣನಂತೂ ಆ ಬೆಳಿಗ್ಗೆ ತಂಗಿಗೆ ಮುಖ ತೋರಿಸಲಾರದೇ ಕೆಲಸವಿಲ್ಲದಿದ್ದರೂ, ಜಮೀನಿನಮೇಲೆ ಹೊರಟುಬಿಟ್ಟಿದ್ದನು.

ಕಿರೀಕಾಟಿಗೆ ತಲುಪುವವರೆಗೂ ತಾಯಕ್ಕ ತನಗೆ ತೌರುಮನೆಯ ಲ್ಲಾದ ಅನ್ಯಾಯಕ್ಕಾಗಿ ಕಣ್ಣೀರು ಹಾಕುತ್ತಾ, ಮುಂದಿನ ಏರ್ಪಾಡುಗ ಳನ್ನು ಲೆಕ್ಕ ಹಾಕಿಕೊಳ್ಳುತ್ತಾ ಬಂದಳು. ಮೊದಲು ಕಿರೀಕಾಟಿಯ ಮೇಸ್ತ್ರಿ ಹತ್ತಿರಕ್ಕೆ ಹೋಗಿ ಮಹದೇವಪ್ಪ-ಪುಟ್ಟತಾಯಿಯರ ಹೆಸರು ಬಲಕ್ಕೆ ಹೇಗಿದೆ ಕೇಳಿಕೊಳ್ಳಬೇಕು. ಸರಿಬಂದರೆ ಜವನಪ್ಪನ ಬಳಿಗೆ ಹೋಗಿ ಒಂದಷ್ಟು ಹಣ ಸಹಾಯವನ್ನು ಸಾಲವಾಗಿ ಕೇಳಿಕೊಳ್ಳಬೇಕು. ಅದು ಆಗದಿದ್ದರೆ ತನ್ನ ಹಳೆಯ ಸಾಲದವರಾದ ಬೆಂಗಳೂರು ಮೊದಲಿಯಾರರಿಗೇ ಒಂದುಕಾಗದ ಬರೆಸಬೇಕು. ಅವೆರಡೂ ತಪ್ಪಿದರೆ ಚಿಕ್ಕಲಿಂಗಪ್ಪನವರಿದ್ದೇ ಇದ್ದಾರೆ. ಅವರಿಗೆ ಸ್ವಲ್ಪ ಹೇಳಿಬಿಟ್ಟರೆ ಸಾಕು. ತಾವೇ ಎಲ್ಲವನ್ನೂ ಮಾಡಿಮುಗಿಸಿಬಿಡಬಲ್ಲರು. ಆದರೆ ?

ಯೋಚನೆಗಳನ್ನು ಯಾವಯಾವ ದಾರಿಯಲ್ಲಿ ಹರಿದುಬಿಟ್ಟರೂ ಆ 'ಆದರೆ?'ಗೇ ಬಂದುನಿಂತುಕೊಳ್ಳುತ್ತಿತ್ತು. ಅಲ್ಲಿಯವರೆಗೆ ನೋಡಿ ಕೊಳ್ಳೋಣವೆಂದು ತಾಯಕ್ಕ ಧೈರ್ಯ ತೆಗೆದುಕೊಂಡಳು. ಹಾಗೆ ಅವಳು ಪ್ರಯಾಣಮುಗಿಸಿ ಕಿರೀಕಾಟಿಯ ಮನೆ ಸೇರುವವರೆಗೆ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಅವಳಿಗೆ ಬಿಸಿಲಿನ ಪರಿವೆಯೇ ಇರಲಿಲ್ಲ. ಬಂದು ಮನೆಯ ಜಗುಲಿಯಮೇಲೆ ಕುಳಿತಮೇಲೆ ಬಿಸಿಲಿನ ಪ್ರಖರತೆ ಅವಳ ಕಣ್ಣನ್ನು ಕುಕ್ಕಿತು.

ಮನೆಗೊಂದು ದುರ್ಬಲವಾದ ಬೀಗ ಹಾಕಿತ್ತು. ಅದು ಕಾಳಕ್ಕನ ಮನೆಯದು. ಪುಟ್ಟತಾಯಿ ಎಲ್ಲೋ ಆನಂದವಾಗಿ ಕುಣಿಯಲು ಹೋಗಿ ದ್ದಿರಬೇಕು. ಸ್ವಲ್ಪಹೊತ್ತು ಸುಧಾರಿಸಿಕೊಂಡಮೇಲೆ ತಾಯಕ್ಕ ಕಾಳಕ್ಕನ ಮನೆಗೆಹೋಗಿ ಬೀಗ ತಂದು ಬಾಗಿಲು ತೆಗೆದುಕೊಂಡು ಪೊರಕೆ ಹಿಡಿದಳು. ಹೊತ್ತುಬೀಳುವ ಸಮಯಕ್ಕೆ ಸರಿಯಾಗಿ ಪುಟ್ಟತಾಯಿ ಬಂದು ಬೈಸಿ ಕೊಂಡಳು. ಕಾಳಕ್ಕನ ಮನೆಯಿಂದ ಎಮ್ಮೆ ಎಮ್ಮೆಯ ಕರುಗಳನ್ನು ತಂದು ಮನೆಯಲ್ಲಿ ಕಟ್ಟಿದಳು. ಅಮ್ಮ ಬಂದತಕ್ಷಣ ಹೇಳಬೇಕೆಂದಿದ್ದ ಯಾವುದೋ ಒಂದು ವರ್ತಮಾನವನ್ನು ಮರೆತು ಪುಟ್ಟತಾಯಿ ಅಲ್ಲಲ್ಲಿ ಹಾಗೆ ಹಾಗೆಯೇ ನಿಂತು ಜ್ಞಾಪಿಸಿಕೊಳ್ಳುತ್ತಿದ್ದಳು. ಕೊನೆಗೂ ಅದು ಜ್ಞಾಪಕ ಬಂದುದು ಅದನ್ನು ಹೇಳಲು ಕಾಳಕ್ಕ ಮನೆಗೆ ಬಂದಾಗಲೇ.

ತಾಯಕ್ಕ ತಾಣ್ಯಕ್ಕೆ ಹೋದದಿವಸ ಕಿರೀಕಾಟಿಗೆ ಬೆಂಗಳೂರಿನ ಮೊದಲಿಯಾರರು ಬಂದಿದ್ದರಂತೆ. ಅವರಿಗೆ ವ್ಯಾಪಾರದಲ್ಲಿ ತುಂಬಾ ನಷ್ಟ ವಾಗಿ ಹೋಗಿ ಕಿರೀಕಾಟಿಯ ತೋಟವನ್ನು ಮಾರಿಬಿಡುತ್ತಾರಂತೆ. ತಾಯ ಕ್ಕನ ಸಾಲದ ಹಣವೂ 'ಫೈಸಲ್' ಆದರೆ ತುಂಬಾ ಉಪಕಾರವಾಗುತ್ತದೆ ಯಂತೆ. ಅವರು ಈ ವಿಷಯವನ್ನು ತಾಯಕ್ಕನಿಗೇ ಮುಖತಃ ಹೇಳಲು ಆಶಿಸಿ ಸುಮಾರು ಮಧ್ಯಾಹ್ನ ಎರಡು ಗಂಟೆಯವರೆಗೂ ಕಾದುನೋಡಿ ಹೊರಟುಹೋಗಿದ್ದರಂತೆ.

ಇಷ್ಟು ವರ್ತಮಾನವನ್ನು ಕಾಳಕ್ಕ ತಾಯಕ್ಕನಿಗೆ ತಲುಪಿಸಿದಳು. ಮೊದಲಿಯಾರರು ಕಾಳಕ್ಕನೊಡನೆ ಇಷ್ಟು ವಿಷಯಗಳನ್ನು ಹೇಳಿರಲಿಲ್ಲ. ಆದರೂ ಊರಿನ ಜನಜನಿತ ಸುದ್ದಿಯಿಂದ ಮೊದಲಿಯಾರರ ಉದ್ದೇಶ ವನ್ನು ತಿಳಿದು ಕಾಳಕ್ಕ ಹೇಳಿದ್ದುದು. ತಾಯಕ್ಕ ಈ ವರ್ತಮಾನವನ್ನು ಕೇಳಿ ಸಪ್ಪಗಾದಳು.

ಮೊದಲಿಯಾರರು ತುಂಬಾ ಕನಿಕರದ ಹಣವಂತರಾಗಿದ್ದರು. ಅವರು ತಾಯಕ್ಕನ ಮಾವ ಮಲ್ಲಪ್ಪನಿಗೆ ಸಾಲಕೊಟ್ಟಿದ್ದು ಅವನ ಅರ್ಧ ಕಟ್ಟಿದ್ದ ಮನೆ ಮತ್ತು ಆ ವರ್ಷವೇ ಆದ ಮೂರುದನಗಳ ಸಾವನ್ನು ನೋಡಿ. ಅವರು ವ್ಯಾಪಾರಿಗಳಾದುದರಿಂದ ಆ ದುಡ್ಡಿಗೆ ಸರಿಯಾದ ದರದಲ್ಲಿ ಬಡ್ಡಿ ಯನ್ನು ಹಾಕಿದ್ದುದು. ಇಲ್ಲದಿದ್ದರೆ ಅವರ ತೋಟದ ಯೋಗಕ್ಷೇಮವನ್ನು ದೂರದಿಂದಲೇ ಗಮನಿಸಿಕೊಳ್ಳುತ್ತಾ ಮೊದಲಿಯಾರರಿಗೆ ಸಮಾಚಾರ ತಿಳಿ ಸುತ್ತಿದ್ದ ಮಲ್ಲಪ್ಪನ ಹತ್ತಿರ ಬಡ್ಡಿಯನ್ನೇ ತೆಗೆದುಕೊಳ್ಳುತ್ತಿರಲಿಲ್ಲ. ಅದೇ ದಾಕ್ಷಿಣ್ಯಕ್ಕೆ ಅವನಿಗೆ ಬಡ್ಡಿಯ ದರವನ್ನು ಶೇಕಡ ಆರರಿಂದ ನಾಲ್ಕೂವರೆ ರೂಪಾಯಿಗೆ ಇಳಿಸಿಯೂ ಇದ್ದರು. ತಾಯಕ್ಕ ಅಂಥವರನ್ನು ಮಗಳ ಮದುವೆಗಾಗಿ ನಂಬಿಕೊಂಡಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಅವಳ ಅದೃಷ್ಟಕ್ಕೆ ಸರಿಯಾಗಿ ಈಗಲೇ ಮೊದಲಿಯಾರರಿಗೆ ಅವರ ತೋಟ ಮಾರು ವಂತಹ ಪರಿಸ್ಥಿತಿಯೊದಗಿತ್ತು. ತಾಯಕ್ಕನಿಗೆ ಜವನಪ್ಪನ ಆಸೆಯೂ ಇದ ರಿಂದ ತಪ್ಪಿಹೋಯಿತು. ಜವನಪ್ಪ ನೂರಿನ್ನೂರರ ಆಸಾಮಿಮಾತ್ರ.

ಕೊನೆಗೂ ಚಿಕ್ಕಲಿಂಗಪ್ಪನವರ ಆಶ್ರಯಕ್ಕೇ ಬಂದಿತು. ಅದರಿಂದ

ತಾಯಕ್ಕನಿಗಾದ ಮನಸ್ಸಿನ ನೋವು ಅಷ್ಟಿಷ್ಟಲ್ಲ. ಆದರೇನು ಮಾಡು ವುದು, ಚಿಕ್ಕಲಿಂಗಪ್ಪನವರು ಮೊದಲಿಯಾರರ ಸಾಲವೆಲ್ಲವನ್ನೂ ಒಪ್ಪಿ ಕೊಂಡು ತಮ್ಮ ನೂರುರೂಪಾಯಿಗಳನ್ನು ಸೇರಿಸಿಕೊಂಡು, ಪುಟ್ಟತಾ ಯಿಯ ಮದುವೆಗೂ ಮುನ್ನೂರು ರೂಪಾಯಿಗಳನ್ನು ಕೊಟ್ಟು, ರಿಜಿಸ್ಟರ್ ಖರ್ಚನ್ನೂ ತಾವೇ ವಹಿಸಿಕೊಂಡು ಕಾಗದ ಪತ್ರ ಮಾಡಿಸಿಕೊಳ್ಳುವುದಕ್ಕೆ ತಾವೇ ತಯಾರಾಗಿ ನಿಂತರು. ಇಷ್ಟೆಲ್ಲ ಸೌಲಭ್ಯಗಳ ಮುಂದೆ ತಾಯಕ್ಕ ನಿಗೆ ಅವರಿಂದೊದಗಬಹುದಾದ ಕಿರುಕುಳ, ಜನಾಪವಾದಗಳು ಕಿರಿದಾಗಿ ತೋರಿದವು. ಇದರಮೇಲೆ ಅಣ್ಣ ಅತ್ತಿಗೆಯರ ಮೇಲಿನ ಹಟ, ಮಾ ದೇವೂವಿನ 'ಸೋಕಿ'ಯ ವ್ಯಕ್ತಿತ್ವದ ಆಕರ್ಷಣೆ, ಗಂಡ ಸತ್ತಮೇಲೆ ಇಷ್ಟು ಬೇಗ ತಾನು ಕೈಗೊಳ್ಳಬಹುದಾದ ಒಂದು ಯಾಜಮಾನ್ಯದ ಸಡಗರಗಳು ತಾಯಕ್ಕನ ಉಳಿದ ವಿವೇಚನೆಯನ್ನು ಮೂಲೆಗೆ ತಳ್ಳಿತು.

ಕಾಳಕ್ಕನಿಗೆ ತನ್ನ ಅಣ್ಣ ಅತ್ತಿಗೆಯರ ನೀಚಬುದ್ಧಿಯನ್ನು ವರ್ಣಿಸಿ ದಳು. ಪುಟ್ಟತಾಯಿಯ ಮದುವೆಗೆ ಅವರು ಬರುವುದಕ್ಕೆ ಮುಂಚೆ ತನ್ನಿಂದ ಏನಾದರೂ ಸರಿಯಾದ ಪ್ರತಿಫಲವನ್ನು ಅವರು ನಿರೀಕ್ಷಿಸಿದ್ದಾ ರೆಂದು ತಾಯಕ್ಕ ಸರಿಯಾಗಿ ಊಹಿಸಿ ಜರಿದಳು. ಅವರನ್ನು ಕರೆಯ ದೆಯೇ ಮದುವೆಮಾಡಿಬಿಡುತ್ತೇನೆಂದು ಶಪಥಮಾಡಿದಳು. ಶಾಸ್ತ್ರ-ಸೂತ್ರ ಗಳೆಲ್ಲ ಸರಿಯಾಗಿರುವುದೆಂದೂ ಕೇಳಿ ತಿಳಿದುಕೊಂಡಾಯಿತು. ಗಂಡನ ಮನೆಯ ದೇವರು ಚಿಗರಳ್ಳಿ ಜೇವಿನಮ್ಮ—ಹೆಣ್ಣಿನ ಮನೆದೇವರು ಸೊಮ್ಮನ ಗುಡಿಸಿದ್ದೇಶ್ವರ. ಆದುದರಿಂದ ಪರವಾಷಿಯಾಯಿತೆಂದು ಹಿರಿ ಯರು ಹೇಳಿದುದೂ ಆಯಿತು. ಹೆಣ್ಣಿನ ಮನೆಯಲ್ಲೇ ಲಗ್ನವೆಂದೂ ತೀರ್ಮಾನವಾಯಿತು. ಜೇಷ್ಠದ ನವಮಿಯ ದಿವಸ ಚಪ್ಪರ, ದಶಮಿಯ ದಿವಸ ಧಾರೆ ಎಂದೂ ಲಗ್ನ ಕಟ್ಟಿಸಿದ್ದಾಯಿತು.

ಹೆಣ್ಣಿನಕಡೆಯ ಬಂಡವಾಳಗಾರ, ಗಂಡಿನಕಡೆಯ ಬಂಡವಾಳಗಾರ ಇಬ್ಬರೂ ಒಬ್ಬರೆ. ಅವರೇ ಚಿಕ್ಕಲಿಂಗಪ್ಪನವರು! ಅವರದೇ ಓಡಾಟ. ಜವಳಿಯನ್ನೂ ಅವರೇ ತಂದರು. ದಿನಸಿಯನ್ನೂ ಅವರೇ ತಂದರು. ಸ್ವಾಮಿ ಗಳೂ ಅವರ ಕಡೆಯವರೇ. ವಾದ್ಯದವರೂ ಅವರ ದಾಕ್ಷಿಣ್ಯದವರೇ.

ಮಿಕ್ಕ ಎರಡು ಕಡೆಯವರೂ ಹೆಣ್ಣುಗಂಡುಗಳಷ್ಟೇಕೆಲಸಕ್ಕೆ ಬಾರದವ ರಾಗಿದ್ದರು.

ಇಷ್ಟಾದರೂ ಹೆಣ್ಣುಗಂಡುಗಳಿಬ್ಬರ ಕಡೆಯವರಿಗೂ, ಇವರಿಗೇಕೆ ಈ ಮದುವೆಯಲ್ಲಿ ಇಷ್ಟು ಆಸಕ್ತಿ ಎಂಬುದು ತಿಳಿಯದು. ತಾಯಕ್ಕನಿಗೇನೋ ಸ್ವಲ್ಪ ಸೂಕ್ಷ್ಮ ಗೊತ್ತಿತ್ತು. ಚಿಕ್ಕಲಿಂಗಪ್ಪನವರಿಗೆ ತನ್ನ ಮಾನದಮೇಲೆ ಒಂದು ಕಣ್ಣಿದೆ ಎಂದು. ಆದರೆ ಆ ಕಣ್ಣನ್ನು ಕುರುಡಾಗಿ ಮಾಡಬಹು ದೆಂಬ ಭಂಡಧೈರ್ಯ ಅವಳದು. ಆದುದರಿಂದಲೇ ಅವಳು ಅವರ ಇಷ್ಟು ದಾಕ್ಷಿಣ್ಯಕ್ಕೂ ಕಟ್ಟುಬಿದ್ದಿದ್ದುದು. ಅದರಲ್ಲಿಯೂ ಅವಳಿಗೆ ಆಗಾಗ್ಗೆ ಅನು ಮಾನ ಬರದೇ ಇರುತ್ತಿರಲಿಲ್ಲ. ಗಂಡಿನ ಮನೆಯವರಿಗೂ ಅವರು ಅಷ್ಟು ಬೆಂಬಲವಾಗಿರಬೇಕಾದ ಪ್ರಕೃತ ಅವಳಿಗೆ ಕಾಣುತ್ತಿರಲಿಲ್ಲ. ಕ್ರಮೇಣ ತಿಳಿಯುವುದೆಂದು ಸುಮ್ಮನಾದಳು.

ಪಟೇಲರ ದಯದಿಂದ ಮದುವೆಗೆ ಆಗಬೇಕಾಗಿದ್ದ ಅರ್ಥಿಕ ವ್ಯವಸ್ಥೆ ಸರಿಯಾಗಿತ್ತು. ಇಂತಹ ಸಂಮಾರಂಭಗಳಲ್ಲಿ ದುಡ್ಡಿನದೆಷ್ಟು ಮುಖ್ಯವೋ ಜನರ ಬೆಂಬಲವೂ ಅಷ್ಟೇ ಮುಖ್ಯ. ಅವರಿಬ್ಬರೂ ಗಂಡಹೆಂಡಿರಾದರೆಂದು ಪ್ರತ್ಯಕ್ಷ ನೋಡಿ ತಿಳಿಯಬೇಕಾದ ಬಂಧುಗಳೆಂದು ಸಾವಿರಾರೋ, ನೂರಾರೋ ಬೇಡ ಕೊನೆಯಪಕ್ಷ ಹತ್ತಾರು ಜನವಾದರೂ ಸೇರಬೇಕು. ಇಲ್ಲದಿದ್ದರೆ ಇಂತಿಂಥವರೆದುರು ನಾವಿಬ್ಬರೂ ಗಂಡಹೆಂಡಿರಾಗಿದ್ದೇವೆ. ಅವರೆ ದುರಿಗೆ ಗೌರವವಾಗಿ ಬಾಳಬೇಕೆಂದರೆ ನಾವಿಬ್ಬರೂ ಒಮ್ಮತವಾಗಿ ಒಬ್ಬರಿ ಗಾಗಿ ಒಬ್ಬರು ಜೀವಿಸಬೇಕು. ಎಂಬ ಭಾವನೆ ಆ ದಂಪತಿಗಳಿಗೆ ಬರುವು ದಿಲ್ಲ. ಹಾಗೆ ಪುಟ್ಟತಾಯಿ ಮಹದೇವಪ್ಪನವರ ಮದುವೆಗೆ ಸಾಕ್ಷಿಗಳಾಗಿ ಹತ್ತಾರು ಜನ ಇಷ್ಟ ಬಂಧುಗಳನ್ನು ಸೇರಿಸುವ ಹೊಣೆಯೊಂದು ತಾಯಕ್ಕನ ಮೇಲೆಯೇ ಇತ್ತು.

ಕಿರಿಕಾಟಿಯಲ್ಲಿ ಊರಿನವರಿಗೆಲ್ಲಾ ಹೇಳಿಬಿಟ್ಟದ್ದರೆ ನೂರಾರು ಜನರೇ ಆಗುತ್ತಿದ್ದರು. ಆದರೆ ತಾಯಕ್ಕನ ಸ್ಥಿತಿ ಅಷ್ಟಿರಲಿಲ್ಲ. ಅಥವಾ ಮಗಳ ಮದುವೆಗೆ ಅಷ್ಟು ದುಬಾರಿ ಮಾಡಿಕೊಳ್ಳುವ ಇಷ್ಟವೂ ಅವಳಿಗಿರಲಿಲ್ಲ. ಕಿರೀಕಾಟಿಯಲ್ಲಿ ಊರೊಟ್ಟಿನ ತೀರ್ಮಾನ ಒಂದಿತ್ತು. ಊರಿನವರ್ಯಾ

ರಾದರೂ ಮದುವೆ ಮಾಡಬೇಕಾಗಿ ಬಂದು ಊರಿಗೆಲ್ಲ ಹೇಳುವ ಚೈತನ್ಯ ವಿಲ್ಲದೇ ಹೋಗಿದ್ದರೆ ಅಂಥವರು ಊರೊಟ್ಟಿನ ಹಣಕ್ಕೆ ಇಪ್ಪತ್ತು ರೂಪಾಯಿ ಗಳನ್ನು ಕೊಟ್ಟು ಅವರಿಷ್ಟಬಂದವರಷ್ಟೇ ಜನರನ್ನು ಕರೆದುಕೊಳ್ಳಬಹುದು ಎಂಬುದೇ ಆ ಕಾನೂನು. ಅದರಂತೆ ತಾಯಕ್ಕ ಊರೊಟ್ಟಿಗೆ ಹಣಕೊಟ್ಟು ಐದೇ ಜನದ ಮನೆಗೆ ಹೇಳಿಸುವುದೆಂದು ಕೊಂಡಿದ್ದಳು. ತನ್ನ ಯಜಮಾನ ಸಿದ್ದಪ್ಪನ ತಂಗಿಯರು ಇಬ್ಬರಿದ್ದರು, ಒಬ್ಬಳು ತಳಸಕ್ಕೊ, ಒಬ್ಬಳು ಮಾರೇ ಗೌಡನಹಳ್ಳಿಗೂ ಮದುವೆಯಾಗಿದ್ದಳು. ಅವರಿಗೆ ತಾಯಕ್ಕ ಹೇಳಿಕಳು ಹಿಸಿದ್ದಳು. ಅದರಲ್ಲಿ ತಳಸದವಳು ಬರುತ್ತೇನೆಂದು ಮಾತು ಕೊಟ್ಟುಕಳು ಹಿಸಿದ್ದಳು. ಮಾರೇಗೌಡನ ಹಳ್ಳಿಯವಳು ಸಾಧ್ಯವಾದಷ್ಟುಪ್ರಯತ್ನಪಡುವೆ ನೆಂದು ಹೇಳಿಕಳುಹಿಸಿದ್ದಳು. ತೆಂಕಳ್ಳಿಯ ಪಂಡಿತಪ್ಪನ ಮನೆಯಲ್ಲದೆ ಅಲ್ಲಿ ತಾಯಕ್ಕನ ಸೋದರತ್ತೆಯ ಮೊಮ್ಮಕ್ಕಳು ಇಬ್ಬರಿದ್ದರು ಅವರು ಗಳಿಗೂ ಹೇಳಿಸಿದ್ದಳು. ಹೀಗೆ ತಾಯಕ್ಕ ಹೆಚ್ಚಿಗೆ ಯೋಚನೆಗೆ ಕುಳಿತು ಕೊಳ್ಳದೇ ಒಂದು ಹತ್ತಾರು ಜನರಾಗುವಷ್ಟು ಆಹ್ವಾನಗಳನ್ನು ಕಳುಹಿಸಿ ದ್ದಳು.

ಜೇಷ್ಠ ಮಾಸದವರೆಗೆ ಮಲ್ಲೇಶನಿಗೂ ಪರೀಕ್ಷೆಕಳೆದು ಬೇಸಿಗೆ ರಜವೂ ಕಳೆದುಹೋಗುವ ಹೊತ್ತಾಗಿದ್ದುದರಿಂದ ಊರಿನಲ್ಲಿಯೇ ಇದ್ದನು. ಚಪ್ಪರ ನಾಳಿದ್ದು ಎನ್ನುವಾಗಲೇ ಮಾತು ಕೊಟ್ಟಿದ್ದಂತೆಯೇ ತಳಸದ ಗೌರಮ್ಮ ಕಿರೀಕಾಟಿಗೆ ಬಂದಿಳಿದಳು. ಚಪ್ಪರದ ಬೆಳಿಗ್ಗೆ ವಾದ್ಯವಾರಂಭವಾದ ಸ್ವಲ್ಪ ಹೊತ್ತಿನಲ್ಲಿಯೇ ತೆಂಕಳ್ಳಿಯ ಪಂಡಿತಪ್ಪನ ಸಂಸಾರ ಮತ್ತು ತಾಯಕ್ಕನ ದೂರದ ನೆಂಟರುಗಳೂ ಬಂದರು. 'ಕಂಮೂರ್ತ' (ಸ್ತಂಭಮುಹೂರ್ತ) ಮನೆದೇವರ ಪೂಜೆ, ಚಪ್ಪರದ ಊಟ ಎಲ್ಲ ಮುಗಿದು ಹೊತ್ತುಬೀಳುವ ಹೊತ್ತಿಗೆ ಮಾರೇಗೌಡನ ಹಳ್ಳಿಯ ಸಣ್ಣಮ್ಮನೂ ಗಂಡನ ಸಮೇತ ಬಂದಿ ಳಿದಳು. ಅವಳಿಗೆ ಪಾಪ ಅಣ್ಣ ಹೋದಾಗಲೂ ಬರಲಾಗಿರಲಿಲ್ಲವಂತೆ. ಅವಳು ಗಾಡಿಯಿಳಿಯುತ್ತಿದ್ದಂತೆಯೇ ರೋದಿಸಲು ಪ್ರಾರಂಭಿಸಿಬಿಟ್ಟಳು. ಒಳ್ಳೇ ಕಾರ್ಯದ ಮನೆಯಲ್ಲಿ ಕಣ್ಣೀರು ಹಾಕಬಾರದೆಂದು ಹೇಳಬೇಕೆಂದು ತಾಯಕ್ಕ ಅವಳ ಹತ್ತಿರಕ್ಕೆ ಧೈರ್ಯದಿಂದ ಬಂದವಳು ಅವಳ ಕಣ್ಣುಗಳಲ್ಲಿನ ಜಲಪ್ರಳಯವನ್ನು ಕಂಡು ತಾನೂ ಬಲವಾಗಿಯೇ ಪ್ರಾರಂಭಿಸಿಬಿಟ್ಟಳು.

ಧಾರೆಯ ದಿನ ಎಲ್ಲರೂ ಬಂದ ಹಾಗಾಗಿತ್ತು. ತಾಯಕ್ಕನ ಮನಸ್ಸಿನಲ್ಲಿ ಇನ್ನೂ ಏನೋ ಒಂದು ಕೊರತೆ, ಕಣ್ಣುಗಳಲ್ಲೇನೋ ನಿರೀಕ್ಷಣೆ ತುಂಬಿತ್ತು. ಧಾರೆಯ ಮುಹೂರ್ತ ಮಧ್ಯಾಹ್ನ ಹನ್ನೆರಡರಿಂದ ಒಂದೂ ಕಾಲು ಗಂಟೆಯವರೆಗೆಂದಿತ್ತು. ಹನ್ನೊಂದು ಗಂಟೆಯ ಸುಮಾರಿನವರೆಗೂ ತಾಯಕ್ಕನ ಕಣ್ಣುಗಳು ಬೀದಿಯ ಕಡೆಗೇ ಇತ್ತು. ಅನಂತರ ಬಲವಂತದಿಂದ ತನ್ನ ಗಮನವನ್ನು ಅಲ್ಲಿಂದ ಕಿತ್ತು ಮುಂದಿನ ಕಾರ್ಯಗಳ ಕಡೆಗೆ ಬಿಟ್ಟಳು. ಅವಳ ನಿರೀಕ್ಷೆ ವ್ಯರ್ಥವಾಯಿತು. ಬಸವಣ್ಣ, ಚನ್ನೂರಮ್ಮ ಬರಲಿಲ್ಲ! ಅವರ ವಿಷಯದಲ್ಲಿ ತಾಯಕ್ಕನಿಗೆ ಅಸಾಧ್ಯ ಕೋಪ ಬಂದಿದ್ದರೂ ಏಕೋ ಕಣ್ಣಾಲಿಗಳು ತೇವವಾಗುತ್ತಿದ್ದವು. ಧಾರೆಗೆ ಹೋಗಲು ಶೃಂಗಾರವಾಗಿ ನಿಂತಿದ್ದ ಪುಟ್ಟತಾಯಿ ಅದನ್ನು ಕಂಡು ತನ್ನ ತಾಯಿ ತನಗಾಗಿ ಹಾಕುತ್ತಿರುವ ಕಣ್ಣೀರದು ಎಂದುಕೊಂಡು ತಾನೂ ಕಣ್ಣೀರಿಟ್ಟುಕೊಂಡಳು. ಮಗಳು ಮನೆ ಬಿಟ್ಟು ಹೋಗುವ ದುಃಖವೂ ತಾಯಕ್ಕನಿಗೆ ಮಗಳ ಕಣ್ಣೀರಿನ ಸ್ಫೂರ್ತಿಯಿಂದ ಬರಬೇಕಾಗಿತ್ತು, ಅದೂ ಬಂದಿತು. ಎಲ್ಲವೂ ಸೇರಿಕೊಂಡು ತಾಯಕ್ಕನನ್ನು ಒಂದು ಮೂಲೆ ಹಿಡಿಸಿ ಅರ್ಧಗಂಟೆಗಳ ಕಾಲ ಗೋಳಾಡಿಸಿದವು.

ತುಂಬಾ ಜಾಣನೆಂದೆನಿಸಿಕೊಂಡಿದ್ದ ಮಲ್ಲೇಶನಿಗೂ ಈ ಕಣ್ಣೀರುಗಳ ಅರ್ಥ ತಿಳಿಯದೇ ಹೋಯಿತು. ಹಾಗೂ ಮಾರೇಗೌಡನ ಹಳ್ಳಿಯ ಅತ್ತೆ ತಮ್ಮವ್ವ, ತನ್ನಕ್ಕ ಈ ಮೂವರೂ ಏಕೆ ಅಳುತ್ತಾರೆಂದು ತಳಸದ ಗೌರತ್ತೆಯನ್ನು ಕೇಳಿಯೂಕೇಳಿ ನೋಡಿದನು. ಆಕೆಯ ಮೂಗೂ ಕೆಂಪಗಿದ್ದುದು ಕಂಡುಬಂದು ಮಲ್ಲೇಶ ನೇರವಾಗಿ ಜಗುಲಿಗೆ ಬಂದು ವಾದ್ಯದವರ ಕಡೆಯ ಜಗಲಿಯಲ್ಲಿದ್ದ ತುಂಡುಗೋಡೆಯ ಮೇಲೆ ಕುಳಿತುಬಿಟ್ಟನು. ಮದುವೆ ಮನೆಗೆ ಬಂದಿದ್ದ ಹೊಸಬಟ್ಟೆಯ ಮಕ್ಕಳೆಲ್ಲರೂ ಅಲ್ಲಿ ಸೇರಿ ಗೊಂದಲವೇರ್ಪಡಿಸಿದ್ದರು. ಸ್ವಲ್ಪಹೊತ್ತು ಶೂನ್ಯದೃಷ್ಟಿಯಿಟ್ಟು ಕುಳಿತಿದ್ದ ಮಲ್ಲೇಶನ ಗಮನ ಕ್ರಮೇಣ ಆ ಹುಡುಗರ ಗೊಂದಲದಕಡೆಗೆ ತಿರುಗಿತು. ಮೂರು ಜನ ಗಂಡುಹುಡುಗರು ವಾದ್ಯದವರಂತೆ ನಟಿಸುತ್ತಿದ್ದರು. ಇಬ್ಬರು ತೆಂಗಿನ ಗರಿಯ ಪೀಪಿಯನ್ನು ಯಾರ ಕೈಯಲ್ಲೋ ಮಾಡಿಸಿಕೊಂಡು ಊದುತಿ

ದ್ದರು. ಮತ್ತೊಬ್ಬನು ತನ್ನ ಹೊಟ್ಟೆಯನ್ನೇ ಬಡಿದುಕೊಳ್ಳುತ್ತಾ ಬಾಯಲ್ಲಿ ಡೋಲಿನ ಶಬ್ದಮಾಡಲು ಪ್ರಯತ್ನಮಾಡುತ್ತಿದ್ದನು. ಇವರ ಆಟವನ್ನು ನೋಡುತ್ತಾ ಜಗಲಿಯಮೇಲಿದ್ದ ವಾದ್ಯದವರಗುಂಪಿನ ತಾಳದ ಹುಡುಗನು ತಾಳ ತಪ್ಪಿಸಿ ತಲೆಯಮೇಲೆ ಏಟುಹಾಕಿಸಿಕೊಳ್ಳುತ್ತಿದ್ದನು.

ಒಳಗಿಂದ ಯಾರೋ ಬಂದು ವಾದ್ಯದವರನ್ನು ಏಳಿಸಿಕೊಂಡು ಮಾರಿ ಗುಡಿಯಕಡೆಗೆ ಹೊರಡಿಸಿಕೊಂಡು ಹೋದರು. ಅವರ ಹಿಂದೆ ಮಾರೇ ಗೌಡನ ಹಳ್ಳಿಯ ಗೌರಮ್ಮನ ಗಂಡ 'ವಿಭೂತಿ ವೀಳ್ಯದ' ತಟ್ಟೆಯನ್ನು ಹಿಡಿದುಕೊಂಡು ಹೊರಟರು. ಅವರ ಜೊತೆಯಲ್ಲಿ ನಾಲ್ಕಾರು ಜನರೂ ಹೋದರು. ಅವರ ಪೈಕಿ ಒಬ್ಬರು ವಾದ್ಯದವರ ಅಭಿನಯವನ್ನು ಮಾಡು ತ್ತಿದ್ದವರಲ್ಲಿ ಒಬ್ಬನನ್ನು 'ಬಾರ್ಲಾ ಮೊಗ ಗಂಡು ಕರ್ಕಂಡು ಬರವು ಬಾ' ಎಂದರು. ಈ ಹುಡುಗ ಹೋಗಲಿಲ್ಲ. ಅದಕ್ಕೆ ಬದಲಾಗಿ ಹುಡುಗರು ತಾವೂ ಗಂಡನ್ನು ಕರೆದುಕೊಂಡು ಬರುವೆವೆಂದುಕೊಂಡು ದೊಡ್ಡವರು ಹೋದ ವ್ಯತಿರಿಕ್ತದಿಕ್ಕಿನಲ್ಲಿ ಹೊರಟರು. ಆದರೆ ನಾಲ್ಕಾರು ಹೆಜ್ಜೆಗಳಾದ ಬಳಿಕ ಗಂಡು ಯಾರೆಂಬುದೇ ಆ ಕಿರಿಯವಾದ್ಯದವರಿಗೆ ತಿಳಿಯದೆ ಅಲ್ಲಿಯೆ ನಿಂತರು. ಅಲ್ಲಿಂದಲೇ ಸುತ್ತಲೂ ಕಣ್ಣೋಡಿಸಿದರು. ತುಂಡುಗೋಡೆಯ ಮೇಲೆ ಕುಳಿತಿದ್ದ, ಲಕ್ಷಣವಾದ ಬಟ್ಟೆಗಳನ್ನು ಹಾಕಿಕೊಂಡು, ಕ್ರಾಪು ಬಿಟ್ಟುಕೊಂಡಿದ್ದ ಮಲ್ಲೇಶನನ್ನೇ ಗಂಡೆಂದು ಒಬ್ಬನು ಬೆರಳು ತೋರಿಸಿ ಹೇಳಿದನು. ಹುಡುಗರೆಲ್ಲರೂ ಒಂದೇ ಮನಸ್ಸಿನಿಂದ ಒಪ್ಪಿದರು.

ಹೆಣ್ಣು ? ತಾನೇ ಗಂಡೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳದೇ ಇದ್ದರೂ ಅದೇನೋ ಮಲ್ಲೇಶನ ಕಣ್ಣುಗಳೂ ಆ ಹುಡುಗರ ಜೊತೆಯ ಲ್ಲಿಯೇ ಸುತ್ತಲೂ ಹುಡುಕಿತು. ಮದುವೆಮನೆಯಲ್ಲಿ ಹೆಣ್ಣುಗಳಿಗೆ ಕಡಿ ಮೆಯೇ ? ಗುಲಾಬಿ ಬಣ್ಣದ ಲಂಗ, ನೆಶ್ಯದ ಬಣ್ಣದ ಫ್ರಾಕು, ದೊಡ್ಡವರ ಕತ್ತಿನ ಅಡ್ಡಿಕೆ, 'ನಾಗರ'ಗಳನ್ನು ಹಾಕಿಕೊಂಡಿದ್ದ ಮೂರೇವರ್ಷದ, ಬಿಳಿಯ ಹುಡುಗಿಯೊಂದನ್ನು ಹುಡುಗರು ಹುಡುಕಿಯೇ ಬಿಟ್ಟರು. ಅದನ್ನು ಹೊತ್ತುಕೊಂಡೇ ಬಂದು ಮಲ್ಲೇಶನ ಪಕ್ಕದಲ್ಲಿ ಕುಳ್ಳಿರಿ ಸಿದರು. ಡೋಲಿನವನು ಹೊಟ್ಟೆ ಬಡಿದುಕೊಳ್ಳಲಾರಂಭಿಸಿದನು. ಎರಡು

ಪೀಪಿಗಳೂ ಕರ್ಕಶವಾಗಿ ಅರಚಿದವು. ಆ ಹುಡುಗಿಯನ್ನು ಹುಡುಕುತ್ತಾ ಬಂದ ಮುದಕಮ್ಮ ಇವರ ಆಟವನ್ನು ಕಂಡು ನಕ್ಕರು. ಮಲ್ಲೇಶನಿಗೆ ತೀರ ನಾಚಿಕೆಯಾಯಿತು. ಅವನು ಅಲ್ಲಿಂದ ಚಟ್ಟನೆ ಎದ್ದನು.

ಗಂಡು ಬಂದಿತು, ಮನೆಯ ಬಾಗಿಲಲ್ಲಿ ಅದಕ್ಕೆ ಆರತಿಯಾಯಿತು. ಸುತ್ತಲಿದ್ದವರ ಹಿಡಿಗಳಿಗೆ ಭತ್ತವನ್ನು ಕೊಟ್ಟರು. ಸ್ವಾಮಿಗಳು ಮಂತ್ರ ಹೇಳಿ ತಮ್ಮ ಕೈಯಲ್ಲಿದ್ದ ಭತ್ತವನ್ನು ಗಂಡಿನಮೇಲೆ ಎರಚಿದಕೂಡಲೇ ಎಲ್ಲರೂ ಅದರಂತೆಯೇ ಮಾಡಿದರು. ಗಂಡು ಮನೆಯೊಳಕ್ಕೆ ನುಗ್ಗಿತು. ಅದರ ಹಿಂದೆ ದೊಡ್ಡವರು, ಚಿಕ್ಕವರು, ಚಿಳ್ಳೆಪಳ್ಳೆಗಳೆಲ್ಲ ಮನೆಯೊಳಕ್ಕೆ ನುಗ್ಗಿದವು. ಸ್ವಲ್ಪ ಹೊತ್ತಿನಲ್ಲೇ ಗಂಡಿನೆದುರಿನ ತೆರೆಯ ಹಿಂದಕ್ಕೆ ಹೆಣ್ಣು ಬಂದು ನಿಂತಿತು. ಗಂಡುಹೆಣ್ಣುಗಳು ಒಂದರ ತಲೆಯಮೇಲೆ ಇನ್ನೊಂದು ಏನೇನನ್ನೋ ಸುರಿದಾಡಿದವು. ತೆರೆ ಸರಿಯಿತು. ಮುಹೂರ್ತಕ್ಕೆ ಸರಿಯಾಗಿ ಧಾರೆ ಪ್ರಾರಂಭವಾಯಿತು.

ಹಳ್ಳಿಯಕಡೆ ಧಾರೆಯೆಂದರೆ ಬಹಳ ದೊಡ್ಡಕಾರ್ಯಕ್ರಮ. ಅಲ್ಲಿ ಹೆಣ್ಣಿನಕಡೆಯ ಹಿರಿಯರಾದ ಒಂದು ಜೊತೆ ದಂಪತಿಗಳು, ಗಂಡಿನಕಡೆಯ ಹಿರಿಯ ದಂಪತಿಗಳ ಎದುರಿಗೆ ಹೆಣ್ಣನ್ನು ಗಂಡಿಗೆ ಧಾರೆಯೆರೆದು ಕೊಟ್ಟಾಕ್ಷಣಕ್ಕೆ ಧಾರೆ ಮುಗಿದುಹೋಗುವುದಿಲ್ಲ. ಫಲತಾಂಬೂಲಸಹಿತವಾದ ಗಂಡುಹೆಣ್ಣುಗಳೆರಡರ ಕೈಗಳಿಗೂ ಆಧಾರವಾಗಿ ಇಬ್ಬರು ತಮ್ಮ ಕೈಗಳನ್ನು ಕೊಟ್ಟುಕೊಂಡಿರುತ್ತಾರೆ. ಗಂಡಿನ ಕಡೆಯವರು ಹೆಣ್ಣಿನ ಕಡೆಯವರು ಎಲ್ಲರೂ ಸ್ವಾಮಿಗಳು ಕೊಡುವ ಬಿಲ್ವಪತ್ರೆ ಅಕ್ಷತೆಯೊಡನೆ ದಕ್ಷಿಣೆಯಿಟ್ಟುಕೊಂಡು ಹೆಣ್ಣುಗಂಡುಗಳ ಕೈಗಳಮೇಲೆ ಧಾರೆಯಾಗಿ ಬೀಳುವ ಮಂತ್ರ ಜಲದೊಡನೆ ಅವನ್ನು ಬಿಟ್ಟು ಧಾರೆಯೆರೆಯುತ್ತಾರೆ. ಮೊದಲುಮೊದಲು ದಂಪತಿಗಳು ಇಬ್ಬಿಬ್ಬರಾಗಿ ಬಂದು ಹಾಗೆ ಎರೆದು ಹೋಗುತ್ತಾರೆ. ಅನಂತರ ಒಂಟೊಂಟಿಯಾಗಿ ಎಲ್ಲ ಗಂಡಸು ಹೆಂಗಸರೂ ಬಂದು ಎರೆದುಹೋಗುತ್ತಾರೆ ಮಕ್ಕಳೂ ಮರಿಗಳೂ ಆ ತಮಾಷೆಯನ್ನು ಆಚರಿಸದೇ ಬಿಡುವುದಿಲ್ಲ.

ದಂಪತಿಗಳು ಜೊತೆಜೊತೆಯಾಗಿ ಬಂದು ಧಾರೆಯೆರೆದು ಹೋದ ಮೇಲೆ ಸ್ವಾಮಿಗಳು ಅಲ್ಲಿಯೇ ನಿಂತಿದ್ದ ಮಲ್ಲೇಶನನ್ನು ಕರೆದರು. ಅವನು

ಮುಂದೆ ಬಂದು ಬಿಲ್ವಪತ್ರೆ ಮಂತ್ರಾಕ್ಷತೆಯನ್ನು ತೆಗೆದುಕೊಂಡನು. ತಾಯಕ್ಕ ಗೌರಮ್ಮನ ಕೈಲಿ ಒಂದಾಣೆ ಕೊಟ್ಟು ಕಳಿಸಿ ಮಗನಿಗೆ ಕೊಡಿಸಿದಳು. ಅವನು ಅದನ್ನು ಗಂಡು-ಹೆಣ್ಣುಗಳ ಕೈಮೇಲಿಡುತ್ತಿದ್ದಂತೆಯೇ ಅವನ ಕೈಗಳ ಮೇಲೊಂದು ಪುಟ್ಟಕೈ ಬಂದಿತು. ಗುಲಾಬಿಲಂಗದ ಹುಡುಗಿಯನ್ನೆತ್ತಿಕೊಂಡಿದ್ದ ಮುದುಕಮ್ಮನೇ ಈ ಚೇಷ್ಟೆಗೆ ಬಂದಿದ್ದವರು. ಮಂತ್ರೋದಕವೂ ಒಟ್ಟು ಅಲ್ಲಿದ್ದ ಎಂಟು ಕೈಗಳ ಮೇಲೂ ಹರಿಯಿತು. ಹೆಂಗಸರ ಗುಂಪು 'ಗೊಳ್ಳೆಂದು' ನಕ್ಕಿತು. ಮಲ್ಲೇಶನ ಮುಖ ಕೆಂಪಾಗಿ ಹೋಯಿತು.

ಮಲ್ಲೇಶ, ಗುಲಾಬಿಲಂಗದ ಹುಡುಗಿ, ಗಂಡಹೆಂಡಿರಾಗದಿದ್ದರೂ ಆಗಬೇಕಾದ ಪುಟ್ಟತಾಯಿ-ಮಹದೇವಪ್ಪ ಗಂಡಹೆಂಡಿರಾದರು. ನಿನ್ನೆ ಮೊನ್ನೆ ಹುಡುಗಿಯಾಗಿದ್ದ ಪುಟ್ಟತಾಯಿ ಹೆಂಡತಿಯಾದಳು. ಅವಳಿಗೆಂದೇ ಮೂರು ಸೀರೆಗಳು ಬಂದಿದ್ದವು. ಕತ್ತಿಗೊಂದು ಕರೀಮಣಿಯ ತಾಲಿಯಸರ. ಕೈತುಂಬಾ ಗಾಜಿನಬಳೆ, ಕಾಲಿಗೆ ಚೈನು ಕಾಲುಂಗುರಗಳು, ಬಾಚಿ ಹೆಣೆದ ತಲೆ, ಮದುವೆಯಾದ ಸಂತೋಷದ ಮುಖ, ಹನ್ನೆರಡು ವರ್ಷ, ಕಾಂತಿಯುತವಾದ ಕಣ್ಣುಗಳು, ಇವುಗಳಿಂದ ಪುಟ್ಟತಾಯಿಯು ಅಲ್ಪಸ್ವಲ್ಪ ಸುಂದರಿಯಾಗಿಯೂ ಕಂಡಳು. ಮೊದಲೆಲ್ಲಾ ಪುಟ್ಟತಾಯಿಯ ರೂಪನ್ನು ಒಪ್ಪಿಕೊಳ್ಳದಿದ್ದ ಮಾದೇವು ಮದುವೆಯ ಸಮಯದಲ್ಲಿ ಒಪ್ಪಿಕೊಳ್ಳುವ ಸ್ಥಿತಿಗೆ ಬಂದಿದ್ದನು. ಮದುವೆಯಾಗಿ ಹೆಂಡತಿಯನ್ನು ಕರೆದುಕೊಂಡು ಊರಿಗೆ ಹೊರಡುವ ಸಮಯದಲ್ಲಿ ಗಂಡನಿಗೆ ಹೆಂಡತಿಯ ಕಣ್ಣುಗಳ ಬೆಳಕಿನ ಪರಿಚಯವಾಗಿ ಇನ್ನಷ್ಟು ಮೆಚ್ಚಿಗೆಯುಂಟಾಗಿತ್ತು.

ಹೊರಟು ನಿಂತಿದ್ದ ಪುಟ್ಟತಾಯಿಯನ್ನು ಕಂಡು ತಾಯಕ್ಕನಿಗೆ ವ್ಯಥೆಯಾಯಿತು. ಅವಳು ಗಂಡನನ್ನು ನೆನೆಸಿಕೊಂಡು ಧಾರಾಳವಾಗಿ ಅತ್ತಳು. ಇಷ್ಟು ಬೇಗ ಪುಟ್ಟತಾಯಿ ಕಣ್ಮರೆಯಾಗಿ ಹೋಗುವಳೆಂದು ತಾಯಕ್ಕ ಕನಸಿನಲ್ಲಿಯೂ ತಿಳಿದಿರಲಿಲ್ಲ. ತಾಯಿಯನ್ನು ಬಿಟ್ಟು ಹೊರಟು ಹೋಗಲು ಸಿದ್ಧವಾಗಿರುವ ಮಗಳನ್ನು ನೋಡಿ ತಾಯಕ್ಕನಿಗೆ ತನ್ನ ಗಂಡನ ಮಾತು ಜ್ಞಾಪಕಕ್ಕೆ ಬಂತು. 'ಯಾವತ್ತಿದ್ದರೂ ಗಂಡುಮಕ್ಕಳು ಅವ್ವೆ

ಅಪ್ಪಂದಿರ ಕಷ್ಟಕ್ಕಾಗೋರಲ್ಲ; ಹೆಣ್ಣು ಮಕ್ಕಳೇ ಆಗೋರು.' ತಾಯಕ್ಕನಿಗೆ ಅಂತಹ ದುಃಖದ ಸಮಯದಲ್ಲೂ ಮನಸ್ಸಿನ ಆಳದಲ್ಲಿ ಒಂದು ಚೂರು ನಗು ಬಂದು ಹೋಯಿತು. 'ಇವಳು ನನ್ನ ಕಷ್ಟಕ್ಕೆ ಎಷ್ಟು ಚಂದಾಗಾಯ್ತಾ ಅವ್ಳೆ ! ಕಣ್ಣಲ್ಲಿ ನೀರಿನ ಬದಲು ಗಂಡನ ಮನೆಗೆ ಓಗೋ ಹಿಗ್ಗು ಕುಣೀತಾ ಅದೆ' ಎಂದುಕೊಂಡಳು.

ದಿಟ. ಪುಟ್ಟತಾಯಿಗೇನೋ ದುಃಖವಾಗುತ್ತಿರಲಿಲ್ಲ. ಇನ್ನು ಮೂರು ದಿನಗಳು ಗಂಡನ ಮನೆಯಲ್ಲಿದ್ದು ನಾಲ್ಕನೇ ದಿನ ಹಿಂದಿರುಗಿ ಬರ ಬಹುದೆಂಬ ಧೈರ್ಯವಿದ್ದುದರಿಂದ ಅವಳಿಗೆ ಅಳು ಬರಲಿಲ್ಲ. ಬದಲಾಗಿ ಇನ್ನು ಗಂಡನ ಮನೆಯಲ್ಲಿ ತನ್ನ ಉತ್ಸವ ಹೇಗೆ ನಡೆಯುತ್ತದೆಯೋ ನೋಡೋಣ ವೆಂಬ ಕುತೂಹಲವೇ ಇತ್ತು. ಗಂಡು, ಹೆಣ್ಣು, ನೆಂಟರು ತುಂಬಿದ ಗಾಡಿ ಚಪ್ಪರದಿಂದ ಆಚೆಗೆ ಉರುಳಿಯೇ ಬಿಟ್ಟಿತು.

ತಾಯಕ್ಕ ಊರ ಬಾಗಿಲವರೆಗೂ ಹೋಗಿ ಗಾಡಿಯನ್ನು ಕಳಿಸಿ ಬಂದಳು. ಜೊತೆಯಲ್ಲಿ ಸಣ್ಣತ್ತೆ, ಮಲ್ಲೇಶ ಇಬ್ಬರೂ ಇದ್ದುದರಿಂದ ಪುಟ್ಟತಾಯಿಗೆ ತಾಯಕ್ಕನ ವ್ಯಥೆಗೆ ಕಾರಣವೇ ಕಂಡು ಬರಲಿಲ್ಲ.



೬

"ಬುದ್ಧೀ ಮೇಷ್ಟ್ರು" ದೇವರಾಜೇಅರಸಿನವರು ತುಂಬಾ ಒಳ್ಳೆಯವರು. ಹೃದಯ ತುಂಬಾ ಮೃದುವಾದುದು. ಅವರನ್ನು ಕಂಡರೆ ಹುಡುಗರಿಗೆ ತುಂಬಾ ಸಂತೋಷ. ಅವರ ಕೈಯಲ್ಲಿ ಏಟು ತಿಂದವರಿಗೂ ಅವರ ಮೇಲೆ ದ್ವೇಷ ಬರುತ್ತಿರಲಿಲ್ಲ. ಅವರು ನೋವಾಗದ ಮಾತುಗಳನ್ನು ಮಾತ್ರ ಉಪಯೋಗಿಸಿ ಬಯ್ಯುತ್ತಿದ್ದವರು. ಅವರು ತಮ್ಮನ್ನು ಹೀಗೇ ಕೂಗ ಬೇಕೆಂದು ಯಾರೊಡನೆಯೂ ಹೇಳಿಕೊಂಡಿರಲಿಲ್ಲ. ಆದರೂ ಅವರ ನಡೆ ನುಡಿಗೆ ಮರುಳಾದ ಎಲ್ಲರೂ ಅವರನ್ನು 'ಬುದ್ಧಿ' ಎನ್ನುತ್ತಿದ್ದರು. ಸ್ಕೂಲಿನ ಹೆಡ್‌ಮಾಸ್ಟರು ಕೂಡ 'ಬುದ್ಧಿ' ಎಂದೇ ಕರೆಯುತ್ತಿದ್ದರೆಂದ ಮೇಲೆ ಇನ್ನ್ಯಾರ ಉದಾಹರಣೆ ಬೇಕು? ಅಂತೂ ಆ 'ಬುದ್ಧಿ' ಎನ್ನುವ ಪದವನ್ನು ಎಲ್ಲರೂ ಪ್ರೀತಿಯಿಂದ ಬಳಸುತ್ತಿದ್ದುದೇ ಹೊರತು ಯಾವ ಭೀತಿಯಿಂದಲೂ ಅಲ್ಲ.

ಬುದ್ಧಿಯವರಿಗೆ ಮಕ್ಕಳಿರಲಿಲ್ಲ. ಅವರ ಸಂಸಾರವೆಂದರೆ ಗಂಡ, ಹೆಂಡತಿ, ಹೆಂಡತಿಯ ತಾಯಿ ಮೂವರೇ. ಸಂಬಳ ಒಟ್ಟು ಇಪ್ಪತ್ನಾಲ್ಕು ರೂಪಾಯಿ. ಮನೇ ಪಾಠಗಳಿಂದ ಬರುತ್ತಿದ್ದುದೊಂದು ಹತ್ತು ರೂಪಾಯಿ. ಮನೆ ಬಾಡಿಗೆ ಐದು ರೂಪಾಯಿ. ಬುದ್ಧಿಯವರು ಸಂತೋಷವಾಗಿದ್ದರು. ಆದರೆ ಅವರ ಹೆಂಡತಿ—ಕೆಂಪಮ್ಮಣ್ಣಿಯವರು—ಮಾತ್ರ ಸಂತೋಷದ ಮುಖದವರಲ್ಲ. ಬುದ್ಧಿಯವರು ಮಕ್ಕಳಿಲ್ಲದ ನೋವಿನಿಂದ ಇತರರ ಮಕ್ಕಳಲ್ಲಿ ಅಕ್ಕರೆ ತೋರಿಸುವವರಾದರೆ, ಕೆಂಪಮ್ಮಣ್ಣಿಯವರು ಅದೇ ನೋವಿನಿಂದಾಗಿ ಕಂಡಕಂಡ ಮಕ್ಕಳ ಮೇಲೆಲ್ಲ ಕೆಂಡಕಾರುವವರಾಗಿದ್ದರು. ಇಂತಹ ಅನೇಕ ಭಿನ್ನಾಭಿಪ್ರಾಯಗಳು ಒಂದೇ ಕಾರಣದಿಂದಾಗಿ ಗಂಡ ಹೆಂಡಿರಲ್ಲಿ ದ್ದರೂ ಬುದ್ಧಿಯವರ ತಾಳ್ಮೆಯ ಪ್ರಭಾವದಿಂದ ಆ ಸಂಸಾರ ಮುಚ್ಚಟೆ ಯಾಗಿತ್ತು.

ಮನೆಯಲ್ಲಿ ಯಾವುದಾದರೊಂದು ಹೊಸ ಏರ್ಪಾಡಾಗುವುದಿದ್ದರೆ ಅದು ಬುದ್ಧಿಯವರೊಬ್ಬರ ಮನಸ್ಸಿಗೆ ಬಂದರೆ ಸಾಕಾಗಿರಲಿಲ್ಲ. ಯಾವ

ವಿಷಯವನ್ನೂ ಅವರು ಕಾಲಾವಧಿಯನ್ನು ತೆಗೆದುಕೊಳ್ಳದೇ ನಿಂತಲ್ಲಿ ನಿರ್ಧರಿಸುವ ಹಾಗಿರಲಿಲ್ಲ. ಕೆಲವು ವಿಷಯಗಳನ್ನು ಇವರು ಒಪ್ಪಿಕೊಳ್ಳುವ ಮನಸ್ಸಿದ್ದರೂ ಆ ಮನಸ್ಸನ್ನು ಬಿಗಿಹಿಡಿದು ಅದನ್ನು ಅಂತಃಪುರದ ಸಮ್ಮತಿಗೆ ತೆಗೆದುಕೊಂಡು ಹೋಗ ಬೇಕಾಗಿತ್ತು. ಎಷ್ಟೋ ಬಾರಿ, ಅಂತಃ ಪುರದಲ್ಲಿ ಇದಕ್ಕೆ ಸಮ್ಮತಿ ಸಿಗಲಾರದೆಂದು ನಿರಾಕರಿಸಿ ಬಿಟ್ಟ ವಿಷಯಕ್ಕೆ ಸಮ್ಮತಿ ಇದ್ದು ಬುದ್ಧಿಯವರು ಪೇಚಾಟಕ್ಕೆ ಬೀಳುತ್ತಿದ್ದುದೂ ಉಂಟು.

ಮಲ್ಲೇಶನ ವಿಷಯಕ್ಕೂ ಹಾಗೆಯೇ ಆದುದು. ಹುಡುಗರನ್ನು ಕಂಡರೇ ಆಗದಿದ್ದ ಹೆಂಡತಿ ಮಲ್ಲೇಶನನ್ನು ಇರಿಸಿಕೊಳ್ಳುವುದಕ್ಕೆ ಒಪ್ಪಿ ಕೊಳ್ಳುವುದಿಲ್ಲವೆಂದು ತಿಳಿದು ಬುದ್ಧಿಯವರು ಖಡಾಖಂಡಿತವಾಗಿ ಆಗುವುದಿಲ್ಲವೆಂದು ಬಿಟ್ಟರು. ತಾಯಕ್ಕ ಅವರಿಗೆ ಅದರಬಗ್ಗೆ ಕಾಲಾವಧಿ ಕೊಡದೇಹೋಗಿದ್ದರೆ ಬುದ್ಧಿಯವರಿಗೆ ಕಷ್ಟ ಬರುತ್ತಿತ್ತು. ಒಳಗೆ ಹೋದಮೇಲೆ ಮಲ್ಲೇಶನನ್ನು ಇರಿಸಿಕೊಳ್ಳಬೇಕೆಂಬ ಅಭಿಪ್ರಾಯ ಇದ್ದುದನ್ನು ತಿಳಿದು ಅವರು ಬೆಕ್ಕಸಬೆರಗಾಗಿ ಹೋಗಿದ್ದರು. ಆದರೆ ತಾಯಕ್ಕ ಅವರ ಸಹಾಯಕ್ಕೋ ಎಂಬಂತೆ ಮತ್ತೊಮ್ಮೆ ಹುಡುಗನನ್ನು ಕರೆದುತಂದು ಸೇರಿಸಿಹೋಗಿದ್ದಳು.

ಅದಕ್ಕೆ ಕಾರಣ ಕೆಂಪಮ್ಮಣ್ಣಿಯವರ ಬಹಳಕಾಲದ ಒಂದು ಬಯಕೆ. ಸಾಮಾನ್ಯವಾಗಿ ಎಲ್ಲರಮನೆಯಲ್ಲೂ ಇರುವಂತೆ ತಾವೂ ಒಬ್ಬ ಆಳನ್ನಿಟ್ಟು ಕೊಳ್ಳುವವರೆಗೂ ಸಂಸಾರ ಶೋಭಾಯಮಾನವಿಲ್ಲವಲ್ಲ ಎಂದು ಅವರು ಒಳಗೇ ಕೊರಗುತ್ತಿದ್ದರು. ಆದರೆ ಸಂಬಳ ಕೊಡುವ, ಕೊನೆಯಪಕ್ಷ ಊಟ ಬಟ್ಟೆಗಳನ್ನಾದರೂ ಕೊಡುವ ಯೋಗ್ಯತೆಯಿಲ್ಲದೇ ಇಷ್ಟುದಿವಸ ಸುಮ್ಮನಿರಬೇಕಾಗಿತ್ತು. ಮಲ್ಲೇಶನಿಂದ ತಮ್ಮ ಆಸೆ ನೆರವೇರುವುದೇ ಅಲ್ಲದೆ ತಾಯಕ್ಕನ ಮಾತಿನಪ್ರಕಾರ, 'ದಿನಸಿ, ಬೆಣ್ಣೆ ಇತ್ಯಾದಿ' ಇವುಗಳಲಾಭವೂ ತೋರಿಬಂದಿರುವಾಗ ಕೆಂಪಮ್ಮಣ್ಣಿಯವರು ಬಿಡುವುದುಂಟೆ? ತಾಯಕ್ಕ ಸ್ವಲ್ಪದಿನ ಬಿಟ್ಟು ಪುನಃ ಬರದೇ ಹೋಗಿದ್ದರೆ ಅವರು ತಮ್ಮ ಯಜಮಾನ ರನ್ನು ಖಂಡಿತ ಕಿರೀಕಾಟಿಗೆ ಅಟ್ಟುತ್ತಿದ್ದರು.

ತಾಯಕ್ಕನೇನೋ ಪುನಃ ಮಗನನ್ನು ಕರೆದುಕೊಂಡು ಬಂದಳು. ಮಲ್ಲೇಶನನ್ನು ಇರಿಸಿಕೊಂಡದ್ದೂ ಆಯಿತು. ಆದರೆ ಕೆಂಪಮ್ಮಣ್ಣಿಯವರ ಅಭಿಮಾನಕ್ಕೆ ಅಂದೇ ಮತ್ತೊಂದು ರೀತಿಯಲ್ಲಿ ಒಂದು ಏಟುಬಿತ್ತು. 'ನಿನ್ನ ಹೆಸರೇನಾ ?' ಎಂದು ಕೇಳಿದ ಕೆಂಪಮ್ಮಣ್ಣಿಯವರಿಗೆ ತಾಯಕ್ಕ 'ತಾಯಕ್ಕ ಅಂತ ಕಣ್ರವ್ವಾ' ಎಂದು ಅವಿನಯವನ್ನು ತೋರಿಸಿದ್ದಳು. 'ನಿನ್ನಮಗನೂ ಬೇಡ ನೀನೂ ಬೇಡ ಆಚೆಗೆ ಹೋಗು' ಎನ್ನೋಣವೆನ್ನುವಷ್ಟು ಕೆಂಪಮ್ಮಣ್ಣಿಯವರಿಗೆ ಸಿಟ್ಟುಬಂದಿತ್ತು. ಗಂಡನನ್ನು 'ಬುದ್ಧಿ' ಯೆಂದು ಬಾಯಿ ತುಂಬಾ ಕರೆದು ಹೆಂಡತಿಯನ್ನು 'ಅವ್ವ' ಎಂದು ನಿಕೃಷ್ಟವಾಗಿ ಕರೆದರೆ ಸಿಟ್ಟುಬರುವುದಿಲ್ಲವೇ? ಬಂದಿತು. ಅದರೆ ತೋರಿಸುವ ಸಮಯ ಅದಲ್ಲ ವೆಂಬಷ್ಟು ಜಾಣತನವೂ ಕೆಂಪಮ್ಮಣ್ಣಿಯವರಲ್ಲೇ ಇದ್ದುದರಿಂದ ಅವರೇ ಸುಮ್ಮನಾದರು. ಅರಸಿನವರಿಗೆ ಅದೊಂದು ಆಶ್ಚರ್ಯವಾಯಿತು.

ತಾಯಿಯ ಬುದ್ಧಿಯೇ ಮಗನಿಗೂ ಇರುವುದೆಂದು ಕೆಂಪಮ್ಮಣ್ಣಿಯವರು ಭಾವಿಸಿರಲಿಲ್ಲ. ಆದರೆ ಮಲ್ಲೇಶನ ಮನಸ್ಸೂ ಅದೇಕೋ ಕೆಂಪಮ್ಮಣ್ಣಿಯವರನ್ನು ' ಬುದ್ಧಿ' ಎಂದು ಕೂಗಲು ಒಪ್ಪಿರಲಿಲ್ಲ. ಅವರು ಮೊದಲು ಮೊದಲು 'ಇದೇನೋ ಮಲ್ಲ....ಅವ್ವ, ಅಮ್ಮ ಅಂತೆಲ್ಲಾ ನನ್ನ ಕರೀತೀಯೇ ನಾನೇನು ನಿನ್ನ ಊರು ಹೆಂಗಸರು ಕೆಟ್ಟೋದ್ನೇ' ಮುಂತಾಗಿ ಅಂದು ನೋಡಿದರು. ಮಲ್ಲೇಶ ಅವುಗಳನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ಅಂತೂ ಅವನು ಅವರನ್ನು ಬುದ್ಧಿ ಎಂದು ಕರೆಯಲು ಸಿದ್ಧನಾಗಲೇಇಲ್ಲ. 'ಬುದ್ಧಿ' ಎನ್ನುವ ಒಂದುಮಾತಿಗೇ ಇಷ್ಟು ಕಷ್ಟವಾದಮೇಲೆ ಇನ್ನು ಅವನ ಬಾಯಿಂದ ' ಅಪ್ಪಣೆ, ದಯಮಾಡಿಸಬೇಕು, ಒಪ್ಪಿಸ್ಕೋಬೇಕು, ಪಾದ ಬೆಳೀಸ್ಬೇಕು.' ಮುಂತಾದ ಪದಗಳು ಬರುವುದು ನಿಜವೇ ? ಕೆಂಪಮ್ಮಣ್ಣಿಯವರಿಗೆ ಇದೇ ಒಂದು ಕೊರಗಾಗಿ ಹೋಯಿತು.

ಬೆಳಿಗ್ಗೆ ಹತ್ತೂವರೆ ಗಂಟೆಯುವರೆಗೆ ಮಲ್ಲೇಶ ಅವರು ಹೇಳಿದ ಕೆಲಸ ವನ್ನೆಲ್ಲಾ ಮಾಡುತ್ತಿದ್ದನು. ಸ್ಕೂಲಿಗೆ ಹೊತ್ತಾಗುತ್ತ ಬಂದಹಾಗೆಲ್ಲ ಅವನ ಕೈಕಾಲು ನಿಂತುಬರುತ್ತಾ, ಕಣ್ಣು ಊಟದ ಏರ್ಪಾಡಿನ ಕಡೆಗೇ ಇರುವುದು. ಅನ್ನ-ಸಾರು, ಅನ್ನ-ಮಜ್ಜಿಗೆ ತಟ್ಟೆಗೆ ಬೀಳುವುದೇ ತಡ

ಮುಗಿಸಿ ಪುಸ್ತಕಗಳನ್ನೆತ್ತಿಕೊಂಡು ಮನೆಬಿಟ್ಟು ಹೊರಟುಹೋಗುತ್ತಿದ್ದನು. ಸ್ಕೂಲು ಮುಗಿಸಿಕೊಂಡು ನಿಧಾನವಾಗಿ ಸಂಜೆ ಆರುಗಂಟೆಯ ಹೊತ್ತಿಗೆ ಮನೆ ಸೇರಿದರೆ ಏಳೂವರೆಯವರೆಗೂ ಸೌದೆ ಎತ್ತಿಹಾಕುವುದೋ, ಅಮ್ಮ ನವರ ಜೊತೆಗೆ ದೇವಸ್ಥಾನಕ್ಕೆ ಹೋಗಿಬರುವುದೋ, ಅವರ ಮನೆ ಕಂಚಿ ಹಸು ತಪ್ಪಿಸಿಕೊಂಡಿದ್ದರೆ ಅದನ್ನು ಹುಡುಕಿ ಹಿಡಿದುತರುವುದೋ ಏನಾದ ರೊಂದು ಕೆಲಸವಿರುತ್ತಿತ್ತು. ಅನಂತರ ಓದುವೆನೆಂದು ಕುಳಿತರೆ ಊಟದ ಮೇಲೆ ಜ್ಞಾನ. ಅದು ನಿಧಾನವಾಗುವಂತೆ ಕಂಡುಬಂದರೆ ನಿದ್ದೆಯ ಎಳೆತ. ಎಷ್ಟೋದಿನ ಅವನು ಈ ನಿದ್ದೆಯಮಧ್ಯೆ ಮಾಡಿದ ರಾತ್ರಿಯ ಊಟಗಳನ್ನು ಮರೆತೇಬಿಡುತ್ತಿದ್ದುದುಂಟು. ಆ ವಿಷಯವಾಗಿ ತನ್ನ ಅವ್ವನ ಜೊತೆಯಲ್ಲಿ ದೂರು ಹೇಳಿಕೊಂಡಿದ್ದೂ ಉಂಟು.

ಇಷ್ಟಾದರೂ ಅವನು ಕೆಂಪಮ್ಮಣ್ಣಿಯವರಿಗೆ ಅದೇನೋ ಒಂದು ದಿನವೂ ಎದುರುಬಿದ್ದವನಲ್ಲ. ಅದಕ್ಕೆ ಅವನ ಬುದ್ಧಿಮೇಷ್ಟ್ರು ನಡವಳಿಕೆಯೆ ಕಾರಣವೇನೋ ? ಮನೆಯಲ್ಲಿ ಅವರು ಮೌನವಾಗಿದ್ದಂತೆ ತಾನೂ ಇದ್ದು ಬಿಡುತ್ತಿದ್ದನು. ಅದರಿಂದ ಕೆಂಪಮ್ಮಣ್ಣಿಯವರಿಗೆ ಇನ್ನಷ್ಟು ಕೋಪ. ಒಂದು ಕೈಯಲ್ಲಿ ಚಪ್ಪಾಳೆ ತಟ್ಟುವವರಂತಾಗಿತ್ತು ಅವರಪಾಡು. ಅವರಿಗೆ ಎದುರುಜವಾಬು ಎದುರುಕೋಪಗಳಿದ್ದಿದ್ದರೆ ಒಂದುರೀತಿಯ ಉತ್ಸಾಹ ವಿರುತ್ತಿತ್ತು. ಇತ್ತ ಗಂಡನೂ ಹಾಗಿರಲಿಲ್ಲ, ಅತ್ತ 'ಮಲ್ಲ'ನೂ ಹಾಗಿಲ್ಲ ಹೀಗಾಗಿ ಅವರ ಬಾಯಿಯಬೆಂಕಿಗೆ ಗಾಳಿಯೇ ಇಲ್ಲದೇಹೋಗುತ್ತಿತ್ತು. ಅರಸಿನವರಿಗೆ ಮಲ್ಲೇಶನ ಈ ಗುಣ ತುಂಬಾ ಹಿಡಿಸಿತು. ಅವನಲ್ಲಿ ಅವ ರಿಗೆ ವಿಶ್ವಾಸ ಹೆಚ್ಚಿತು. ಅದರಿಂದ ಪ್ರಯೋಜನಮಾತ್ರ ಏನೂ ಆಗುವ ಹಾಗಿರಲಿಲ್ಲ. ಅವರಿಗೆ ಇನ್ನೊಬ್ಬರಲ್ಲಿನ ತಮ್ಮ ವಿಶ್ವಾಸವನ್ನು ಪ್ರಕಟಿಸು ವುದು ದೊಡ್ಡ ಪ್ರಯಾಸದ ಕೆಲಸವಾಗಿತ್ತು.

ಅರಸಿನವರ ಸ್ನೇಹಿತರು, ಬಂಧುಗಳು ಯಾರೂ ಸಾಮಾನ್ಯವಾಗಿ ಅವರ ಮನೆಯ ಬಳಿಗೆ ಬರುತ್ತಿರಲಿಲ್ಲ. ನೇರವಾಗಿ ಸ್ಕೂಲಿನಬಳಿಗೆ ಬರು ತ್ತಿದ್ದರು. ಬುದ್ಧಿಯವರು ಬಂದು ಅವರಿಗೆ ಮುಖ ತೋರಿಸಿ ಮಧ್ಯಾಹ್ನ ಒಂದೂಕಾಲು ಗಂಟೆಗೋ ಅಥವಾ ಐದುಗಂಟೆಗೋ ಪುನಃ ಬಂದುನೋಡಿ

ಎಂದು ಬೇಡಿಕೊಂಡು ತಮ್ಮ ಕ್ಲಾಸಿಗೆ ಹೊರಟುಹೋಗುತ್ತಿದ್ದರು. ಹಾಗೆ ಅವರು ಪುನಃ ಬಂದಾಗ ಅವರೊಡನೆ ತಾವೂ ಹೊಟೇಲಿಗೆ ಹೋಗಿ ತಿಂಡಿ ಕಾಫಿ ಮುಗಿಸಿ ಅವರನ್ನು ಕಳಿಸಿ ಕೃತಾರ್ಥರಾಗುತ್ತಿದ್ದರು. ಮನೆಗೆ ತನ್ನ ಗಂಡನ ಕಡೆಯವರಾಗಿ ಒಬ್ಬರೂ ಬರದಿರುವುದನ್ನು ಕಂಡು ಕೆಂಪಮ್ಮಣ್ಣಿ ಯವರಿಗೆ ಹೀಗಿರಬಹುದೆಂಬ ಅನುಮಾನವೇನೋ ಇತ್ತು. ಆದರೆ ಅದನ್ನು ಕಂಡುಹಿಡಿದು ಅವರಿಗೆ ಹೇಳಿಕೊಡುವವರಾರು? ಮಲ್ಲೇಶನೇ? ಅವನೇ ಸರಿಯಾದವನು. ಆದರೆ ಅವನನ್ನು ತನ್ನ ಕಡೆಗೆ ಸೇರಿಸಿಕೊಳ್ಳಬೇಕಾದರೆ ಅವನ ನಡವಳಿಕೆ ಅವಿನಯಗಳನ್ನು ಸಹಿಸಿಕೊಳ್ಳಬೇಕು. ಅವನಿಗೆ ಊಟದ ಜತೆಗೆ ತಿಂಡಿಯನ್ನೂ ಕೊಡುವ ಪದ್ಧತಿ ಮಾಡಬೇಕು. ಅದು ಸಾಧ್ಯವೇ? ತಿಂಡಿ ಊಟದಮಾತು ಹಾಗಿರಲಿ. ಆ ಅವಿನಯವನ್ನು ಸಹಿ ಸುವುದು ಮಾತ್ರ ಆಗದಮಾತಾಗಿತ್ತು. ಆದುದರಿಂದ ಮಲ್ಲೇಶನನ್ನು ಈ ವಿಷಯವಾಗಿ ಕೆಂಪಮ್ಮಣ್ಣಿಯವರು ಇನ್ನೂ ಮಾತನಾಡಿಸಿರಲಿಲ್ಲ.

ಅರಸಿನವರು ತಮ್ಮವರನ್ನು ಹೊಟೆಲಿಗೆ ಕರೆದುಕೊಂಡುಹೋಗುವ ರೆಂಬ ಅನುಮಾನವಿದ್ದಲ್ಲಿ ಅವರಿಗೆ ಅದಕ್ಕೆ ಬೇಕಾದ ದುಡ್ಡೆಲ್ಲಿರಬಹು ದೆಂಬುದರ ಬಗ್ಗೆ ತೀರ್ಮಾನವಿದ್ದಿರಬೇಕಲ್ಲವೆ? ಆದರೆ ಕೆಂಪಮ್ಮಣ್ಣಿಯವ ರಿಗೆ ಆ ಯೋಚನೆಯೇ ಇರಲಿಲ್ಲ. ಹೇಗೋ ಅವರಲ್ಲಿ ದುಡ್ಡಿರುತ್ತದೆ. ಅವರು ಅದನ್ನು ಹೀಗೆ ಪೋಲುಮಾಡುತ್ತಿದ್ದಾರೆ ಎಂಬುದಷ್ಟೇ ಅವರ ಆಪಾದನೆ. ಸರಿಯಾದ ಆಧಾರ ಸಿಗುವವರೆಗೂ ಗೊಣಗಬಹುದೇ ವಿನಃ ಗಟ್ಟಿಯಾಗಿ ಬಾಯಿಬಿಟ್ಟರೆ ಫಲವಿರಲಿಲ್ಲ. ಅವರ ಅನೇಕ ಮೂಗುಮುನಿಸು ಗಳಲ್ಲಿ ಒಂದಾದ ಇದೂ ಆಸ್ಫೋಟನೆಗೆ ಈಡಾಗುವ ಸಮಯವೊಂದು ಬಂದಿತು. ಅದರಮಧ್ಯೆ 'ಮಲ್ಲ' ಸಿಕ್ಕಿಕೊಂಡನು. ಬುದ್ಧಿಯವರನ್ನು ಆ ಕಷ್ಟದಿಂದ ಪಾರುಮಾಡಲು ಮಲ್ಲೇಶನೂ, ಮಲ್ಲೇಶನನ್ನು ಪಾರು ಮಾಡಲು ಬುದ್ಧಿಯವರೂ ತುಂಬಾ ಒದ್ದಾಡಿದರು.

ದೇವರಾಜೇಅರಸಿನವರ ಸ್ವಂತ ಅಣ್ಣ ಬಸಪ್ಪಾಜಿಯವರು ಬಹಳ 'ಅಪರೂಪ'ವಾಗಿ ಆ ಊರಿಗೆ ಬಂದಿದ್ದರು. ಬುದ್ಧಿಮೇಷ್ಟ್ರು ಮದುವೆಯ ಲಾಗಾಯ್ತು ಅವರು ಕೆಲಸಮಾಡಿದ ನಾನಾಊರುಗಳ ಪೈಕಿ, ನಾಡನಪುರ

ದಲ್ಲಿದ್ದಾಗ ಒಂದುಬಾರಿ ಗುಂಡ್ಲುಪೇಟೆಯಲ್ಲಿದ್ದಾಗ ಒಂದುಬಾರಿ ಬಂದಿದ್ದದ್ದು ಅಷ್ಟೆ. ನಾಡನಪುರದಲ್ಲಿದ್ದಾಗ ಬಸಪ್ಪಾಜಿಯವರು ನೇರವಾಗಿ ತಮ್ಮನ ಮನೆಗೆ ಬಂದು ಪಡಬಾರದ ಕಿರುಕುಳಪಟ್ಟು, ತಮ್ಮನ ಸ್ಥಿತಿ ನೋಡಿ ನಿಟ್ಟುಸಿರಿಟ್ಟು ಹೊರಟುಹೋಗಿದ್ದರು. ಅವರು ಆಗ ತಿಂದಿದ್ದು ಅನ್ನವಲ್ಲ; ಕುಳಿತದ್ದು ಮನೆಯಲ್ಲ ಅನ್ನಿಸಿಹೋಗಿತ್ತು. ಗುಂಡ್ಲುಪೇಟೆಯಲ್ಲಿದ್ದಾಗ ಅವರೇ ಬುದ್ಧಿ ಉಪಯೋಗಿಸಿ ಸ್ಕೂಲಿಗೆ ಬಂದು ತಮ್ಮನ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಟೇಲಲ್ಲಿ ತಮ್ಮನಿಗೂ ಉಪಾಹಾರಕೊಡಿಸಿ ತಾವೂ ಸಂತೋಷವಾಗಿ ತಿಂಡಿಹೊಡೆದು ಒಂದುಗಂಟೆಯವರೆಗೆ ಹಾಯಾಗಿ ಮಾತನಾಡಿಕೊಂಡು ಹೋಗಿದ್ದರು ಈಬಾರಿ ಇಲ್ಲಿಗೆ ಬಂದಿದ್ದರು. ಕಾಲ ಮತ್ತು ಕೆಲಸದ ಒಂದು ಲೆಕ್ಕವನ್ನು ಬೋರ್ಡಿನ ಮೇಲೆ ಮಾಡುತ್ತಿದ್ದ ಬುದ್ಧಿಯವರ ಕಣ್ಣಿಗೆ ಕಿಟಕಿಯಿಂದಲೇ ಬಸಪ್ಪಾಜಿಯವರು ಕಾಣಿಸಿಕೊಂಡರು. ಲೆಕ್ಕವನ್ನು ಅರ್ಧಕ್ಕೇ ಬಿಟ್ಟು ಹೊರಗೆ ಬಂದರು. ಅಣ್ಣನೊಡನೆ ಹಿಗ್ಗಿದಮುಖದಲ್ಲಿ ಮಾತನಾಡಿ ಆಗ ನಾಲ್ಕುಗಂಟೆಯೆಂದೂ ಇನ್ನೊಂದು ಗಂಟೆಯಾದಕೂಡಲೇ ಬೆಲ್ಲಾಗುವುದೆಂದೂ ತಿಳಿಸಿ ಕ್ಲಾಸಿಗೆ ಬಂದರು. ಬಸಪ್ಪಾಜಿಯವರು ಸ್ಕೂಲಿನ ಎದುರಿನಲ್ಲಿದ್ದ ವಿನಾಯಕನ ಗುಡಿಯ ಜಗುಲಿಯಮೇಲೆಯೇ ಕುಳಿತಿರುವುದಾಗಿ ತಿಳಿಸಿಹೋದರು.

ಪಾಠಮಾಡುತ್ತಿದ್ದಂತೆಯೇ ಬುದ್ಧಿಮೇಷ್ಟ್ರು ಜೇಬನ್ನೆಲ್ಲಾ ಹುಡುಕಾಡಿದರು. ಷರಟಿನ ಜೋಬಿನಲ್ಲಿದ್ದ ಒಂದುರೂಪಾಯಿ ಎಲ್ಲೋ ಸಿಕ್ಕಲಿಲ್ಲ. ಆ ರೂಪಾಯನ್ನು ಜ್ಞಾಪಿಸಿಕೊಳ್ಳುತ್ತಾ ಎಷ್ಟೋ ಹುಡುಗರ ತಪ್ಪು ಲೆಕ್ಕಕ್ಕೂ "ರೈಟುಮಾರ್ಕು" ಹಾಕಿ ಹತ್ತಕ್ಕೆ ಹತ್ತು ನಂಬರುಗಳನ್ನು ಕೊಟ್ಟುಬಿಟ್ಟರು. ಕೊನೆಗೆ ಜ್ಞಾಪಕಬಂತು. ಸ್ನಾನಮಾಡಲು ಷರಟನ್ನು ಬಿಚ್ಚಿದಾಗ ಅದರ ಜೇಬಿಂದ ಆ ರೂಪಾಯಿ ನೆಲದಮೇಲೆ ಬಿದ್ದದ್ದೂ ಅದನ್ನು ತಾವೇ ಎತ್ತಿ ಸೂರಿನಸಂದಿಯಲ್ಲಿ ಮೈಯುಜ್ಜುವ ಕಾಯಿಜುಂಗಿನ ಪಕ್ಕದಲ್ಲಿಟ್ಟದ್ದೂ ನೆನಪಿಗೆ ಬಂದಿತು. ಸ್ಕೂಲಿನ ಹಾಲಿನಲ್ಲಿದ್ದ ಗಡಿಯಾರವನ್ನು ನೋಡಿದರೆ ನಾಲ್ಕುಗಂಟೆ ಇಪ್ಪತ್ತುನಿಮಿಷವಾಗಿತ್ತು. ಮಲ್ಲೇಶ

ನನ್ನು ಕರೆಸಿದರು. ಅವನಿಗೆ ಗುರುತುಹೇಳಿ ಓಡಿಹೋಗಿ ಓಡಿಬರಬೇಕೆಂದು ಹೇಳಿದರು. ಮಲ್ಲೇಶ ಓಡಿದನು.

ಸ್ಕೂಲಿನ ಸಂಬಳ, ಮನೆಯಪಾಠದ ದುಡ್ಡು ಒಟ್ಟು ಮೂವತ್ನಾಲ್ಕು ರೂಪಾಯಿಗಳನ್ನು ಹೆಂಡತಿಯ ಕೈಯಲ್ಲಿ ಹಾಕಿಬಿಟ್ಟರೆ ಇನ್ನು ಪುನಃ ಬುದ್ದಿಮೇಷ್ಟ್ರ ಹತ್ತಿರಕ್ಕೆ ಅಷ್ಟುದೊಡ್ಡ ಮೊಬಲಗು ಬರುತ್ತಿದ್ದುದು ಮುಂದಿನ ತಿಂಗಳೇ. ಅಂತಹುದರಲ್ಲಿ ಅವರು ಹೋಟೆಲಿಗೆ ತಮ್ಮವರನ್ನು ಕರೆದುಕೊಂಡು ಹೋಗುತ್ತಿದ್ದುದು ಹೇಗೆ ಎಂಬುದೊಂದು ಸಮಸ್ಯೆಯೇ ನಿಜ. ಅಷ್ಟು ಒಳ್ಳೆಯ ನಡತೆಯ 'ಬುದ್ದಿಮೇಷ್ಟ್ರ'ಲ್ಲಿ ಕಳ್ಳಬುದ್ಧಿಯಿತ್ತು ಎಂಬುದನ್ನು ನಂಬುವವರಿಗೆ ಮಾತ್ರ ಅದು ಸಮಸ್ಯೆಯಾಗುತ್ತಿರಲಿಲ್ಲ. ಅಂಗಡೀಸಾಮಾನು, ಸ್ಕೂಲಿನ ಯಾವುದಾದರೂ ಸಮಾರಂಭಗಳಿಗೆ ಕೊಡಬೇಕಾಗಿದ್ದ ಚಂದಾ, ಮುಂತಾದುವುಗಳ ಲೆಕ್ಕದಲ್ಲಿ ಬುದ್ದಿಯವರು ಕಳ್ಳತನ ಮಾಡುತ್ತಿದ್ದುದು ನಿಜ. ಹಾಗೆ ಕದ್ದು ನಾಲ್ಕಾರು ರೂಪಾಯಿಗಳನ್ನು ತಮ್ಮ ಇಂತಹ ಸ್ವಂತ ಖರ್ಚುಗಳಿಗಿಟ್ಟುಕೊಳ್ಳುತ್ತಿದ್ದರು. ಆ ದಿನ ಆ ಲೆಕ್ಕದಲ್ಲಿ ಅವರ ಹತ್ತಿರಿದ್ದುದು ಒಂದೇ ರೂಪಾಯಿ.

ಆ ರೂಪಾಯಿಯೂ ಅದೃಷ್ಟವಶಾತ್ ಆದಿನ ಕೆಂಪಮ್ಮಣ್ಣಿಯವರ ಕಣ್ಣಿಗೆ ಬಿದ್ದುಬಿಟ್ಟಿತು. ಅವರು ಮೈಯುಜ್ಜುವ ಜುಂಗನ್ನು ತೆಗೆದುಕೊಂಡಾಗ ಅದರೊಡನೆಯೇ ಈ ಒಂದು ರೂಪಾಯಿ ಬಂದು ನೆಲದಮೇಲೆ ಬಿದ್ದು ಶಬ್ದಮಾಡಿತು. ಅವರಿಗೆ ಬುದ್ಧಿ ಸಾವಿರಾರುಕಡೆ ಓಡಿ, ಕೊನೆಗೆ ಅದರ ಗುಟ್ಟನ್ನು ಕಂಡುಹಿಡಿಯಬೇಕಾದರೆ ಅದನ್ನು ಇದ್ದಲ್ಲಿಯೇ ಇಡುವುದು ಲೇಸೆಂದು ಕಂಡಿತು.

ಓಡಿದ ಬಿರುಸಿಗೆ ಏದುತ್ತ ಬಂದ ಮಲ್ಲೇಶ ಬಾಗಿಲಬಳಿಯಲ್ಲೇ ಅಕ್ಷತೆಅಕ್ಕಿಯನ್ನು ಆಯುತ್ತ ಕುಳಿತಿದ್ದ ಕೆಂಪಮ್ಮಣ್ಣಿಯವರನ್ನು ಗಮನಿಸಲಿಲ್ಲ. ನೇರವಾಗಿ ಸ್ನಾನದಮನೆಯ ಕಡೆಗೆ ಹೋದನು. ಕ್ಷಣಾರ್ಧದಲ್ಲಿಯೇ ಹಿಂದಕ್ಕೂ ಬಂದನು. ಪುನಃ ಅವರನ್ನು ಗಮನಿಸದೇ ಓಡಿಯೂ ಹೋದನು. ಕೆಂಪಮ್ಮಣ್ಣಿಯವರು ಎದ್ದುಹೋಗಿ ನೋಡಿದರು. ಅವರ

ನಿರೀಕ್ಷೆಯಂತೆ ರೂಪಾಯಿ ಅಲ್ಲಿರಲಿಲ್ಲ. ಬಸಪ್ಪಾಜಿಯವರ ಆತಿಥ್ಯಕ್ಕಾಗಿ ಹೊರಟುಹೋಗಿತ್ತು.

ಬುದ್ಧಿಮೇಷ್ಟ್ರು ಮಲ್ಲೇಶ ಇಬ್ಬರೂ ಮನೆಸೇರಿದಮೇಲೆ ಕದನವು ಏರ್ಪಾಡಾಯಿತು. ಸ್ನಾನದ ಮನೆಯಲ್ಲಿ ತಾವು ಇಟ್ಟಿದ್ದ ಒಂದುರೂಪಾಯನ್ನು ಮಲ್ಲ ಹೊತ್ತುಹಾಕಿದ್ದಾನೆಂದು ಕೆಂಪಮ್ಮಣ್ಣಿಯವರು ಗಟ್ಟಿಯಾಗಿ ಸ್ವರ ತೆಗೆದರು. ಮಲ್ಲೇಶನು ದಿಙ್ಮೂಢನಾದನು. ಕೆಂಪಮ್ಮಣ್ಣಿಯವರು 'ನಿಜಹೇಳು ಇಲ್ದೇಇದ್ರೆ ಇವತ್ತು ನಿನ್ನ ಕೋದಂಡಕ್ಕೆತ್ತಿಸ್ತೀನಿ' ಎಂದು ಮಲ್ಲೇಶನನ್ನು ಎಳೆದಾಡಿದರು. ಬುದ್ಧಿಮೇಷ್ಟ್ರಿಗೂ ಬುದ್ಧಿಯೇ ಓಡಲಿಲ್ಲ. ಸುಮ್ಮನೆಯೇ ಇದ್ದುನೋಡಿದರು. ಮಲ್ಲೇಶನಿಗೆ ಒಂದು ಏಟು ಬಿದ್ದಿತು. ಅವರಲ್ಲಿದ್ದ ಪೌರುಷ ಜಾಗೃತವಾಯಿತು. ಎತ್ತರದ ಧ್ವನಿಯಲ್ಲಿ ಕೂಗಿದರು.

"ರೀ, ಅವನ್ಯಾಕ್ರೀ ಹೊಡೀತೀರಿ? ಮೀಣದ ಮನೇಲಿದ್ದದ್ದು ನನ್ನ ರೂಪಾಯಿ. ನಾನೇ ತರಕ್ಕೆ ಹೇಳಿದ್ದದ್ದು ಅವನಿಗೆ!"

ಕೆಂಪಮ್ಮಣ್ಣಿಯವರಿಗೆ ಅಸಾಧ್ಯ ಆಶ್ಚರ್ಯವಾಯಿತು. ಒಂದು ಗಳಿಗೆ ಆ ಮಾತನ್ನು ತಮ್ಮ ಯಜಮಾನರು ಆಡಿದರೇ? ಎನಿಸಿತು. ಅನಂತರ ಸುಧಾರಿಸಿಕೊಂಡು ನಿಧಾನವಾದ ವಕ್ರಧ್ವನಿಯಲ್ಲಿ ಹೇಳಿದರು.

"ನೀವೇ ಹೇಳಿಕಳಿಸಿದ್ರೊ? ನಿಮ್ದೋ ರುಪಾಯಿ? ಎಲ್ಲಿತ್ತೊ?"

"ಸಾಲ ಮಾಡಿದ್ದೆ."

"ಯಾಕೊ?"

"ನಮ್ಮಣ್ಣಯ್ಯ ಇವತ್ತು ಬರ್ತಾರೆ ಅನ್ನೋದು ಗೊತ್ತಾಗಿತ್ತು. ಸ್ಕೂಲಿನ ಹತ್ತಿರಕ್ಕೆ ಬಂದೋರಿಗೆ ಒಂದಷ್ಟು ಕಾಫಿತಿಂಡಿ ಕೊಡ್ಸಕ್ಕೆ ಅಂತ."

"ಓ ಯಾರು ಬಸಪ್ಪಾಜಿ ಬುದ್ಧಿಯವರೋ? ಅವರಿಗೆ ಮನೇಕಡೆ ಬರಕ್ಕೆ ಮೊಕವಿಲ್ಲವೇನೋ?"

"ಬರಬೇಡವಾ ಹೇಳು ನಿನ್ನ ರಾಕ್ಷಸ ಬಾಯಿಗೆ ಬೀಳಕ್ಕೆ."

"ಹೋ" ಎಂಬ ಪ್ರಚಂಡ ಕೂಗು ಮೊದಲಾಯಿತು. ಕೆಂಪಮ್ಮಣ್ಣಿಯವರು ಅವರ ಅಮ್ಮಯ್ಯನವರು ತೀರಿಕೊಂಡಾಗ ಅಳುವಷ್ಟು ದೊಡ್ಡ

ದಾಗಿ ಅಳಲು ಪ್ರಾರಂಭಿಸಿದ್ದರು. ಅಮ್ಮಯ್ಯನವರು ಸಂತೈಸಲುತೊಡಗಿದ್ದರು. ಹೊತ್ತು ಬಿದ್ದು ಬಹಳ ಹೊತ್ತಾದರೂ ಗೋಳಾಟ ಸಮಾಧಾನವಾಗಿರಲಿಲ್ಲ. ಮನೆಯಲ್ಲಿ ದೀಪಕ್ಕೆ ಗತಿಯಿರಲಿಲ್ಲ. 'ಬುದ್ಧಿಮೇಷ್ಟ್ರ' ತಾಳ್ಮೆಯೂ ಹದಗೆಟ್ಟು ಹೆಂಡತಿಯನ್ನು ಹೊಡೆಯಬೇಕಾಗಿದ್ದಷ್ಟು ಜೋರಾಗಿ ತಮ್ಮ ಹಣೆಯನ್ನು ಆಗಾಗ ಗಟ್ಟಿಸಿಕೊಳ್ಳುತ್ತಾ ಕುಳಿತಿದ್ದರು. ನಿಜವಾಗಿ ಏಟು ತಿಂದಿದ್ದ ಮಲ್ಲೇಶ ಮನೆಯ ಹೊರಗಿನ ಇಟ್ಟಿಗೆಯ ಗುಡ್ಡೆಯಮೇಲೆ ಕುಳಿತು ಯೋಚಿಸುತ್ತಿದ್ದನು.

ಅಂದು ರಾತ್ರಿ ಯಾರಿಗೂ ಊಟವಿಲ್ಲ. ಆದರೆ ಹೊಟ್ಟೆ ಹಸಿದು ಸಂಕಟಪಟ್ಟವನು ಮಲ್ಲೇಶನೊಬ್ಬನೇ. ಬೆಣ್ಣೆಯಿಲ್ಲದ ಕಾರಣಕ್ಕಾಗಿ ಅಳುತ್ತಿದ್ದ ಅವನ ಕಣ್ಣುಗಳು ಹೊಟ್ಟೆಗಿಲ್ಲದೆ ಎರಡು ತೊಟ್ಟು ಕಣ್ಣೀರನ್ನುಹೊರಗೆಡವಿದವು. ಬೆಳಿಗ್ಗೆ ಎದ್ದು ಊರಿಗೆ ಹೊರಟುಹೋಗಬೇಕೆಂದು ನಿರ್ಧರಿಸಿಕೊಂಡು ನಿದ್ದೆಮಾಡಲು ಪ್ರಯತ್ನಪಟ್ಟನು. ಕೊನೆಗೆ 'ಅಯ್ಯೋ ಪಾಪ' ಎಂದು ದಾಕ್ಷಿಣ್ಯಕ್ಕೆ ಬಂದಂತೆ ಸ್ವಲ್ಪ ನಿದ್ದೆ ಬಂದು ಅವನ ದುಗುಡವನ್ನು ಕಡಿಮೆ ಮಾಡಿತು.

ಆದರೆ ಬೆಳಗಾದಮೇಲೆ ಬುದ್ಧಿಮೇಷ್ಟ್ರ ನಡವಳಿಕೆಯನ್ನು ಕಂಡು ಮಲ್ಲೇಶ ತನ್ನ ನಿರ್ಧಾರವನ್ನು ಬದಲಾಯಿಸಬೇಕಾಯಿತು. ಬುದ್ಧಿಯವರು ಅವನು ಮುಖ ತೊಳೆದುದನ್ನು ಕಂಡು ಅವನನ್ನು ಕರೆದುಕೊಂಡು ಹೋಗಿ ಹೊಟ್ಟೆತುಂಬಾ ತಿಂಡಿ ಕೊಡಿಸಿದರು. 'ಇನ್ನೊಂದು ಸ್ವಲ್ಪ ದಿನಗಳಲ್ಲಿ ಎಲ್ಲ ಸರಿಮಾಡಿಬಿಡುತ್ತೇನೆ' ಎಂದರು. ಅದರ ಅರ್ಥವೇನೆಂಬುದು ಮಲ್ಲೇಶನಿಗೆ ತಿಳಿಯದೇ ಹೋದರೂ ಬುದ್ಧಿಯವರು ತನ್ನ ಕಡೆಗಿದ್ದಾರೆ ಎಂಬುದಷ್ಟು ತಿಳಿಯಿತು. ಹೊಟ್ಟೆಯೂ ತುಂಬಿತ್ತು.

ಬುದ್ಧಿಯವರ ಕೋಪ ಇನ್ನೊಂದಷ್ಟು ದಿನಗಳು ಅದೇಮಟ್ಟದಲ್ಲಿದ್ದಿದ್ದರೆ ಅವರು ಹೇಳಿದಂತೆ ಎಲ್ಲವೂ ಸರಿಹೋಗುತ್ತಿತ್ತೋ ಏನೋ ? ಹಾಗಾಗಲಿಲ್ಲ. ಬುದ್ಧಿಯವರು ಮನೆಯಲ್ಲಿದ್ದಷ್ಟುಹೊತ್ತೂ ಕೆಂಪಮ್ಮಣ್ಣಿಯವರು ಮಲಗಿಯೇ ಇರುತ್ತಿದ್ದುದನ್ನೂ, ಅವರ ಅಮ್ಮಯ್ಯನವರು ತಮ್ಮ ಇನ್ನೊಬ್ಬ ಮಗಳ ಮನೆಗೆ ಹೋಗುವ ಸಿದ್ಧತೆ ಮಾಡಿಕೊಳ್ಳುವುದನ್ನೂ ಕಂಡು ಬುದ್ಧಿ

ಯವರು ಮೆತ್ತಗಾದರು. ಹಾಗೆಯೇ ಸಮಯವರಿತು ಸಂಧಾನಕ್ಕೂ ಆರಂಭ ಮಾಡಿದರು.

ಇದರಿಂದ ಅವರು ಇನ್ನಷ್ಟು ದರ್ಜೆಯಲ್ಲಿ ಕಡಿಮೆಯಾದರು. ಮಲ್ಲೇಶನ ಹಸಿವೆಯ ಕಷ್ಟ ಹೆಚ್ಚತೊಡಗಿತ್ತು. ಗಂಡಹೆಂಡಿರ ನಡುವಿನ ವ್ಯಾಜ್ಯ ಇತ್ಯರ್ಥವಾಗುವುದರಲ್ಲಿ ಮಲ್ಲೇಶನ ಮುಖ ಸೋರಿಹೋದಂತಾಗಿತ್ತು. ಅಷ್ಟರಲ್ಲಿ ತಾಯಕ್ಕ ಬಂದಳು

ಕೆಂಪಮ್ಮಣ್ಣಿಯವರೂ, ಮಲ್ಲೇಶನೂ, ತಾಯಕ್ಕನ ಕೈಗಳನ್ನೇ ನೋಡಿದರು. ಮಗಳ ಮದುವೆ ಮಾಡಿ ಸ್ವಲ್ಪವೇ ದಿನವಾದ್ದರಿಂದ ತಾಯಕ್ಕನ ಕೈ ಹೆಚ್ಚುಕಡಿಮೆ ಖಾಲಿಯಾಗಿಯೇ ಇತ್ತು. ಒಂದು ಸೀರೆಯ ಬಟ್ಟೆಯಲ್ಲಿ ಎರಡು ಸೇರು ಸೀಗೇಕಾಯನ್ನು ಕಟ್ಟಿಕೊಂಡು ಬಂದಿದ್ದು ಅದನ್ನು ಕೆಂಪಮ್ಮಣ್ಣಿಯವರಿಗೆ ಒಪ್ಪಿಸಿದಳು. ಅದು ಕೆಂಪಮ್ಮಣ್ಣಿಯವರ ಭಾಗಕ್ಕೆ ಖಾಲಿಯ ಕೈಯಿನ ಲೆಕ್ಕವೇ ಆಗಿತ್ತು.

ಕೆಂಪಮ್ಮಣ್ಣಿಯವರು ಎಷ್ಟು ಪ್ರಯತ್ನಪಟ್ಟರೂ ತಾಯಿಮಕ್ಕಳನ್ನು ಸಂಧಿಸದಂತೆ ಮಾಡಲಾರದೇ ಹೋದರು ಮಲ್ಲೇಶ ತಾಯಿಯ ಎದುರಿಗೆ ಯಥೇಚ್ಛ ಕಣ್ಣೀರು ಹಾಕಿದನು. ತಾನು ಅಲ್ಲಿರುವುದಕ್ಕಾಗುವುದಿಲ್ಲವೆಂದನು. ತಾಯಕ್ಕ ಅವನ ಕೈಗೆ ನಾಲ್ಕಾಣೆ ಹಾಕಿ ಇನ್ನೊಂದೇ ವರ್ಷ ಸುಮ್ಮನಿರು ಎಂದು ಕೈಜೋಡಿಸಿ ಕೇಳಿಕೊಂಡಳು. ಇನ್ನುಮೇಲೆ ಅವನ ಕೈಗೇ ಒಂದಷ್ಟು ದುಡ್ಡನ್ನು ತಂದುಕೊಡುವುದಾಗಿ ಮಾತುಕೊಟ್ಟಳು. ಆ ಮಾತಿನ ಸತ್ಯಾಸತ್ಯಗಳನ್ನು ಪರೀಕ್ಷೆಮಾಡೋಣವೆನ್ನಿಸಿರಬೇಕು ಮಲ್ಲೇಶನಿಗೆ. ಅವನು ಆ ಬಾರಿಯೂ ಅವಳ ಮಾತಿನಂತೆ ಇರುವುದಾಗಿ ಒಪ್ಪಿಕೊಂಡನು.

ತಾಯಕ್ಕ ಮಾತಿಗೆ ತಪ್ಪಿಸಿಕೊಳ್ಳಲಿಲ್ಲ. ಮಗನನ್ನು ನೋಡುವುದಕ್ಕೆ ಬಂದಾಗಲೆಲ್ಲ ಅವನಿಗೆ ದುಡ್ಡು ಕೊಟ್ಟು ಹೋಗುತ್ತಿದ್ದಳು. ಕೆಂಪಮ್ಮಣ್ಣಿಯವರು ಊಟಕ್ಕೆ ಖೋತಾ ಹಾಕಿದ ದಿನ ಆ ದುಡ್ಡನ್ನು ಉಪಯೋಗಿಸಿಕೊಂಡು ಹೊಟ್ಟೆ ತುಂಬಿಸುತ್ತಿದ್ದನು. ಮಲ್ಲೇಶನಲ್ಲಿ ಹೀಗೆ ಕಾಸು ಓಡಾಡುತ್ತಿದ್ದುದು ಕೆಂಪಮ್ಮಣ್ಣಿಯವರ ಅಮ್ಮಯ್ಯನಿಗೆ ತಿಳಿದುಬಂದಿತು. ಅವರು

ಮಲ್ಲೇಶ ಅದನ್ನು ಮನೆಯಿಂದಲೇ ಎತ್ತಿಹಾಕುತ್ತಿರುವುದಾಗಿ ತಿಳಿದರು. ಏಕೆಂದರೆ ಕೆಂಪಮ್ಮಣ್ಣಿಯವರು ತಾಯಕ್ಕನಿಗೆ ಒಂದು ಬಾರಿ 'ಅವನಿಗೆ ಕಾಸೂಗೀಸೂ ಕೊಟ್ಟು ಹೆಚ್ಚಿಸಿಬಿಡಬೇಡ. ನಾವು ಮಾಡೋ ಶಿಕ್ಷೆಯಿಂದ ಅವನಿಗೆ ಬುದ್ಧಿ ಬರೋಕ್ಕೆ ಬದಲು ಮೊಂಡುತನ ಬಂದುಬಿಟ್ಟಾತು' ಎಂದಿದ್ದ ಜ್ಞಾಪಕ ಆ ಮುದುಕಿಗಿತ್ತು. ಹಾಗೆಯೇ ತಾಯಕ್ಕ ಕೆಂಪಮ್ಮಣ್ಣಿಯವರ ಮಾತಿಗೆ ಒಪ್ಪಿಕೊಂಡಿದ್ದ ಜ್ಞಾಪಕವೂ ಇತ್ತು. ಹಾಗಿದ್ದೂ ಮಲ್ಲೇಶನ ಜೇಬಲ್ಲಿ ಶಬ್ದವಾಗಬೇಕಾದರೆ ಎಲ್ಲಿಂದ ಬರಬೇಕು.

ಮುದುಕಮ್ಮ ಬಹಳ ಒಳ್ಳೆ ಮಾತಿನಿಂದ ಕೇಳಿನೋಡಿತು. 'ನಮ್ಮವ್ವ ಕೊಟ್ಟದ್ದು' ಎಂಬ 'ಸುಳ್ಳ'ನ್ನು ಮಲ್ಲೇಶ ಬಿಡಲೇ ಇಲ್ಲ. ಕೊನೆಗೆ ಮುದುಕಿಗೆ ಕೋಪ ಬಂದಿತು. ನೆಶ್ಯ ತಂದುಕೊಡದಿದ್ದರೆ ಮಗಳಿಗೆ ಮಲ್ಲೇಶನ ಮೇಲೆ ಚಾಡಿ ಹೇಳುವುದಾಗಿ ಹೆದರಿಸಿತು. ಮಲ್ಲೇಶ ತಟ್ಟನೆ "ಹೇಳ್ಕೊ ಹೋಗೂ ಮೂದೇವಿ. ಆವಮ್ಮ ನನ್ನೇನುಮಾಡಾತು?" ಎಂದುಬಿಟ್ಟನು. ಆ ಮಾತೂ, ಅದರ ಜೊತೆಗೆ ಅಂತಹ ಇನ್ನೊಂದಷ್ಟು ಮಾತುಗಳೂ, ದುಡ್ಡಿನ ವಿಷಯ, 'ಕೆಂಪಮ್ಮಣ್ಣಿಯೋರಸ್ನೂ ಬುದ್ಧಿ ಅನ್ನು' ಎಂದುದಕ್ಕೆ ಅವನು 'ಅದೆಂತಾ ಬುದ್ದಿಯಾ? ಬುದ್ದಿ ಹಿಡಕೊಂಡು ಎರಡು ಗುದ್ದಿ' ಅಂದದ್ದು, ಎಲ್ಲಾ ಕೆಂಪಮ್ಮಣ್ಣಿಯವರನ್ನು ತಲುಪಿತು. ಅವರ ಮೂಗು ಕೆಂಪೇರಿ ಅವರ ಕೈಗಳು ಮಲ್ಲೇಶನನ್ನು ಹಿಡಿದುಕೊಂಡವು. ಕಾಲುಗಳು ಅವನನ್ನು ಒದ್ದವು. ಮಲ್ಲೇಶನ ಬಾಯಿ ಅವರ ಕೈಗಳನ್ನು ಕಚ್ಚಿ ಹಲ್ಲೂರಿಸಿತು. ಕಿಟಾರನೆ ಕಿರಿಚಿ ಕೆಂಪಮ್ಮಣ್ಣಿಯವರು ಅವನನ್ನೆತ್ತಿ ದೂರ ಎಸೆದರು. ಅಷ್ಟಕ್ಕೆ ಸ್ವಲ್ಪ ಮೊದಲು ಮಲ್ಲೇಶ ಅವರ ಮುಂದಲೆಯ ಸ್ವಲ್ಪ ಕೂದಲನ್ನು ಕೈಗೆ ಸೇರಿಸಿಕೊಂಡಿದ್ದುದರಿಂದ ಅಷ್ಟುಕೂದಲು ಅವನ ಕೈಯೊಡನೆ ಬಂದುಬಿಟ್ಟಿತು. ಕೆಂಪಮ್ಮಣ್ಣಿಯವರ ಕೂಗು ತಾರಸ್ಥಾಯಿ. ಯನ್ನು ಮುಟ್ಟಿತು ಅವರ ಮುಖ ಶಿಕ್ಷೆಗೊಳಗಾದ ಶೂರ್ಪನಖಿಯದಾಗಿತ್ತು ಮನೆಗೆ ಗಂಡ ಬರುವವರೆಗೂ ಆ ವಿನ್ಯಾಸ, ಆ ಕಂಠದ ಶ್ರುತಿಯೆಲ್ಲವನ್ನೂ ಅದೇ ಮಟ್ಟದಲ್ಲಿಟ್ಟುಕೊಂಡಿದ್ದು ಗಂಡ ಬಂದಮೇಲೆ ಅವರಮೇಲೆ ಬಿದ್ದರು. ಆ ಪುಣ್ಯಕೋಟಿ "ಅವನನ್ನ ನಾಳೆಯಿಂದಲೇ ಈ ಮನೇಲಿರ್ದೇಇದ್ದಹಾಗೆ

ಮಾಡ್ತೀನಿ ತಾಳ್ರಿ"! ಎಂದಿತು ಕೆಂಪಮ್ಮಣ್ಣಿಯವರಿಗೆ ಅದು ಬೇಕಾಗಿರಲಿಲ್ಲ. ಅವನು ಹೊರಟುಹೋದರೆ ತಾಯಕ್ಕನ ಸರಬರಾಜು ನಿಂತು ಹೋಗುವುದಲ್ಲ! "ಮಾತೆತ್ತಿದರೆ ಆ ಮಾತು ಒಂದು ಆಡಿಬುಡ್ತೀರಿ. ನಿಮ್ಮ ಹೇಡಿತನಕ್ಕೆ ಏನ್ಹೇಳ್ಲೋ! ಅವನ್ನ ತುಳಿದು ಹದ್ದುಬಸ್ತಿನಲ್ಲಿಟ್ಕೊಳ್ಳಾರ್ದೇ ಹೋದ್ರೂ ಮಾತಾಡ್ತಾರೆ ಗಂಡಸಿನಂಗೆ" ಎಂದು ಛೀಮಾರಿ ಹಾಕಿ ಕೆಂಪಮ್ಮಣ್ಣಿಯವರು ಸುಮ್ಮನಾದರು.

ಕೆಂಪಮ್ಮಣ್ಣಿಯವರೊಡನೆ ಈಚೀಚೆಗೆ ಧೈರ್ಯವಾಗಿ ಕಚ್ಚಾಡಬಲ್ಲವನಾಗಿದ್ದ ಮಲ್ಲೇಶನಿಗೆ ಅವರ ಮನೆ ಬಿಟ್ಟು ಹೊರಟುಹೋಗುವಷ್ಟು ಕೋಪ ಬರದೇ ಇರುತ್ತಿರಲಿಲ್ಲ. ಆದರೆ ತಾನು ಊರಿಗೆ ಹೊರಟುಹೋದರೆ ಈಗ ಸಿಗುತ್ತಿದ್ದಷ್ಟು ದುಡ್ಡು ಸಿಕ್ಕುವಂತಿರಲಿಲ್ಲ. ಈ ಊರಿನಲ್ಲಿ ಕಾಲಕಳೆಯಲು ಇರುವಷ್ಟು ಸ್ನೇಹಿತರು ಮತ್ತು ಆಟಗಳು ಕಿರೀಕಾಟಿಯಲ್ಲಿ ಇರಲಿಲ್ಲ. ಆದುದರಿಂದ ತನ್ನ ಮೈಗೆ ಎಷ್ಟೇ ಅಪಾಯವಾದರೂ ಸಹಿಸಿಕೊಂಡು, ತಾಯಿಗೆ ಹೆಚ್ಚಿಗೆ ಅದನ್ನು ಹೇಳಿಕೊಳ್ಳದೇ ಇದ್ದುಬಿಡುತ್ತಿದ್ದನು.

ಈ ಗಲಾಟೆಯಲ್ಲಿ ಮಲ್ಲೇಶನ ವಿದ್ಯಾಭ್ಯಾಸ, ಅವನ ಪುಸ್ತಕಗಳಂತೆಯೇ ಯಾವುದೋ ಒಂದು ಮೂಲೆಗೆ ಹೋಗಿ ಸೇರಿಬಿಟ್ಟಿತ್ತು. ಮನೆಗೆಲಸ, ಕೆಂಪಮ್ಮಣ್ಣಿಯವರ ರಾಜ್ಯಭಾರದಲ್ಲಿದ್ದ ಕಿರುಕುಳಗಳ ಮಧ್ಯೆ ಅವನಿಗೆ ಓದಲಾಗಲಿ, ಕೊನೆಯ ಪಕ್ಷ ಕ್ಲಾಸಿನಲ್ಲಿದ್ದಾಗ ಪಾಠಗಳನ್ನು ಸರಿಯಾಗಿ ಗಮನಿಸಲಾಗಲಿ ಮನಸ್ಸು ಬರುತ್ತಿರಲಿಲ್ಲ. ಅವನು ಬುದ್ಧಿ ಮೇಷ್ಟ್ರು ಮನೆಗೆ ಬಂದ ಮೊದಲನೇ ವರ್ಷವೇ 'ಫೇಲಾ'ಗಿದ್ದನು. ಅವನು ಫೇಲಾದ ವಿಷಯವನ್ನು ಅರಸಿನವರೇ ಬಂದು ತಮ್ಮ ಅರಸಿಗೆ ಹೇಳಿ ಮುಖಪ್ರಕ್ಷಾಳನ ಮಾಡಿಸಿಕೊಂಡಿದ್ದರು.

ತಮ್ಮ ಹೆಂಡತಿ, ಬಿಡುವಿದ್ದಾಗಲೆಲ್ಲಾ ಆ ಹುಡುಗ ಕೆಲಸ ಹೇಳಿ ಸುಳ್ಳು ನೆವಗಳನ್ನು ತೆಗೆದು ಅವನನ್ನು ದಂಡಿಸತೊಡಗಿದ್ದುದನ್ನು ತಪ್ಪಿಸುವುದಕ್ಕೆ ಮಲ್ಲೇಶ ಫೇಲಾದ ಸುದ್ದಿ ಸಹಾಯ ಮಾಡಬಹುದೆಂದು ಅವರು ತಿಳಿದುಕೊಂಡದ್ದು ಅವಿವೇಕವಾಯಿತು. ಮಲ್ಲೇಶ ಫೇಲಾದರೆ ಅವರಮ್ಮ ಅವನ ವಿದ್ಯಾಭ್ಯಾಸವನ್ನೇ ನಿಲ್ಲಿಸಿಬಿಡಬಹುದು. ಮಲ್ಲೇಶ ತಮ್ಮ ಮನೆ

ಯನ್ನು ಬಿಟ್ಟುಬಿಡಬಹುದು ಎಂದು ಹೆಂಡತಿ ಹೆದರಬಹುದೆಂದು ಬುದ್ಧಿಯವರು ಊಹಿಸಿದ್ದರು. ಆ ಊಹೆ ತಪ್ಪಾಗಲಿಲ್ಲ. ಆದರೆ ಮಲ್ಲೇಶ ಫೇಲಾದ್ದು ಅರಸಿನವರ ತಪ್ಪು ಎಂಬುದು ಅವರ ಹೆಂಡತಿಯ ತೀರ್ಮಾನ. ಸ್ಕೂಲಿನಲ್ಲಿ ಅಷ್ಟು ಒಳ್ಳೆಯ 'ಮೇಷ್ಟ್ರೆ'ಂದು ಹೆಸರುವಾಸಿಯಾಗಿ, ಒಬ್ಬ ಹುಡುಗನನ್ನು ಪಾಸು ಮಾಡಿಸಲಾರದೇ ಹೋದ ಗಂಡನನ್ನು ಹೆಂಡತಿಯು ನಿಂದಿಸಿದರೆ ತಪ್ಪೇನು ? ಸಂಕೋಚವನ್ನು ಬಿಟ್ಟು 'ಬುದ್ಧಿ ಮೇಷ್ಟ್ರು' ಇತರ ಮೇಷ್ಟ್ರುಗಳಿಗೆ ಕೈಜೋಡಿಸಿ ಮಲ್ಲೇಶನನ್ನು ಮುಂದಿನ ಕ್ಲಾಸಿಗೆ ಹಾಕಿಸುವವರೆಗೂ ಕೆಂಪಮ್ಮಣ್ಣಿಯವರು ಬಿಡಲಿಲ್ಲ. ದೊಡ್ಡ ಹಲಸಿನಹಣ್ಣನ್ನು ಹೊತ್ತು ತಂದ ತಾಯಕ್ಕನಿಗೆ ಕೆಂಪಮ್ಮಣ್ಣಿಯವರು ಹಿಗ್ಗಿದ ಬಾಯಿಂದ ಮಲ್ಲೇಶ ಪಾಸಾದ ಸುದ್ದಿಯನ್ನು ಹೇಳಿದರು.

ಆ ವರ್ಷದಂತೆಯೇ ಉಳಿದ ವರ್ಷಗಳೂ ನಡೆದವು. ಮಲ್ಲೇಶನೂ ಓದಿನಲ್ಲಿ ತನಗಿದ್ದ ಎಲ್ಲಾ ಆಸಕ್ತಿಯನ್ನು ಕಳೆದುಕೊಂಡಿದ್ದನು. ಕೆಂಪಮ್ಮಣ್ಣಿಯವರ ವರ್ತನೆಯಿಂದಾಗಿ ಮೂರ್ಖನಾಗಿ ಹೋಗಿದ್ದನು. ಅವನು ಕೆಲಸಗಳನ್ನು ಕೆಡಿಸುತ್ತಿದ್ದನೇ ಹೊರತು ಅರಸಿನವರ ಮನೆಗೆ ಸಹಾಯಕನೇನಾಗಿರಲಿಲ್ಲ. ತಾಯಕ್ಕನ ಔದಾರ್ಯಕ್ಕೆ ಮನಸೋತ ಕೆಂಪಮ್ಮಣ್ಣಿಯವರ ಮುಖಾಂತರ ತೇರ್ಗಡೆಯೇನೋ ಪ್ರತಿ ವರ್ಷವೂ ಆಗುತ್ತಿತ್ತು.

ಅವನು ಎಷ್ಟೇ ಅಯೋಗ್ಯನಾಗುತ್ತ ಬಂದರೂ ಕೆಂಪಮ್ಮಣ್ಣಿಯವರು ತಾಯಕ್ಕನಲ್ಲಿ ಅದನ್ನು ಪ್ರಕಟಿಸುತ್ತಿರಲಿಲ್ಲ. ಅದರಿಂದ ಮಲ್ಲೇಶನಿಗೆ ಒದಗ ಬೇಕಾಗಿದ್ದ ಧನ ಸಹಾಯವು ನಿಲ್ಲುತ್ತಿರಲಿಲ್ಲ. ಹೆಂಡತಿ ಬಚ್ಚಿಡುತ್ತಿದ್ದ ವಿಷಯವನ್ನು ಹೊರಡೆಗೆಯುವ ಅವಶ್ಯಕತೆ ಬುದ್ಧಿಯವರಿಗೂ ಕಂಡು ಬರುತ್ತಿರಲಿಲ್ಲ. ಅಷ್ಟು ದಿವಸಗಳವರೆಗೆ ಆಗಲೇ ದುಡ್ಡಿನ ವ್ಯವಹಾರದಲ್ಲಿ ತೊಡಗಿದ್ದ ಮಲ್ಲೇಶನಿಗೆ ಹೊಟ್ಟೆಯ ಯೋಚನೆಯೂ ಇರಲಿಲ್ಲ. ಅವನ ಮೊಂಡಾಟಕ್ಕೆ ಕೆಂಪಮ್ಮಣ್ಣಿಯವರೇ ತುಸು ಹೆದರುತ್ತಿದ್ದ ಕಾರಣ, ಅವನ ಯಾವ ವಿಧವಾದ ಚಲನವಲನಗಳಿಗೂ ಅಡ್ಡಿಯಿರಲಿಲ್ಲ. ಹೀಗಾದುದರಿಂದ ಮಲ್ಲೇಶನಿಗೆ ಊರಿಂದ ಬಂದು ಓದುತ್ತಿದ್ದ ಕಾಲದ ಸ್ನೇಹಿತರು,

ಆಟಗಳು, ಮುಂತಾದುವುಗಳ ಪುನರ್ಮಿಲನವಾಯಿತು. ಅವನ ಪುಸ್ತಕ ಗಳೆಲ್ಲ ಮಾರಾಟವಾಗಿದ್ದವು. ಆಟದಲ್ಲಿ ಗೆದ್ದೋ ಅಥವಾ ಗಂಡಾಗುಂಡಿ ಯಿಂದ ಎತ್ತಿಹಾಕಿಯೋ ಒದಗಿಸಿಕೊಳ್ಳುತ್ತಿದ್ದ ಹಣ, ಪುಸ್ತಕ ಮಾರಿದ ಹಣ, ತಾಯಕ್ಕನ ದುಡ್ಡು ಇವುಗಳೆಲ್ಲವೂ ಮಲ್ಲೇಶನನ್ನು ಬೇರೆಯ ಹುಡುಗನನ್ನಾಗಿ ಮಾಡಿದವು. ಹುಚ್ಚ, ಚಿದಂಬರರ ಸಹವಾಸ ಸಿಕ್ಕಲಿಲ್ಲ ವಲ್ಲಾ ಎಂದೊಮ್ಮೆ ತನ್ನನ್ನು ತಾನೇ ಶಿಕ್ಷಿಸಿಕೊಂಡ ಮಲ್ಲೇಶ ತನ್ನ ಲೋವರ್ ಸೆಕೆಂಡರಿ ಪರೀಕ್ಷೆಯ ವರ್ಷದಲ್ಲಿ ಎಲ್ಲ ಹುಡುಗರಿಗೂ ಅಸಹ್ಯ ನಾಗಿ ಹೋಗಿದ್ದನು.

ಆ ವರ್ಷ ಪಾಸಾದರೂ ಸರಿಯೇ ಫೇಲಾದರೂ ಸರಿಯೇ ಮಲ್ಲೇಶ ಅಲ್ಲಿರುವುದು ಅಸಾಧ್ಯವಾಗಿತ್ತು. ಅವನು ಫೇಲಾಗುವುದರಲ್ಲಿ ಎಳ್ಳಷ್ಟೂ ಬುದ್ಧಿ ಮೇಷ್ಟ್ರಿಗೆ ಸಂಶಯವಿರಲಿಲ್ಲ. ಫೇಲಾದ ಮೇಲೆ ತಾಯಕ್ಕನಿಗೆ ಎಲ್ಲಾ ವಿಷಯನ್ನು ತಿಳಿಸಿ. 'ಅವನು ಎಲ್ಲಿದ್ದರೂ ಒಂದೆ. ಊರಿನಿಂದಲೇ ಸ್ಕೂಲಿಗೆ ಕಳಿಸಮ್ಮ' ಎಂದು ಹೇಳಿಬಿಡೋಣವೆಂದುಕೊಂಡಿದ್ದರು. ಫೇಲಾದ ಮೇಲೆ ಆ ಸ್ಕೂಲಿನಲ್ಲಿ 'ಸೀಟು' ಸಿಕ್ಕುವುದು ಕಷ್ಟ ಎಂದು ತಮ್ಮ ಹೆಂಡತಿಗೆ ಅರಸಿನವರು ಹೇಳಿ ಅವರಿಗೊಂದು ಬಗೆಯ ನಿರಾಶೆಯನ್ನು ಮೊದಲಿ ನಿಂದಲೇ ಉಂಟು ಮಾಡಿದ್ದರು. ಅವರಿಗೆ ಮಲ್ಲೇಶನ ವಿಷಯದಲ್ಲಿಟ್ಟು ಕೊಂಡಿರಬೇಕಾದ ಸಹನೆ ಮುಗಿದಂತಾಯಿತು. ಅವನನ್ನು ಹೀನಾಮಾನ ವಾಗಿ ಅನ್ನುತ್ತಿದ್ದರು. ಅದಕ್ಕೆ ಪ್ರತಿಯಾಗಿ ಅವನೂ ಬಾಯಿ ತೆಗೆಯು ತ್ತಿದ್ದನು.

ಕೆಂಪಮ್ಮಣ್ಣಿಯವರ ತಂಗಿ ಸುಬ್ಬಮ್ಮಣ್ಣಿಯವರು ತಮ್ಮ ನಾಲ್ಕು ಹೆಣ್ಣು ಮಕ್ಕಳು ಒಬ್ಬ ಗಂಡು ಮಗನ ಸಮೇತ ಅಕ್ಕನ ಮನೆಗೆ ಬಂದ ಮೇಲೆ ಮಲ್ಲೇಶನಿಗೆ ಹೊಸ ಹಿಂಸೆಯೊಂದು ಬಂದಿತು. ಅವರೆದುರಿಗೆ ತನ್ನನ್ನು 'ಬುದ್ಧಿ' ಎನ್ನುವುದಿಲ್ಲವಲ್ಲ ಎಂಬ ಕ್ರೋಧ ಕೆಂಪಮ್ಮಣ್ಣಿಯವರಲ್ಲಿ ಪ್ರಜ್ವಲಿಸಿತು. ಸಾಧ್ಯವಾದಷ್ಟು ಅವನಿಂದ ಮಾತುಗಳನ್ನು ಉತ್ತರವಾಗಿ ಪಡೆಯುವ ಸಂದರ್ಭವನ್ನೇ ಕಡಿಮೆಮಾಡಿಕೊಳ್ಳುತ್ತಿದ್ದರು. ಆದರೂ

ಆಗೊಂದು ಈಗೊಂದು ಬಾರಿ ಮಲ್ಲೇಶ ತನ್ನ 'ಅವಿನಯ' ಚಲಾಯಿಸು ತ್ತಲೇ ಇದ್ದನು.

ಕೆಂಪಮ್ಮಣ್ಣಿಯವರು ತಿಳಿದುಕೊಂಡಿದ್ದಂತೆ ಸುಬ್ಬಮ್ಮಣ್ಣಿಯವರು ಅದನ್ನು ಗಮನಿಸುತ್ತಿರಲಿಲ್ಲ. ಅವರಿಗೆ ಅಕ್ಕನಿಗಿದ್ದಷ್ಟು ಮನೆತನದ ಅಭಿ ಮಾನವಿರಲಿಲ್ಲ. ಮಲ್ಲೇಶ ತಮ್ಮ ಮಕ್ಕಳನ್ನು ಏಕವಚನದಲ್ಲಿ ಸಂಬೋ ಧಿಸುತ್ತಿದ್ದರೂ ಅವರಿಗೆ ಅದು ನೋವನ್ನುಂಟುಮಾಡುವ ವಿಷಯವಾಗಿರ ಲಿಲ್ಲ. ಕೆಂಪಮ್ಮಣ್ಣಿಯವರು ಮಲ್ಲೇಶನನ್ನು "ನಮ್ಮ ಮಕ್ಕಳನ್ನು ಹೋಗು ಬಾ ಅಂತೀಯಾ—ಹಾ!" ಎಂದು ತಲೆಯಮೇಲೆ ಮಟುಕಿದಾಗ ಸುಬ್ಬಮ್ಮಣ್ಣಿಯವರು "ಛೆ ಪಾಪ. ಅದರಲ್ಲೇನಿಲ್ಲಾ ಏನದೆ ಬಿಡಿ ಅಕ್ಕಯ್ಯ. ಅವನ್ನ್ಯಾಕೆ ಹೋಡೀತೀರಿ" ಎಂದು ಮಧ್ಯೆಬಂದು ಬಿಡಿಸಿದ್ದರು.

ಸುಬ್ಬಮ್ಮಣ್ಣಿಯವರು ಅಕ್ಕನ ಹಾಗೂ ಅಲ್ಲ ತಾಯಿಯ ಹಾಗೂ ಅಲ್ಲ. ಕೆಂಪಮ್ಮಣ್ಣಿಯವರಿಗೆ ಬದಲಾಗಿ ಸುಬ್ಬಮ್ಮಣ್ಣಿಯವರೇ ಬುದ್ಧಿ ಮೇಷ್ಟ್ರಿಗೆ ಹೆಂಡತಿಯಾಗಿದ್ದಿದ್ದರೆ ಬಹಳ ಚೆನ್ನಾಗಿರುತ್ತಿತ್ತೇನೋ ಎನ್ನಿಸು ತ್ತಿತ್ತು. ಹೆಂಡತಿ ಈ ಭಾವನೆಯನ್ನು ವಿನೋದವಾಗಿ ತೆಗೆದುಕೊಳ್ಳ ಬಹುದೆಂದು ದೇವರಾಜೇ ಅರಸಿನವರೇ ಒಮ್ಮೆ ಹೇಳಿದರಂತೆ. ಅದು ಹದಿನೈದು ದಿನಗಳ ವಿರಸಕ್ಕೆ ಕಾರಣವಾಯಿತಂತೆ.

ಅಂತೂ ಸುಬ್ಬಮ್ಮಣ್ಣಿಯವರು. ನಮ್ರಸ್ವಭಾವದವರು. ಅವರು ಬಡತನದ ಕಹಿ, ಲೋಕನಿಂದೆಯ ರುಚಿ ಚೆನ್ನಾಗಿ ಅನುಭವಿಸಿದ್ದುದರಿಂದ ಅವರ ಮಾತು, ನಡಿಗೆ ಕೆಲಸ ಎಲ್ಲವೂ ಮೃದುವಾಗಿಯೇ ಇರುತ್ತಿದ್ದವು. ಅವರಂತೆಯೇ ಅವರ ಹಿರಿಯಮಗಳು ನವರತ್ನ ಕೂಡ. ಅವರ ಎರಡನೆಯ ಮಗಳು "ಪಚ್ಚಿ" ಬಲು ಚೂಟಿಯಾದ ಬುದ್ಧಿವಂತೆಯಾದ ಹುಡುಗಿ. ಅವಳದೆಲ್ಲ ಬರಿಯ ದೊಡ್ಡವರಾಡುವ ಮಾತುಗಳೇ. ರೂಪ ಕೂಡ ಸ್ವಲ್ಪ ಹೆಚ್ಚಾಗಿಯೇ ಇತ್ತು. ಅವಳನ್ನು ಕಂಡ ಪ್ರತಿಯೊಬ್ಬರೂ ಅವಳಿಂದ ಆಕರ್ಷಿ ಸಲ್ಪಡುತ್ತಿದ್ದರು. ಒಬ್ಬೊಬ್ಬರು ಒಂದೊಂದು ಕಾರಣಕ್ಕೆ, ಒಬ್ಬರು ರೂಪಕ್ಕೆ ಒಬ್ಬರು ಅವಳ ಮಾತಿಗೆ, ಒಬ್ಬರು ಅವಳ ಜಾಣತನಕ್ಕೆ.

ಅಂತಹವರ ಪೈಕಿ ಮಲ್ಲೇಶನೂ ಒಬ್ಬನು. ಸುಬ್ಬಮ್ಮಣ್ಣಿಯವರು ಕೆಂಪಮ್ಮಣ್ಣಿಯವರ ಮನೆಗೆ ಬಂದದ್ದು ಯಾವ ಕಾರಣಕ್ಕಾಗಿಯೋ ಅದು ಮಲ್ಲೇಶನಿಗೆ ಬೇಕಾಗಿರಲಿಲ್ಲ. ಅವರು ಇರುವುದು ಎಷ್ಟುದಿನಗಳೆಂಬುದು ಬೇಕಾಗಿತ್ತು. ಪಚ್ಚಿಯೇ ಅದಕ್ಕೆ ಕಾರಣ. ಅವಳು ಜೊತೆಗೆ ಇರುವುದಾದರೆ ಮಲ್ಲೇಶ, ತನ್ನ ಆಟದ ಸಮಯವನ್ನೆಲ್ಲಾ ಕೆಂಪಮ್ಮಣ್ಣಿಯವರು ಕೊಡುತ್ತಿದ್ದ ಕೆಲಸಗಳಲ್ಲಿ ಕಳೆಯಲು ಸಿದ್ಧನಾಗಿದ್ದನು. "ನೀವೆಲ್ಲಾ ಇಲ್ಲೇ ಇನ್ನೂ ಎಷ್ಟು ದಿವಸಾ ಇರ್ತೀರಿ ?'' ಎಂದು ಅವನೊಂದುಬಾರಿ ಪಚ್ಚಿಯನ್ನೇ ಕೇಳಿದನು. ಅವಳು ದೊಡ್ಡವರಂತೆ "ನಾವೆಲ್ಲಾ ಇನ್ನೂ ಎರಡು ಮೂರು ತಿಂಗಳಿರ್ತೀವಿ. ನಾವಿಲ್ಲಿಗ್ಯಾಕೆ ಬಂದಿರದು ಗೊತ್ತಾ ? ನಮ್ಮಪ್ಪಜಿಗೆ ಬಲು ಕೆಟ್ಟಬುದ್ದಿ ಬಂದುಬಿಟ್ಟದೆ, ಅದು ಸರೋಗೋವರ್ಗೂ ನೀವಿಲ್ಲಿಗೇ ಬಂದುಬುಡಿ ಅಂತ ನಮ್ಮ ದೊಡ್ಡಮ್ಮಯ್ಯ ಕರೀಸ್ಕಂಡವ್ರೆ" ಎಂದಿದ್ದಳು ಇನ್ನು ಎರಡುಮೂರು ತಿಂಗಳು! ಮಲ್ಲೇಶನಿಗೆ ಅದೇಕೋ ಬಲು ಸಂತೋಷವಾಯಿತು. ಆ ಸಂತೋಷದಲ್ಲಿ ಅವನಿಗೆ ದಿನಗಳುಗಂಟೆಗಳಂತೆ ಉರುಳತೊಡಗಿದವು.

ಸದಾ ಹಣೆಯಮೇಲೆ ಬಂದು ನಿಂತಿರುತ್ತಿದ್ದ ಕ್ರಾಪು, ಗಿಣಿಮೂಗು ಚಿಕ್ಕ ಬಾಯಿ, ಸದಾ ಚಟುವಟಿಕೆಯಾದ ನಡೆವಳಿಕೆ, ಗೀರುಗೀರಿನ ಒಂದು ಹಾಫ್ ಆರಂ, ಒಂದು ಒರಟುಬಟ್ಟೆಯ ನಿಕ್ಕರ್ರಿನಲ್ಲಿರುತ್ತಿದ್ದ ಮಲ್ಲೇಶನನ್ನು ಕಂಡರೆ ಪಚ್ಚಿಗೂ ತುಂಬಾ ಮೆಚ್ಚಿಗೆ. ಆ ಮೆಚ್ಚಿಗೆ ತನ್ನಪಾಡಿಗೆ ತಾನು ಹೆಚ್ಚುತ್ತಿತ್ತೇ ವಿನಃ ಆಗಾಗ್ಗೆ ಮಲ್ಲೇಶ ತಂದುಕೊಡುತ್ತಿದ್ದ ಕಡಲೇಕಾಯಿ, ಹಲಸಿನತೊಳೆ, ಪರಂಗೀಹಣ್ಣಿನ ಚೂರುಗಳಿಂದೇನೂ ಹೆಚ್ಚುತ್ತಿರಲಿಲ್ಲ. ಅವರಿಬ್ಬರೂ ಮಾತಿಗೆ ಕುಳಿತರೆ ಮಧ್ಯೆ ಬರುತ್ತಿದ್ದ ವಿಷಯಗಳಿಗೆ ಲೆಕ್ಕವೇ ಇರಲಿಲ್ಲ. ಪಚ್ಚಿಯ ಅಕ್ಕ ನವರತ್ನ ತುಂಬಾ ನಾಚಿಕೆಯಪ್ರಕೃತಿಯವಳು. ಅವಳು ಪಚ್ಚಿ ಮಲ್ಲೇಶರ ಸಂವಾದಗಳಲ್ಲಿ ಹೆಚ್ಚಾಗಿ ಸೇರುತ್ತಿರಲಿಲ್ಲ. ಅಕ್ಕ ನಾಚಿಕೊಂಡಷ್ಟೂ ಪಚ್ಚಿ ನಾಚಿಕೆಗೆ ಪ್ರೋತ್ಸಾಹ ಕೊಡುವಂತಹ ವಿಷಯಗಳನ್ನೇ ಎತ್ತಿ ಮಾತನಾಡುತ್ತಿದ್ದಳು.

''ಮಲ್ಲು, ನಮ್ಮ ಅಕ್ಕಯ್ಯನಿಗೆ ಮುಂದಲ ವರ್ಷ ಮದುವೆ'' ಎಂದು ಪಚ್ಚಿ ಮಲ್ಲುವಿಗೆ ಹೇಳಿದರೆ ನವರತ್ನ, "ಪಚ್ಚಿ ನೀ ಹಿಂಗೆಲ್ಲಾ ಮಾತಾಡಿದರೆ ದೊಡ್ಡಮ್ಮಯ್ಯನಿಗೆ ಹೇಳ್ತೀನಿ ನೋಡು" ಎಂದು ಹುಬ್ಬು ಕೂಡಿಸುವಳು. ಪಚ್ಚಿ ಹೆದರದೆ ಮುಂದುವರಿಸುತ್ತಿದ್ದಳು:

"ನಮ್ಮಕ್ಕಯ್ಯನ ಗಂಡ ಹಲಗೂರಿನಲ್ಲಿ ಪೋಲೀಸು ಕೆಲಸದಲ್ಲವ್ರೆ. ನೆನ್ನೆ ಅಕ್ಕಯ್ಯ ಉಟ್ಕಂಡಿದ್ರಲ್ಲ ಆ ಕೆಂಪು ಸೀರೆ ಅವರೇ ತಕ್ಕೊಟ್ಟಿದ್ದದ್ದು. ಇನ್ನೆಷ್ಟುದಿವಸ ಸುಮ್ನೆ ಇರ್ತಾರೆ? ಮುಂದಿನ ವರ್ಷ ಖಂಡಿತ" ಎಂದ ತಂಗಿಯ ಮಾತಿಗೆ ಅಕ್ಕ—

"ನಿನಗೆ ಯಾವಾಗ್ಲೋ?" ಎಂದಳು ತಂಗಿ ಧೈರ್ಯವಾಗಿ—

''ನನಗೆ ಅದರ ಮುಂದಲ ವರ್ಷ—ಅಲ್ವಾ ಮಲ್ಲು?" ಎಂದು ಮಲ್ಲುವಿಗೆ ಒಪ್ಪಿಸಿದಳು. ಅದಕ್ಕೆ ಅಕ್ಕ ''ಏನು ನಿನ್ನ ಮದುವೆ ಮಾತನ್ನ ಅವನ ಹತ್ರ ಒಪ್ಪಿಸ್ತಾ ಇದೀಯಲ್ಲ. ಅವನ್ನೇ ಆಗಿಬುಡು ಹೇಳ್ತೀನಿ'' ಎಂದಳು. ತಂಗಿ ಮರುಕ್ಷಣ ಆಡಿಬಿಟ್ಟಳು—

"ಆಗ್ಲೇಳು, ಮಲ್ಲೂನೇ ಮದುವೆಯಾದರೆ ಏನಂತೆ, ಯಾಕೆ ಮಲ್ಲು ಚೆನ್ನಾಗಿಲ್ವಾ?" ಎಂದಳು. ನವರತ್ನಳಿಗೆ ಸಂಕೋಚ ದುರ್ಭರವಾಯಿತು. ಹುಡುಗನೆದುರಿಗೆ ಒಬ್ಬ ಹುಡುಗಿ ಅವನನ್ನು ಮದುವೆಯಾಗುವೆನೆಂದು ಹೇಳುವುದು ಲೋಕದಲ್ಲೆಲ್ಲೂ ಇಲ್ಲ ಎಂದು ನವರತ್ನಳ ಭಾವನೆ. ಅವಳು ಮುಖ ಮುಚ್ಚಿಕೊಂಡು ಮನೆಯೊಳಕ್ಕೆ ಓಡಿದಳು.

ಒಳಗೆ ಕೆಂಪಮ್ಮಣ್ಣಿಯವರು ತಂಗಿಗೆ ಜಡೆ ಹಾಕುತ್ತ ಕುಳಿತಿದ್ದರು. ನವರತ್ನ ಬಂದು ತನ್ನ ತಾಯಿಯ ಬಳಿ ಕುಳಿತುಕೊಂಡಳು. ಅವಳು ಬಂದ ರೀತಿಯಲ್ಲಿಯೇ ಏನೋ ವಿಶೇಷವಿರುವಂತಿತ್ತು. ಕೆಂಪಮ್ಮಣ್ಣಿಯವರು ಕೇಳಿದರು. ನವರತ್ನ ತಲೆತಗ್ಗಿಸಿ ಬಾಚಣಿಗೆಯಲ್ಲಿ ಸಿಕ್ಕಿದ್ದ ಕೊಳೆಯನ್ನು ತೆಗೆಯುತ್ತಾ ಎಲ್ಲವನ್ನೂ ಹೇಳಿಬಿಟ್ಟಳು. ಕೆಂಪಮ್ಮಣ್ಣಿಯವರ ಕಣ್ಣು ಕೆಂಪಗಾಯಿತು. ಅವರ ತುಟಿಗಳು ಬಿಗಿದುಕೊಂಡವು. ''ಅವರಿಬ್ಬರನ್ನೂ ಎಳ್ಕೊಂಡು ಬಾ ಇಲ್ಲಿ, ಹೋಗು ನವರತ್ನಾ!'' ಎಂದು ಆಜ್ಞೆ ಮಾಡಿದರು. ಅವಳು ಜಾಗ ಬಿಟ್ಟು ಕೊಂಚ ಹೊತ್ತು ಕದಲದೇ ಇದ್ದುದನ್ನು ಕಂಡು

ತಾವೇ ಅನೋಘವಾದ ಗಂಟಲಿಂದ “ ಲೇ ಪಚ್ಚೆ ! ! ಲೋ ಮಲ್ಲಾ ! ! ಬನ್ರೋ ಇಲ್ಲಿ ” ಎಂದು ಅಬ್ಬರಿಸಿದರು.

ಪಚ್ಚೆ, ಮಲ್ಲೇಶ ಇಬ್ಬರೂ ಬಂದರು. ಕೆಂಪಮ್ಮಣ್ಣಿಯವರು ಕಳ್ಳ ನನ್ನು ಕೇಳುವವರಂತೆ “ ಏನೋ ಮಲ್ಲಾ ನೀವು ಮಾತಾಡ್ತಾ ಇದ್ದದ್ದು?” ಎಂದರು

“ ಏನೂ ಇಲ್ಲವಲ್ಲಾ? ”

“ ಏನೇ ಪಚ್ಚೆ! ”

“ ಏನು ದೊಡ್ಡಮ್ಮಯ್ಯ, ಏನು ಮಾತು ?”

“ ನೀನು ಮಲ್ಲನ್ನ ಮದುವೆ ಮಾಡ್ಕೊಳ್ಳೋ ಮಾತು !”

“ ಹ್ಞೂ, ಅದನ್ನ ಅಕ್ಕಯ್ಯನೇ ಹೇಳದ್ದು !”

“ ಅವಳು ಹೇಳಿದ್ಲು, ನೀನೊಪ್ಕಂಡೆ. ನಿನಗೇನಾದರೂ ನಾಚಿಕೆ ಇದ್ದದಾ ? ಎಂತಾ ಬುದ್ಧಿ ಬಂತು ? ಮನೇ ಜವಾನನ್ನ ಮದುವೆಆಯ್ತಿಯಾ ನೀನು ? ”

ಮಲ್ಲೇಶನಿಗೆ ಆವೇಶ ಬಂದಂತಾಯಿತು. ‘ ಜವಾನ ’ ಎಂಬ ಮಾತನ್ನು ಕೆಂಪಮ್ಮಣ್ಣಿಯವರು ಆ ದಿನವೇ ಮೊದಲನೆಬಾರಿಗೆ ಉಪಯೋಗಿಸಿದ್ದದ್ದು. ಈದಿನ ತಡೆಯಲಾರದೇ ಅವರ ಹೃದಯದಲ್ಲೇ ವಾಸವಾಗಿದ್ದ ಆ ಪದ ಈಚೆಗೆ ಕಾರಲ್ಪಟ್ಟಿತ್ತು. ಅದು ಮಲ್ಲೇಶನನ್ನು ಕೆರಳಿಸಿತು

“ಯಾರ್ನೇ ನೀನು ಜವಾನ ಅನ್ನದು, ಯಾರೇ ಅದು ನಿನ್ನಜವಾನ?” ಎಂದು ಕೋಪದಿಂದ ಕೂಗಿಕೊಂಡನು. ಕೆಂಪಮ್ಮಣ್ಣಿಯವರು ಬೆಕ್ಕಸ ಬೆರಗಾದರು. ಮಲ್ಲೇಶ ಮರ್ಯಾದೆ ಎಲ್ಲವನ್ನೂ ಸಂಪೂರ್ಣವಾಗಿ ಬಿಟ್ಟು ಏನೇ ? ಯಾರೇ ? ಎನ್ನುತ್ತಿರುವುದು ಅವರ ಮುಖಕ್ಕೆ ಅಪ್ಪಳಿಸಿದಂತಾಗಿತ್ತು. ಅದರಿಂದ ಚೇತರಿಸಿಕೊಳ್ಳುವುದರೊಳಗೆ ಅವರಿಗೇ ತಿಳಿಯದಂತೆ ಎದ್ದುಬಂದು ಮಲ್ಲೇಶನ ಬಳಿ ನಿಂತಿದ್ದರು.

“ಏನೋ ಗುಲಾಮ ? ಏನಂದೇ ? ಯಾರೇ ? ಏನೇ?” ‘ಪಟ್ಟೆ’ಂದು ಮಲ್ಲೇಶನ ತಲೆಯಮೇಲೊಂದು ಏಟು ಬಿತ್ತು. ಮಲ್ಲೇಶ ಹುಚ್ಚನಾದನು.

ಓಡಿಹೋಗಿ ಹತ್ತಿರದಲ್ಲೇ ಜೋಡಿಸಿದ್ದ ಸೌದೇಸೀಳಿನ ಗುಡ್ಡೆಗೆ ಕೈಹಾಕಿ ಒಂದು ಸೀಳನ್ನು ಎಳೆದು ಬೀಸಿದನು. ಮೂರು ಸೀಳಿನ ಏಟು ಕೆಂಪಮ್ಮಣ್ಣಿಯವರನ್ನು ಘನವಾಗಿ ನೋಯಿಸಿತು. ಅವರು 'ಅಯ್ಯೋ' ಎಂದು ಚೀರಿ ಅಲ್ಲಿಯೇ ಕುಕ್ಕರಿಸಿ ಕುಳಿತರು. ಮಲ್ಲೇಶ ಇರಿದ ಹುಲಿಯಂತಾಗಿದ್ದ.

"ಅಕ್ಕಿ, ಜೋಳ, ರಾಗಿ, ಬೆಣ್ಣೆ, ಮೆಣಸೀಕಾಯಿ ಅಂತ ನಮ್ಮವ್ವನ ಕೈಲಿ ಈಸ್ಕಂಡುತಿಂದು ಜವಾನಾ ಅಂತೀಯಾ ನನ್ನ? ಜ....ವಾ....ನ....?"

ಪಚ್ಚೆಯ ಎದುರಿನಲ್ಲಿ ಕೆಂಪಮ್ಮಣ್ಣಿಯವರು ಅಂದ ಆ ಮಾತಿನಿಂದ ಅವನಿಗೆ ಆ ರುದ್ರಕೋಪ ಬಂದಿತ್ತು. ಆ ಕೋಪ ಅವರ ಹಣೆ, ದವಡೆಗಳಲ್ಲಿ ರಕ್ತ ಕಂಡಬಳಿಕ ಶಾಂತವಾಯಿತು.

ಗಾಳಿಸವಾರಿ ಹೋಗಿದ್ದ ಬುದ್ಧಿಮೇಷ್ಟ್ರು ಬರುವವರೆಗೂ ಮನೆಯಲ್ಲಿ ಕೆಂಪಮ್ಮಣ್ಣಿಯವರ ನರಳಾಟದ ಸದ್ದು ವಿನಃ ಮತ್ತೊಂದು ಸದ್ದು ಇರಲಿಲ್ಲ. ಕೆಂಪಮ್ಮಣ್ಣಿಯವರ ಗಾಯಗಳಿಗೆ ಸುಬ್ಬಮ್ಮಣ್ಣಿಯವರು ಕಟ್ಟಿದ್ದ ಬಟ್ಟೆಗಳು ಸಾಲದೆಂದು ಅವರ ಅಮ್ಮಯ್ಯನೂ ಸಿಕ್ಕಾಬಟ್ಟೆ ಕಟ್ಟಿದ್ದು ಕೆಂಪಮ್ಮಣ್ಣಿಯವರ ಸ್ಥಿತಿ ತುಂಬಾ ಅಪಾಯಕರವಾಗಿ ತೋರುವಂತಿತ್ತು. ತಾನು ಮಾಡಿದ ಕೆಲಸ ಸ್ವಲ್ಪ ಕೈಮೀರಿದುದೆಂದು ತಿಳಿದ ಮಲ್ಲೇಶನೂ ಗಾಢಮೌನದಿಂದ ಮುಂದಾಗುವುದನ್ನು ಕಾಯುತ್ತಾ ಹೊರಗೆ ಕುಳಿತಿದ್ದನು. ಅವನಿಗೊಮ್ಮೆ ಆ ಮನೆಯನ್ನು ಬಿಟ್ಟು, ಊರಿಗೂ ಹೋಗದೇ, ಎಲ್ಲಿಗಾದರೂ ಹೊರಟುಹೋಗಬೇಕೆನ್ನಿಸಿತು. ಆದರೆ ತನ್ನ ಬಟ್ಟೆ ಪುಸ್ತಕಗಳ ಪೆಟ್ಟಿಗೆಯನ್ನು ಬಿಟ್ಟು ಏಕೆ ಹೋಗಬೇಕೆಂದು ತಡೆಯುತ್ತಿದ್ದನು. ಇನ್ನೊಮ್ಮೆ ಊರಿಗೆ ಹೋಗೋಣವೆನ್ನಿಸುತ್ತಿತ್ತು. ಊರಿಗೆ ಹೋದರೆ 'ಅವ್ವ' ತನ್ನ ಓದುಗಾರಿಕೆಯನ್ನೇ ನಿಲ್ಲಿಸಿಬಿಡಬಹುದು, ಆಮೇಲೆ ಹಳ್ಳಿಯಲ್ಲೇ ದನ ಮೇಯಿಸಿಕೊಂಡಿರಬೇಕಾಗಬಹುದು ಎಂಬ ಯೋಚನೆಗಳು ಬಂದು ಅದೂ ಸರಿಯಲ್ಲವೆನ್ನಿಸುತ್ತಿತ್ತು. ಯಾವುದಕ್ಕೂ 'ಬುದ್ಧಿಮೇಷ್ಟ್ರು' ಮನೆಗೆ ಬರಲಿ ಎಂದುಕೊಂಡು ಗಂಭೀರವಾಗಿ ಕುಳಿತಿದ್ದನು.

ರಾತ್ರಿ ಊಟದ ಹೊತ್ತಾದಮೇಲೆ ಬುದ್ಧಿಮೇಷ್ಟ್ರು ಮನೆಗೆ ಬಂದರು. ಎಲ್ಲರಿಗೂ ಮುಂದೇನಾಗುವುದೋ ಎಂಬ ಕಾತರವಿತ್ತು. ಬುದ್ಧಿಯವರು

ಮನೆಯೊಳಕ್ಕೆ ಹೋದ ಬಹಳಹೊತ್ತು ನಿಶ್ಶಬ್ದವಾಗಿಯೇ ಇತ್ತು ಅನಂತರ ಸಣ್ಣ ಧ್ವನಿಯಲ್ಲಿ ರಾಗವಾಗಿ ಕೆಂಪಮ್ಮಣ್ಣಿಯವರ ರೋದನ ಹೊರಗೆ ಬಂದಿತು.

ಯಾವ ಕೋಪದಲ್ಲಿ ಬುದ್ಧಿಮೇಷ್ಟ್ರು ಮನೆಗೆ ಬಂದಿದ್ದರೋ ಏನೋ, ಹೆಂಡತಿಯ ಗಾಯಗಳಿಂದ ಮೂಡಿದ ಕನಿಕರಕ್ಕಿಂತ ಅವಳ ಚಾಡಿಯ ಮಾತುಗಳಿಂದ ಹುಟ್ಟಿದ ಹೇಸಿಗೆಯೇ ಹೆಚ್ಚಾಗಿತ್ತು. ಮಲಗಿದ್ದ ಹೆಂಡತಿಯ ಕಪಾಲಕ್ಕೆ ಒಂದು ಬಿಗಿದು ಹೊರಗೆ ಬಂದರು. ಅವರಮೇಲೆ ಅವರಿಗೇ ರೊಚ್ಚು ಉಂಟಾಗಿತ್ತು. "ಮಲ್ಲೇಶ!!" ಎಂದು ಅರಚಿದರು. ಮಲ್ಲೇಶ ಮೆಲ್ಲನೆ ಅವರ ಮುಂದಕ್ಕೆ ಬಂದನು. ಬುದ್ಧಿಯವರ ಕಣ್ಣುಗಳಲ್ಲೂಅಸಾಧ್ಯ ಕೋಪ ಕಿಡಿಗಾರುತ್ತಿತ್ತು.

"ಏನೋ ಅದು ನಿನ್ನ ಪುಂಡಾಟ? ಇವತ್ತು ನಿನ್ನ ಕೈಕಾಲು ಮುರೀದೇ ಬುಡದಿಲ್ಲ. ನಮ್ಮನೆಗೆ ಶನಿ ಬಂದ್ಹಾಗಾಗದ್ಯಲ್ಲೋ ನೀನು ಬಂದದ್ದು. ಯಾರ್‍ಯಾರ ಪ್ರಾಣ ತಗೀಬೇಕೂಂತ ಮಾಡಿದೀಯೆ?"

"ನನ್ನ ಜವಾನಾ ಅಂತಂದ್ರಲ್ಲ ಬುದ್ದಿ?"

"ಇಲ್ಲಇಲ್ಲಾ, ನೀನು ರಾಜಕುಮಾರ!"

"ನಾನು ಜವಾನಾ ಏನೂ ಅಲ್ಲ, ಯಾರಂಗಂದ್ರೂ ನಾನು ಸುಮ್ನಿರದಿಲ್ಲ."

"ಏನು ಮಾಡ್ತೀಯೋ?"

"ನೋಡಿದ್ರೋ ಇಲ್ಲವೋ ಒಳಗೆ?"

ಬುದ್ಧಿಮೇಷ್ಟ್ರ ತಾಳ್ಮೆ ಕೆಟ್ಟಿತು. ತಲೆ ಗಿರ್‍ರನೆ ತಿರುಗಿದಂತಾಯಿತು. ತಟ್ಟನೆ ತಾವೂ ಹತ್ತಿರದಲ್ಲಿದ್ದ ಸೌದೆಯ ಗುಡ್ಡೆಯಿಂದ ಸೀಳೊಂದನ್ನು ಎಳೆದುಕೊಂಡರು. ಮಲ್ಲೇಶ ಏಟು ಬಿದ್ದರೂ ಜಗ್ಗಲಿಲ್ಲ. ಎರಡೇಟು ಮೂಳೆಗೆ ತಗುಲಿ 'ಖಟ್ ಖಟ್' ಎಂದಿತು. ಮಲ್ಲೇಶ "ಅಯ್ಯೋ, ಸಾಯಿಸ್ಬುಡಿ....ಸಾಯಿಸ್ಬುಡಿ....ಸತ್ತೋದೇ" ಎಂದು ಕೂಗಿಕೊಂಡನು. ಹೇಳುವವರಿಲ್ಲ, ಕೇಳುವವರಿಲ್ಲ. ಬಿಡಿಸಿಕೊಳ್ಳಲು ಬರುವವರು ಆ ಮನೆಯಲ್ಲಿ ಒಬ್ಬರೂ ಇರಲಿಲ್ಲ. ತನಿಂದ ಇಷ್ಟೂ ಆಯಿತೆಂದು ಭಾವಿಸಿದ

ಪಚ್ಚಿಯೇ ಕೊನೆಗೆ ಮಧ್ಯೆ ಬರಬೇಕಾಯಿತು, ಅಥವಾ ಅವಳೊಬ್ಬಳಿಗೇ ಆ ಧೈರ್ಯ.

ಹಾಗಾದರೂ ಬುದ್ಧಿಯವರು ಮಲ್ಲೇಶನನ್ನು ಬಿಟ್ಟುಕೊಟ್ಟದ್ದು ತಮಗೆ ಸಾಕಾಗಿಹೋದಾಗಲೇ. ಪಚ್ಚಿಯ ರಟ್ಟೆ ಹಿಡಿದು ಎಳೆದು ಬಿಟ್ಟ ರಭಸಕ್ಕೆ ಅವಳ ತಲೆ ಗೋಡೆಗೆ ಹೋಗಿ 'ಢಿಕ್ಕೆ'ಂದು ತಗುಲಿ ಅವಳಿಗೆ ಕಣ್ಣು ಕತ್ತಲೆ ಬಂದಿತ್ತು. ಮಲ್ಲೇಶ ನೆಲವನ್ನು ಅಪ್ಪಿ ಬಿದ್ದುಹೋಗಿದ್ದನು. ತಲೆ ಯೆತ್ತಲು ಅವನಿಂದ ಸಾಧ್ಯವಾಗಲಿಲ್ಲ. ಬುದ್ಧಿಯವರು ಕೈಯಲ್ಲಿದ್ದ ಸೀಳನ್ನು ಅವನಮೇಲೆಯೇ ಎಸೆದು ಮನೆಯಿಂದ ಹೊರಗೆ ಹೊರಟುಹೋದರು.

ಮಲ್ಲೇಶನಿಗೆ ತುಂಬಾ ಏಟು ಬಿದ್ದಿತ್ತು. ಅರ್ಧ ಘಂಟೆಯವರೆಗೂ ಅವನಿಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ಅವನ ಕಣ್ಣೀರೇ ಅವನಿಗೆ ಶೈತ್ಯೋಪಚಾರ ಮಾಡಬೇಕಾಗಿತ್ತು. ಅತ್ತುಅತ್ತು ಅವನ ಬಿಕ್ಕಳಿಕೆ ಬೆಳಗಿನ ಝಾವದವರೆಗೂ ಇತ್ತು. ಅವನಿಗೆ ಸಮಾಧಾನದ ನಾಲ್ಕು ಮಾತುಗಳ ನ್ನಾಡಬೇಕೆಂದು ಪಚ್ಚಿಗೂ ಸುಬ್ಬಮ್ಮಣ್ಣಿಯವರಿಗೂ ಜೀವ ಎಳೆಯುತ್ತಿತ್ತು. ಆದರೆ ಕೆಂಪಮ್ಮಣ್ಣಿಯವರಪಕ್ಕದಿಂದ ಏಳುವುದಕ್ಕೇ ಸುಬ್ಬಮ್ಮಣ್ಣಿಯವರಿಗೆ ಅಪ್ಪಣೆಯಿಲ್ಲದಂತಿತ್ತು. ಪಚ್ಚಿಗೆ ಅದೇನೋ ಒಂದು ವಿಧವಾದ ಸಂಕೋಚ ಈಗ ಬಂದುಬಿಟ್ಟಿತ್ತು. ತಾನು ಹೋಗಿ ಅವನನ್ನು ಸಮಾಧಾನಪಡಿಸಿದರೆ ಯಾರು ಏನೆಂದುಕೊಳ್ಳುವರೋ ಎನಿಸಿ ಅವಳು ದೂರವೇ ಇದ್ದುಬಿಟ್ಟಳು. ಮುದುಕಮ್ಮ "ಅವನಿಗೆ ಹಾಗೇ ಆಗಬೇಕು" ಎಂದು ತಲೆತುಂಬಾಕಂಬಳಿ ಯನ್ನೆಳೆದುಕೊಂಡಿತ್ತು. ಅರ್ಧರಾತ್ರಿಯ ಹೊತ್ತಿಗೆ ಬುದ್ಧಿಮೇಷ್ಟ್ರುಮನೆಗೆ ಬಂದು ತಮ್ಮ ಕಿರುಮನೆಯಲ್ಲಿ ಬಿದ್ದುಕೊಂಡಮೇಲೆ, ಕದವನ್ನು ತೆಗೆಯಲು ಎದ್ದಿದ್ದ ನವರತ್ನ ಮಲ್ಲೇಶನನ್ನು ಏಳಿಸಿ ಅವನ ಪೆಟ್ಟಿಗೆಯ ಪಕ್ಕದಲ್ಲಿದ್ದ ತುಂಡು ಮಂದಲಿಗೆಯಮೇಲೆ ಮಲಗಿಸಿ ಅವನ ಬೆಡ್‌ಷೀಟನ್ನು ಮೈತುಂಬಾ ಹೊದಿಸಿ ಹೋದಳು.

ಮಲ್ಲೇಶ ಜ್ಞಾನಸಂಪೂರ್ಣವಾಗಿ ಹಿಂತಿರುಗಿದಮೇಲೆ ತನಗೆ ಏನೇ ನಾಗಿದೆಯೆಂಬುದನ್ನು ನೋಡಿಕೊಂಡನು. ತಲೆಯ ಹಿಂಬಾಗದಲ್ಲಿ ಒಂದು

ಅಂಗುಲದಷ್ಟು ಗಾಯವಾಗಿತ್ತು. ಬಲದ ಅಂಗೈಗೆ ಸೌದೆಯ 'ಸಿವರು' ಚುಚ್ಚಿ ಬಾಧಿಸುತ್ತಿತ್ತು. ಬಲದ ಮೊಣಕಾಲು ಉಳುಕಿದಂತೆ ನೋಯು ತ್ತಿತ್ತು. ಎಡಗಿವಿಯ ಮೇಲ್ಭಾಗದಲ್ಲಿ ರಕ್ತ ಕಂಡಿತ್ತು. ಎಡಭುಜದಮೇಲೆ ಬಲವಾದೊಂದು ಮೂಗೇಟು ಬಿದ್ದು ಮೇಲೆ ತುಂಬಾ ಉರಿಯುತ್ತಾ ಒಳಗೆ ನೋಯುತ್ತಿತ್ತು. ಇವಿಷ್ಟೂ ದೊಡ್ಡ ಗಾಯಗಳು. ತರೆದುಹೋಗಿದ್ದ, ಕಿತ್ತುಹೋಗಿದ್ದ ಸಣ್ಣಪುಟ್ಟ ಗಾಯಗಳು ಇನ್ನೂ ಐದಾರು.

ಬುದ್ಧಿ ಮೇಷ್ಟ್ರಿಗಿರಲಿ, ನರಳುತ್ತ ಬಿದ್ದಿದ್ದ ಕೆಂಪಮ್ಮಣ್ಣಿಯವರಿಗೂ ರಾತ್ರಿತುಂಬುವುದರಲ್ಲಿ ಮಲ್ಲೇಶನಿಗೇನಾಗಿದೆಯೆಂಬುದನ್ನು ತಿಳಿದುಕೊಳ್ಳುವ ಮನಸ್ಸಾಗಿತ್ತು. ಇನ್ನು ಬುದ್ಧಿಯವರಿಗೆಷ್ಟಿರಬೇಕು? ಅವರು ತಮ್ಮ ಮನೆ ದೇವರು ನಂಜುಂಡೇಶ್ವರನನ್ನು ನೆನೆಸಿಕೊಂಡು ಮಲ್ಲೇಶನಿಗೆ ಏನೂ ಆಗ ದಿರಲಿ ಎಂದು ಹರಕೆ ಹೊತ್ತರು. ಬೆಳಿಗ್ಗೆ ಎದ್ದು ನೋಡುವುದರಲ್ಲಿ ಮಲ್ಲೇಶ ಏನೂ ಆಗಿಯೇ ಇಲ್ಲದವನಂತೆ ಇದ್ದನು.

ಮತ್ತು ತನ್ನ ಪ್ರಯಾಣಕ್ಕೆ ಸಿದ್ಧನಾಗುತ್ತಿದ್ದನು. ಬಲಗಾಲು ಸ್ವಲ್ಪ ಕುಂಟಿಸುತ್ತಿದ್ದರೂ ಎದ್ದು ಮುಖ, ಗಾಯಗಳನ್ನೆಲ್ಲಾ ತೊಳೆದು, ಚಿಂದಿ ಯನ್ನು ಹುಡುಕಿ ಕಟ್ಟಿಕೊಂಡು ಇದ್ದ ಒಂದೆರಡು ಪುಸ್ತಕಗಳನ್ನೂ ಬೆಡ್ ಷೀಟನ್ನೂ ಪೆಟ್ಟಿಗೆಯೊಳಕ್ಕೆ ಹಾಕಿದನು. ಕೋಟುಟೋಪಿ ಹಾಕಿಕೊಂಡನು ಪೆಟ್ಟಿಗೆಯನ್ನು ಎತ್ತಿ ತಲೆಯಮೇಲಿಟ್ಟನು. ಸ್ವಲ್ಪಹೊತ್ತು ಹಾಗೆಯೇ ಯೋಚಿಸುತ್ತ ನಿಂತಿದ್ದು ಪುನಃ ಅದನ್ನು ಕೆಳಗಿಟ್ಟು ಅದರಮೇಲೆ ಕುಳಿತನು ಇದನ್ನೆಲ್ಲಾ ಬುದ್ದಿಮೇಷ್ಟ್ರು ಗಮನಿಸಿಕೊಳ್ಳುತ್ತಲೇ ಇದ್ದರು. ತಮ್ಮ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಕಿರುಮನೆಯೊಳಕ್ಕೆ ಹೋದ ತಕ್ಷಣ ಮಲ್ಲೇಶ ಅಲ್ಲಿಗೆ ಬರುವನೆಂದು ಸರಿಯಾಗಿ ಊಹಿಸಿದ್ದರು. ಅಂತೆಯೇ ಆ ಸನ್ನಿವೇಶವನ್ನು ಎದುರಿಸಲು ಹಿಂದೆಗೆಯುತ್ತಲೂ ಇದ್ದರು. ಅದರೆ ಎಷ್ಟುಹೊತ್ತು ಹಾಗಿರಲಾದೀತು? ಹೊರಗೆ ಬಂದರು. ಮಲ್ಲೇಶ ಎದ್ದು ನಿಂತನು. ಅವನು ಅಲ್ಲಿಯೇ ಏನನ್ನೋ ಹೇಳಲು ಇಚ್ಛಿಸುವನೆಂಬುವುದು ಅರ್ಥವಾಗಿ ಬುದ್ದಿಯವರು ಕಿರುಮನೆಗೆ ನುಗ್ಗದೆಯೇ ನಿಂತರು.

"ನಾನು ಊರಿಗೋಯ್ತೀನಿ ಸಾರ್"

" ಮಲ್ಲೇಶ ಬಹುಧೈರ್ಯದಿಂದ, ಬುದ್ಧಿಯವರ ಕಣ್ಣುಗಳನ್ನೆದುರಿಸಿ ಸ್ಪಷ್ಟವಾಗಿ ಹೇಳಿದನು ಬುದ್ಧಿಯವರೂ ಅಷ್ಟೇ ಆಳವಾದ ಸ್ವರದಲ್ಲಿ ಹೇಳಿದರು—

" ಆಗಲ್ಲ. ನಿಮ್ಮ ತಾಯೀನ ನಾನು ಕರೆಸ್ತೀನಿ, ಅಲ್ಲಿವರ್ಗೆ ನೀನು ಈ ಮನೆ ಬಿಟ್ಟು ಎಲ್ಲಿಗೂ ಹೋಗೋಹಾಗಿಲ್ಲ."

ಆ ಮಾತನ್ನು ಮಲ್ಲೇಶ ಲೆಕ್ಕಕ್ಕೇ ತೆಗೆದುಕೊಳ್ಳದೇ ಹೇಳಿದನು—

" ನಾನು ಈಗ ಹೋಗೇ ಹೋಯ್ತೀನಿ. ನನ್ನ ಇಲ್ಲೇ ಹೊಡೆದು ಸಾಯಿಸಿಬಿಟ್ಟರೂ ಸರಿಯೆ. ನಾನು ಹೋಗ್ದೇ ಇರಕ್ಕಿಲ್ಲ"

ಅವುಡುಗಚ್ಚಿ ಹೇಳಿದ ಮಲ್ಲೇಶನ ಮಾತು ಬುದ್ಧಿಯವರನ್ನು ನಿಜ ವಾಗಿ ಹೆದರಿಸಿತು. ಅದನ್ನು ಅವನಿಗೆ ತೋರಿಸದೇ ಹೇಳಿದರು.—

" ನೀನು ಹಟಮಾಡಿದರೆ ಕಂಭಕ್ಕೆ ಕಟ್ಟಿಹಾಕಿಬಿಡ್ತೀನಿ"

ಮಲ್ಲೇಶ ಮುಖವನ್ನು ಅಸಹ್ಯವಾಗಿ ಮುದುಡಿ,

" ತಿರುಗಾ ನನ್ನ ನೀವೇನಾದರೂ ಮುಟ್ಟಿದರೆ, ನನ್ನ ತಲೆ ನಾನೇ ಒಡ್ಕಂಡು ಬುಡ್ತೀನಿ, ಮುಟ್ಟೇ ಬನ್ನಿ ನೋಡವೆ" ಎಂದು ಕೈಗೆ ತೆಗೆದು ಕೊಂಡಿದ್ದ ಪೆಟ್ಟಿಗೆಯನ್ನು ನೆಲದಮೇಲೆ ಎಸೆದು ನಿಂತು ಹೇಳಿದ. ಬುದ್ಧಿ ಯವರಿಗೆ ಅವನ ಮಾತಿನಲ್ಲಿ ನಂಬಿಕೆ ಬಂದುಬಿಟ್ಟಿತು. ಅವರಿಗೆ ಏನು ಮಾಡುವುದಕ್ಕೂ ತೋಚದೇ ಕಿರುಮನೆಯೊಳಕ್ಕೆ ತಲೆತಗ್ಗಿಸಿ ನುಗ್ಗಿದರು. ನುಗ್ಗುತ್ತಿದ್ದಂತೆಯೇ "ನಾಹೋಯ್ತೀನಿ" ಎಂಬ ಮಲ್ಲೇಶನ ಮಾತು ಕಿವಿಗೆ ಬಿದ್ದಿತು. ಅದರಂತೆಯೇ ಮಲ್ಲೇಶ ಹೊರಟೇಬಿಟ್ಟನು. ಅವನ ಹಿಂದೆಯೇ ಹೊರಡುವುದಕ್ಕೆ ಬುದ್ಧಿಯವರೂ ಸಿದ್ಧರಾದರು.

ಇದೆಲ್ಲದಕ್ಕೂ ಪ್ರೇಕ್ಷಕರಾಗಿ ಮುದುಕಮ್ಮ ಸುಬ್ಬಮ್ಮಣ್ಣಿಯವರು, ನವರತ್ನ ಪಚ್ಚಿ ಎಲ್ಲರೂ ಅಡಿಗೆಯಮನೆಯ ಬಾಗಿಲಲ್ಲಿ ನಿಂತಿದ್ದರು. ಕೆಂಪಮ್ಮಣ್ಣಿಯವರು ಮಾತ್ರ ಮುಸುಗುಟ್ಟುತ್ತಾ ಹಾಸಿಗೆಯಮೇಲೆಯೇ ಬಿದ್ದಿದ್ದರು. ಅವರಲ್ಲಿ ಮಲ್ಲೇಶ ತನಗೆ ಹೇಳದೇ ಧಿಕ್ಕರಿಸಿ ಹೋಗುತ್ತಿ ದ್ದಾನಲ್ಲ ಎಂಬ ಕಿಚ್ಚು ಮಸೆಯುತ್ತಿತ್ತು.

ತಿರುಗಿನೋಡದೆ ಪೆಟ್ಟಿಗೆಯನ್ನು ತಲೆಯಮೇಲೆ ಹೊತ್ತು ಮಲ್ಲೇಶ ನಡೆದೇಬಿಟ್ಟನು. ಮನೆಯ ತಲೆಬಾಗಿಲ ಹತ್ತಿರವೇ ಇದ್ದ ಕಿರುಮನೆಯಲ್ಲಿ ಬುದ್ಧಿವೇಷ್ಟ್ರಿದ್ದುದರಿಂದ ಪ್ರೇಕ್ಷಕರು ಯಾರೂ ತಲೆಬಾಗಿಲಿಗೆ ಹೋಗುವಂತಿರಲಿಲ್ಲ. ಆತುರ ಆತುರವಾಗಿ ಬುದ್ಧಿಯವರು ಕೋಟು ಹಾಕಿಕೊಂಡು ಪೇಟ ಸಿಕ್ಕಿಸಿಕೊಂಡು ಹೊರಟರು. ಅವರು ತಲೆಬಾಗಿಲನ್ನು ದಾಟಿ ಬೀದಿಗಿಳಿಯುತ್ತಿರುವಂತೆಯೇ ಅವರೆಲ್ಲರೂ ಬಾಗಿಲಕಡೆಗೆ ನುಗ್ಗಿದರು. ಅವರು ಹತ್ತಾರುಮಾರು ದೂರಹೋಗಿ ಹಿಂದಿರುಗಿ ನೋಡವುದಿಲ್ಲವೆಂದು ಮನದಟ್ಟಾದಮೇಲೆ ಎಲ್ಲರೂ ದಾರಿ ಪೂರ್ತಿ ಕಾಣುವಕಡೆಗೆ ಹೋಗಿ ಸಾಲಾಗಿ ನಿಂತರು.

ದೂರದಲ್ಲಿ ಮಲ್ಲೇಶ, ಅವನಹಿಂದೆ ಬುದ್ಧಿಯವರು. ಇಬ್ಬರೂ ಹಿಂತಿರುಗಿ ನೋಡದೇ ನಡೆದರು. ಚೌಡೀಗುಡಿಯಕಡೆಗೆ ತಿರುಗುವುದರಲ್ಲಿದ್ದಾಗ ಮಲ್ಲೇಶ ನಿಂತು ತಮ್ಮ ಕಡೆಗೆ ನೋಡುತ್ತಿದ್ದುದು ಎಲ್ಲರಿಗೂ ಕಾಣಿಸಿತು. ಅವರೆಲ್ಲರೂ ಮಲ್ಲೇಶ ತನ್ನನ್ನು ಹಿಂಬಾಲಿಸುತ್ತಿದ್ದ ಬುದ್ಧಿಯವರನ್ನು ನೋಡಿದನೆಂದು ತಿಳಿದುಕೊಂಡರು.

ಆದರೆ ಮಲ್ಲೇಶನ ಉದ್ದಿಶ್ಯ, ಬುದ್ಧಿಯವರನ್ನೂ ನೋಡುವುದಾಗಿರಲಿಲ್ಲ. ಮನೆಯನ್ನೂ ನೋಡುವುದಾಗಿರಲಿಲ್ಲ. ಮನೆಯ ಬಾಗಿಲಲ್ಲಿ ನಿಂತಿದ್ದ ಹೆಂಗಸರುಗಳ ಪೈಕಿ ಪಚ್ಚೆಯೂ ಒಬ್ಬಳಿರುತ್ತಾಳೆಂಬ ನಂಬಿಕೆಯಿಂದ ಹಿಂದಿರುಗಿನೋಡಿದ್ದನು. ಪಚ್ಚೆಗೆ ಅವನು ಸ್ಪಷ್ಟವಾಗಿ ಕಾಣಿಸುತ್ತಿದ್ದರೂ ಗುಂಪಿನಲ್ಲಿದ್ದ ಪಚ್ಚೆ ಮಲ್ಲೇಶನಿಗೆ ಕಾಣಿಸಲೇ ಇಲ್ಲ.



## ೭

ಹಿಂದೆ ಅದೇ ಮೊದಲನೆಯದಾಗಿ ಪುಟ್ಟತಾಯಿಗಂಡನ ಮನೆಗೆ ಹೋಗಿ ಇಳಿದದಿವಸ ಅವಳಿಗೆ ಗಂಡನಮನೆಯ ಬಗ್ಗೆ ಬಹಳ ಹುಡುಗಾಟದ ಭಾವನೆಯಿತ್ತು. ಎಮ್ಮೆಯನ್ನು ಹೊಡೆದುಕೊಂಡು ಕಾಡಿನಮೇಲೆ ಹೋಗಿದ್ದಾಗ ಹುಡುಗರು ಗಂಡಹೆಂಡಿರ ಆಟವನ್ನು ಆಡುತ್ತಿದ್ದಂತೆಯೇ ನಿಜವಾದ ದಾಂಪತ್ಯವನ್ನು ಅವಳು ಭಾವಿಸಿದ್ದದ್ದು. ಆಗ ಗಂಡನಾಗಿರುತ್ತಿದ್ದವನು ಯಾರಾದರೊಬ್ಬ ಪರಿಚಯದ ಹುಡುಗ. ಈಗ ಯಾರೋ ಅಪರಿಚಯಸ್ತನಾದ, ವಯಸ್ಸಿನಲ್ಲಿ ಬಹಳ ದೊಡ್ಡವನಾದ ಮನುಷ್ಯ ತನ್ನ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದಾನೆ.

ತನ್ನಗಂಡ ಯಾರಹಾಗಿದ್ದಾನೆ ?. ಜವನಪ್ಪನ ಮಗಳು ಮಲ್ಲಾಜಿಯ ಗಂಡನಿಗಿಂತ ಕಳಪೆಯೇನೂ ಇಲ್ಲ. ಜಲಂದರನ ಯೀರಪ್ಪನ ಮಗಳು ಶಿವರುದ್ರಿ ಗಂಡನಿಗಿಂತೇನೂ ಕಮ್ಮಿಯಿಲ್ಲ. ಆದರೆ ತಲೇ ತುಂಬಾ ಜುಟ್ಟೊಂದಿದೆ. ಅದು ಹೋಗುವುದು ಯಾವ ದೊಡ್ಡವಿಷಯ! ಏನಾದರಾಗಲಿ ತನ್ನ ಗಂಡ ಜಿಪುಣನಲ್ಲ. ಕಳ್ಳನ ಕಟ್ಟೆಹತ್ತಿರ ಗಾಡಿಯವರೆಲ್ಲರಿಗೂ ಎಳೆನೀರು ಕೊಡಿಸಿದಾಗಲೇ ಗೊತ್ತಾಯಿತಲ್ಲ! ಅದೂ ಅಲ್ಲದೇ ತನ್ನ ಗಂಡ ತುಂಬಾ 'ಸೋಕಿ' ಯವನಿರಬೇಕು. ಅವನು ತಲೆಗೆ ಹಾಕಿಕೊಳ್ಳುವ ಎಣ್ಣೆ ಎಷ್ಟು 'ಗಂ' ಎನ್ನುತ್ತದೆ. ಅವನಿಗೆ ತನ್ನಮೇಲೆ ತುಂಬಾ "ಆಸೆ"ಯಿರಬೇಕು. ಅದರಿಂದಲೇ ಆ ಎಣ್ಣೆಸೀಸೆಯನ್ನು ಮಲ್ಲೇಶನಕೈಲಿ ತನಗೂ ಕೊಟ್ಟುಕಳುಹಿಸಿದ್ದದ್ದು.

ಈರೀತಿ ಆಲೋಚಿಸುತ್ತಾ ಗಂಡನಬಗ್ಗೆ ಸದಭಿಪ್ರಾಯಗಳನ್ನು ಕೂಡಿಸಿಕೊಳ್ಳುತ್ತಾ ಪುಟ್ಟತಾಯಿ ಗುಜ್ಜಗೆರೆಗೆ ತಲುಪಿದ್ದಳು. ಮೊದಲನೇ ಬಾರಿಗೆ ತನ್ನ ಗಂಡನ ಮನೆಯೊಳಕ್ಕೆ ಕಾಲಿಟ್ಟಳು ಬಲಗಾಲು ಮುಂದಾಗಿ. ಅದು ಒಂದು ದುರ್ಬಲವಾದ ಎಂಟುಕಂಭದ ತೊಟ್ಟಿಯಮನೆ. ತಲೆಬಾಗಿಲಿನಿಂದ ಒಳಕ್ಕೆ ಹೋಗುತ್ತಿದ್ದಂತೆಯೇ ಎಡಗಡೆಗೊಂದು ತುಂಡುಗೋಡೆ. ಅದು ಹಜಾರವನ್ನು ಪ್ರತ್ಯೇಕಿಸುವುದಕ್ಕೆ ಹಾಕಿದ್ದುದು. ಹಜಾರದ ಮಗ್ಗು

ಲಲ್ಲಿ ಅಡಿಗೆಮನೆ ಅದರ ಪಕ್ಕದಲ್ಲೇ ಊಟದಮನೆ. ಇನ್ನು ತೊಟ್ಟಿಯ ಸುತ್ತಲೂ ಉಳಿದ ಜಾಗವೆಲ್ಲ ಖಾಲಿ. ಒಂದು ಭಾಗದಲ್ಲಿ 'ಆರಂಭ'ದ ಸಾಮಾನುಗಳು. ಒಂದೆರಡು ಚಾಪೆಗಳು, ರೇಷ್ಮೆಹುಳುವಿನ ತಟ್ಟಿಗಳಿಂದ ಕೂಡಿದ ಒಂದು ಮುರುಕಲು ಮೇಜ. ಇನ್ನೊಂದು ಭಾಗದಲ್ಲಿ ದನಗಳ ಕೊಟ್ಟಗೆ. ಅದರಲ್ಲಿ ಒಂದು ಎಮ್ಮೆ, ಎರಡು ಆರಂಭಕ್ಕೆ ಉಪಯೋಗಿಸುತ್ತಿದ್ದ ಹಸುಗಳು ಕಟ್ಟಿರುತ್ತಿದ್ದವು. ಆ ಎರಡು ಭಾಗಗಳ ಮಧ್ಯೆ ಮನೆಯ ಹಿಂಭಾಗಕ್ಕೆ ಹೋಗುವ ಒಂದು ಬಾಗಿಲು. ಹಿಂದೆ ಒಂದಷ್ಟು ಹಿತ್ತಲು. ಅಲ್ಲಿ ಒಂದು ಅಗಸೆಯಗಿಡ. ಒಂದು ದಾಳಿಂಬೆಯ ಗಿಡ, ಒಂದು ಹಸುವಾರದ ಗಿಡ. ಅದಕ್ಕೆ ಹತ್ತಲಾರದೆ ಕೆಳಗೆ ಬಿದ್ದು ಒದ್ದಾಡುತ್ತಿದ್ದ ಮಲ್ಲಿಗೆಯ ಬಳ್ಳಿ, ಅದರ ಪಕ್ಕದಲ್ಲಿ ತಿಪ್ಪೆಗುಂಡಿ.

ಸಂಜೆಯವರೆಗೆ ಪುಟ್ಟತಾಯಿ ಇದನ್ನೆಲ್ಲಾ ನೋಡಿಕೊಂಡಳು. ಸಂಜೆಗೆ ಮನೆಮುಂದೆ ಹಾಕಿಸಿದ್ದ ಚಪ್ಪರದಲ್ಲಿ ಆರತ್ಯಕ್ಷತೆಗೆ ಏರ್ಪಾಡಾಗಿತ್ತು. ಒಂದು ಶಾಲನ್ನು ಕಟ್ಟಿ ಅದರಮುಂದೆ ಒಂದು ಬೆಂಚನ್ನು ಹಾಕಿ ಅದರಮೇಲೆ ಶಾಲನ್ನು ಹೊದಿಸಲಾಗಿತ್ತು. ಅದರ ಎರಡು ಕಡೆಯೂ ದೀಪದ ಕಂಬಗಳನ್ನಿಟ್ಟಿತ್ತು. ಬೆಂಚಿನ ಎದುರಿಗೊಂದು ಬೆಂಚುಹಾಕಿ ಅದರಮೇಲೆ ಎರಡು ಮೂರು ತಟ್ಟೆಗಳನ್ನಿಟ್ಟಿತ್ತು. ಅದರಲ್ಲಿ ಹಣ್ಣು, ಕಾಯಿ, ಎಳನೀರು.

ಗಂಡುಹೆಣ್ಣುಗಳು ಹಸೆಗೆ ಬಂದವು. "ಮುಯ್ಯಿ"ಗೆ ಪ್ರಾರಂಭವಾಯಿತು. ಚಪ್ಪರದ ಬಾಗಿಲಿಗೆ ಸರಿಯಾಗಿ ಜಗಲಿಯಮೇಲೆ ಮಂದಲಿಗೆ. ಹಾಕಿಸಿಕೊಂಡು ಕುಳಿತಿದ್ದ ಚಿಕ್ಕಲಿಂಗಪ್ಪನವರಿಗೆ "ಮುಯ್ಯಿ" ಓದಿಸುತ್ತಿದ್ದವರ ಮೇಲೆ, ಮುಯ್ಯಿನ ತಟ್ಟೆಯಮೇಲೆ ಗಮನ. ಸ್ವಾಮಿಗಳು ಇಂತಹವರ ಹಣವೆಂದು ಓದುತ್ತಿದ್ದರು. ಅದನ್ನು ಕೂಲೀಮಠದ ಶಾಂತರಾಜಯ್ಯ ಬರೆದುಕೊಳ್ಳುತ್ತಿದ್ದನು. ಅದು ಮುಗಿದಮೇಲೆ ಫಲಪೂಜೆಯಾಯಿತು. ಊರದೇವರುಗಳು, ನೆರೆದಿದ್ದ ಸ್ವಾಮಿಗಳು, ಜಂಗಮರು, ಗೌಡರು, ಪಟೇಲರು ಮುಂತಾದವರಿಗೆ ಕೊಡಬೇಕಾದ ವೀಳ್ಯಗಳನ್ನೆಲ್ಲಾ ಕೊಟ್ಟು ಬಂದಿದ್ದ ನೆಂಟರಿಗೆಲ್ಲಾ ಫಲವನ್ನು ಕೊಡಲಾಯಿತು. ಅಷ್ಟರಲ್ಲಿ "ಮುಯ್ಯಿ"

ಬಿದ್ದಿದ್ದ ತಟ್ಟೆಯಕಡೆಗೆ ಚಿಕ್ಕಲಿಂಗಪ್ಪನವರ ಸವಾರಿ ಬಂದಿತು. ಲೆಕ್ಕಾಚಾರವಾದಮೇಲೆ ಗಂಡಿಗೆಂದು ಬಂದಿದ್ದ ಒಟ್ಟು ನೂರಹನ್ನೆರಡುರೂಪಾಯಿಗಳನ್ನೂ ಪಟೇಲರು ಒಳಜೇಬಿಗೆ ಸೇರಿಸಿದರು. ಅದಕ್ಕೆ ಯಾರ ಅಭ್ಯಂತರವೂ ಇರಲಿಲ್ಲ.

ಸಂಜೆ ಕಜ್ಜಾಯದ ಊಟವಾಯಿತು. ಅಷ್ಟುಹೊತ್ತಿನ ರಾತ್ರಿಯಲ್ಲೇ ಮುಕ್ಕಾಲು ಭಾಗ ನೆಂಟರೆಲ್ಲ ಹೊರಟುಹೋದರು. ತುಂಡುಗೋಡೆಯ ಹಜಾರದ ಸುತ್ತಲೂ ರೇಶ್ಮೇ ಹುಳುವಿನ “ಚಂದ್ರಿಕೆ” ತಟಿಗಳನ್ನು ನಿಲ್ಲಿಸಿ, ಮರೆಮಾಡಿ ಬೀಗರುಗಳ ಕಡೆಯವರಿಗೆ ಬಿಟ್ಟುಕೊಡಲಾಗಿತ್ತು. ಅಲ್ಲಿದ್ದ ಎರಡು ದಿನಗಳಲ್ಲಿ ಪುಟ್ಟತಾಯಿಗೆ ತನ್ನ ವಾರಗಿತ್ತಿಯರ ಪರಿಚಯವಾಯಿತು. ಅವರಿಬ್ಬರೂ ತಮ್ಮ ಕಿರಿಯ ವಾರಿಗಿತ್ತಿಯನ್ನು ಬಹಳ ಪ್ರೀತಿಯಿಂದ ಮಾತನಾಡಿಸಿದರು. ಅತ್ತೆಯಿಲ್ಲವೆಂಬ ಸಂತೋಷದ ಜೊತೆಗೆ ವಾರಗಿತ್ತಿಯರ ಪ್ರೀತಿಯ ಮಾತುಗಳಿಂದ ಪುಟ್ಟತಾಯಿಗೆ ಇನ್ನಷ್ಟು ಸಂತೋಷ ಬಂದು ಸೇರಿತು.

ನಾಲ್ಕನೆಯ ದಿವಸ ಹೆಣ್ಣು ತನ್ನ ಜನರೊಡಗೂಡಿ ತನ್ನೂರಿಗೆಹಿಂದಿರುಗಿತು. ಹಿಂದಿರುಗಿದ ಮಗಳ ಮುಖದ ಗೆಲುವನ್ನು ಕಂಡು ತಾಯಕ್ಕನ ಮನಸ್ಸು ಹಗುರವಾಯಿತು. ಇಬ್ಬರು ಮಕ್ಕಳಲ್ಲಿ ಒಂದರ ಜವಾಬ್ದಾರಿ ಸಂಪೂರ್ಣವಾಗಿ ಕಳೆದುಹೋಯಿತೆಂದು ನಿಟ್ಟುಸಿರಿಟ್ಟಳು. ಇಷ್ಟು ಬೇಗ ಆ ಜವಾಬ್ದಾರಿಯನ್ನು ಇಷ್ಟು ದಕ್ಷತೆಯಿಂದ ನೀಗಿಕೊಂಡದ್ದಕ್ಕೆ ತನಗೆ ತಾನೇ ಹೆಮ್ಮೆಪಟ್ಟುಕೊಂಡಳು. ಗಂಡನ ಮನೆಯ ಹೆಣ್ಣು ವ್ಯಕ್ತಿಗಳು ಮಗಳ ವಿಷಯದಲ್ಲಿ ಹೇಗೆ ನಡೆದುಕೊಂಡರೆಂಬುದನ್ನು ಕೇಳಿದಮೇಲಂತೂ ತಾಯಕ್ಕನಿಗೆ ಎಂದಿಗೂ ಇಲ್ಲದ ಶಾಂತಿ ಸಿಕ್ಕಿಬಿಟ್ಟಹಾಗಾಯಿತು.

ಆಷಾಢ ಮಾಸದಲ್ಲಿ ಮಗಳು ಮನೆಯಲ್ಲೇ ಇರಲು ಬರುವುದಕ್ಕೆ ಮುಂಚೆ ಮಾದೇವು ಎರಡು ಬಾರಿ ‘ಅಳೀಗೂಳಿ’ಗೆ ಬಂದಿದ್ದನು. ತಾಯಕ್ಕನಿಗೆ ಅಳಿಯನಿಗೆ ನಾಲ್ಕಾರು ಬಗೆ ಸಿಹಿ ಮಾಡಿ ‘ಇಕ್ಕ’ಬೇಕೆಂಬ ಆಸೆ ಇತ್ತು. ಆದರೆ ಮಲ್ಲೇಶನ ಬುದ್ಧಿಮೇಷ್ಟ್ರು ಮನೆಗೆ ಒಪ್ಪಿಕೊಂಡಿದ್ದಂತೆ ಒಂದಷ್ಟು ರಾಗಿಯನ್ನು ತೆಗೆದುಕೊಂಡುಹೋಗಿ ಕೊಡಬೇಕಾಗಿದ್ದುದರಿಂದ

ಮೊದಲನೇ ಸಾರಿ, ಮೆಣಸಿನಕಾಯನ್ನು ತೆಗೆದುಕೊಂಡುಹೋಗಬೇಕಾಗಿದ್ದುದರಿಂದ ಎರಡನೇ ಸಾರಿ, ಅಳಿಯನ ಊಟದಲ್ಲಿ ವೈಭವ ಕಡಿಮೆಯಾಗಿಯೇ ಇತ್ತು. ಮೊದಲನೇ ಬಾರಿ ಒಬ್ಬಟ್ಟು, ಎರಡನೇ ಬಾರಿ 'ಕರ್ಜೀಕಾಯಿ' ಮಾಡಿ, ವೀಳ್ಯಕ್ಕೆ ಆರಾರು ರೂಪಾಯಿಟ್ಟಿದ್ದಳು. ಮಾದೇವು ಆರರ ಪೈಕಿ ಒಂದು ರೂಪಾಯನ್ನೇ ತೆಗೆದುಕೊಳ್ಳುತ್ತಿದ್ದನು. ಎರಡು ಬಾರಿಯೂ ಕಾಳಕ್ಕ ಐದುರೂಪಾಯನ್ನೇ ತೆಗೆದುಕೊಳ್ಳಬೇಕೆಂದುಒತ್ತಾಯ ಮಾಡಿದಮೇಲೆ ಮಾದೇವು ಐದೈದು ರೂಪಾಯಿ ತೆಗೆದುಕೊಂಡಿದ್ದನು.

ಅವನು ಎರಡನೇ ಬಾರಿ ಬಂದಿದ್ದಾಗ ಬೆಂಗಳೂರಿನ ಮೊದಲಿಯಾರರು ಬಂದಿದ್ದರು. ಜಗಲಿಯಮೇಲೆ ಬೀಡಿ ಎಳೆಯುತ್ತಾ ಕುಳಿತಿದ್ದ ಮಾದೇವುವನ್ನು ಕಂಡು ಅವನಿಗೇ ನಮಸ್ಕರಿಸಿ, ಆ ಮನೆಯ ವೃತ್ತಾಂತವನ್ನು ಕೇಳಿದರು. ಮಾದೇವು ಅವರನ್ನು ಕುಳಿತುಕೊಳ್ಳುವಂತೆ ಹೇಳಿ, ಹೆಂಡತಿಗೆ ಯಾರೋ ಬಂದಿರುವರೆಂಬುದನ್ನು ಒಳಕ್ಕೆ ತಿಳಿಸುವಂತೆ ಹೇಳಿ ತಾನು ತೋಟದಕಡೆಗೆ ಹೋದನು.

ತಾಯಕ್ಕ, ಮೊದಲಿಯಾರರು ಬಹಳ ಹೊತ್ತು ಮಾತನಾಡಿದರು. ಮೊದಲಿಯಾರರು ನಿಷ್ಠುರ ಲೇವಾದೇವಿಗಾರರಾಗಿದ್ದರೆ ತಾಯಕ್ಕ "ನನಗೆ ಈಗ ಅನುಕೂಲವಿಲ್ಲ. ಇನ್ನೂ ಒಂದೆರಡು ವರ್ಷಗಳವರೆಗೆ ಯಾರಾದರೂ ದುಡ್ಡು ಕೊಡುವವರನ್ನು ಹುಡುಕಿ ನೋಡುತ್ತೇನೆ" ಎನ್ನಬಹುದಾಗಿತ್ತು. ಆದರೆ ಮೊದಲಿಯಾರರು ಬಹಳ ನಯವಾದ ಪ್ರಾಣಿ. ಮಾತಿನಲ್ಲಿ ಅವರು ಗಾಳಿಯನ್ನೂ ಹೆಚ್ಚು ಅಲುಗಾಡಿಸುವವರಲ್ಲ. ಆದುದರಿಂದ ತಾಯಕ್ಕ ತಾನು ಮೊದಲೇ ನಿರ್ಧರಿಸಿಕೊಂಡಿದ್ದಂತೆ ವಿಧಿಯಿಲ್ಲದೇ ಚಿಕ್ಕಲಿಂಗಪ್ಪನವರಲ್ಲಿ ಸಾಲ ಮಾಡಿ ಅವರ ಸಾಲ ತೀರಿಸುವುದಾಗಿ ಹೇಳಿದಳು. ಮೊದಲಿಯಾರರು, ತಾಯಕ್ಕ ಅಳಿಯನಿಗಾಗಿ ಮಾಡಿದ್ದ ತಿಂಡಿಯನ್ನು ತಿಂದು, ಅರ್ಧ ಪಾವಿನಷ್ಟು ಹಾಲು ಕುಡಿದು ತಮ್ಮ ದಾರಿ ಹಿಡಿದರು. ಮಾದೇವು ಆ ಬಾರಿ ಒಬ್ಬನೇ ಊರಿಗೆ ಹೋಗಬೇಕಾಗಿತ್ತು. ಪುಟ್ಟತಾಯಿಯ ಮೂಲಕ ತಾಯಕ್ಕ, ಚಿಕ್ಕಲಿಂಗಪ್ಪನವರನ್ನು ಕಿರೀಕಾಟಿಗೆ ಬರಹೇಳಬೇಕೆಂದು ಮಾದೇವೂಗೆ ಹೇಳಿಕಳುಹಿಸಿದಳು.

ಅದನ್ನೇ ಕಾಯುತ್ತಿದ್ದವರಂತೆ ಚಿಕ್ಕಲಿಂಗಪ್ಪನವರು ಕಿರೀಕಾಟೆಯ ತಾಯಕ್ಕನ ಮನೆಯ ಮುಂದೆ ಮೂರೇ ದಿನಗಳಲ್ಲಿ ಹಾಜರಾದರು. ತಾಯಕ್ಕ ಒಂದು ಸಣ್ಣ ಆತಿಥ್ಯವನ್ನು ನಡೆಸಿದಳು. ಮೊದಲಿಯಾರರು ಬಂದಿದ್ದ ಸುದ್ದಿಯನ್ನು ಹೇಳಿದಳು. ಚಿಕ್ಕಲಿಂಗಪ್ಪನವರಿಂದಲೇ ತನ್ನ ಉದ್ಧಾರವಾಗಬೇಕಾಗಿದೆಯೆಂದು ಅವರನ್ನು ಹೊಗಳಿದಳು. ಚಿಕ್ಕಲಿಂಗಪ್ಪನವರೂ ಕೂಡ, ಇಂತಹ ಉಪಕಾರಕ್ಕೆ ಸಿದ್ಧರಾಗಿಬಂದಿದ್ದರೂ ಉಪಚಾರದ ಮಾತುಗಳಲ್ಲಿಯೇ ತಮ್ಮಲ್ಲಿ ಈಗ ಅಷ್ಟು ದೊಡ್ಡ ಮೊಬಲಗು ಯಾವುದೂ ಇಲ್ಲವೆಂದು ಹೇಳಿದರು. ತಾಯಕ್ಕ ಇನ್ನೊಂದೆರಡುಮೂರುಬಾರಿ ಒತ್ತಾಯ ಮಾಡಿ ಕೇಳಲಿ ಎಂಬುದು ಅವರ ಅಂತರ್ಯದ ವಿಷಯವಾಗಿತ್ತು.

ಅದಕ್ಕಿಂತ ತಾಯಕ್ಕ ಮುಗುಳುನಗೆ ನಗುತ್ತಾ ಒಂದೇ ಒಂದು ಬಾರಿ ಪುನಃ "ಈ ಕೆಲಸ ನೀವು ಮಾಡಿಕೊಡಲೇಬೇಕು" ಎಂದಿದ್ದರೆ ಸಾಕಾಗಿತ್ತು. ಆದರೆ ಚಿಕ್ಕಲಿಂಗಪ್ಪನವರು ನಿರೀಕ್ಷಿಸಿದ್ದ ಮುಗುಳುನಗೆ ಸಾಮಾನ್ಯವಾದುದಲ್ಲ. ತಾಯಕ್ಕನ ಮುಖದಲ್ಲಿ ಕಷ್ಟಕ್ಕೆ ಸಿಕ್ಕಿರುವ ನೋವು ಕಾಣುತ್ತಿತ್ತೇ ವಿನಃ ಅದರಲ್ಲಿ ಮುಗುಳುನಗೆಯು ಮೂಡುವುದೆಂದು ಕಾಯುವುದು ಕೇವಲ ಭ್ರಾಂತಿಮಾತ್ರವಾಗಿತ್ತು. ಕೊನೆಗೂ ಆ ನಗೆಯ ಸೂಚನೆಯನ್ನು ಕಾಣದ ಚಿಕ್ಕಲಿಂಗಪ್ಪನವರು "ಇನ್ನೊಂದು ದಿವಸ ಬಂದು ಹೇಳುವೆ" ನೆಂದು ಹೇಳಿ ತಮ್ಮೂರಿಗೆ ಹೊರಟುಹೋದರು.

ಪಾಪ, ಚಿಕ್ಕಲಿಂಗಪ್ಪನವರುತಾನೇ ಯಾರುಯಾರಿಗೆಂದು ದುಡ್ಡು ಒದಗಿಸಬಲ್ಲರು! ತಮಗೆ ದೇವರು ಅಲ್ಪಸ್ವಲ್ಪ ಅನುಕೂಲ ಕೊಟ್ಟಿರುವುದೂ ತಮ್ಮನ್ನು ಹಿಂಸಿಸುವುದಕ್ಕಾಗಿಯೇ ಎಂದು ಅವರು ಹೇಳಿಕೊಳ್ಳುತ್ತಿದ್ದುದುಂಟು. ಅವರ ದುಡ್ಡೆಲ್ಲ ತೀರಿಸಲಾರದವರ ಹತ್ತಿರವೇ ಹೋಗಿ ಸೇರಿಕೊಂಡು ಬಿಟ್ಟು ಅವರಿಗೆ ತುಂಬಾ ತೊಂದರೆಯಾಗಿ ಹೋಗಿತ್ತಂತೆ. ಅವರ ಹಿಂಬಾಲಕರು ಅವರ ಕಷ್ಟಗಳಿಗೆ ಮತ್ತಷ್ಟು ಬಣ್ಣ ಕಟ್ಟಿಕೊಳ್ಳುತ್ತಿದ್ದರು. ಅದನ್ನವರು ಸಿಕ್ಕಿದವರೆದುರಿನಲ್ಲೆಲ್ಲಾ ತೋಡಿಕೊಳ್ಳುತ್ತಿದ್ದರು.

ಹಿಂದಿರುಗಿಸಲಾರದ ಅವರ ಸಾಲಗಾರರ ಪೈಕಿ 'ಮಾದೇವು' ಒಬ್ಬ ಮುಖ್ಯವಾದವನು. ಅವನು ಚಿಕ್ಕಲಿಂಗಪ್ಪನವರ ಲೆಕ್ಕದಪ್ರಕಾರ ಸಾನೂರು

ರೂಪಾಯಿಗಳನ್ನು ಕೊಡಬೇಕಾಗಿತ್ತು. ಅವರಪ್ಪ ಅವನ ಮದುವೆಯಲ್ಲಿ ತೆಗೆದುಕೊಂಡಿದ್ದದ್ದು ಮುನ್ನೂರು. ಇಷ್ಟಲ್ಲದೇ ಮಧ್ಯೆ ನಿಂತು ಮಾಡಿಸಿದ ಮದುವೆಯೆಂದು, ಚಪ್ಪರದ ಸಾಮಾನು, ಅಂಗಡಿಯ ಸಾಮಾನುಗಳ ಪೈಕಿ ನಲವತ್ತೈದು ರೂಪಾಯಿಗಳಷ್ಟು ಚಿಕ್ಕಲಿಂಗಪ್ಪನವರ ಕೈಯಿಂದ ಬಿದ್ದಿತ್ತಂತೆ. "ಏನೋ ಧರ್ಮದ ಖರ್ಚು—ಅದನ್ನು ಬಾಯಲ್ಲಿ ಆಡ ಬಾರದು" ಎಂದವರು ಕೊನೆಯಲ್ಲಿ ಹೇಳುವುದನ್ನು ಮಾತ್ರ ಬಿಡುತ್ತಿರಲಿಲ್ಲ.

ಇನ್ನು ಹೊಸದಾಗಿ ಈ ತಾಯಕ್ಕನ ತಾಪತ್ರಯಬೇರೆ. ಅವಳಿಗೀಗ ಬೇಕಾಗಿರುವುದು ಸಾವಿರದ ಮುನ್ನೂರು ರೂಪಾಯಿಗಳು. ಬೆಂಗಳೂರಿನ ಮೊದಲಿಯಾರರ ಸಾಲವೇ ಸಾವಿರರೂಪಾಯಿಗಳು. ಅದಕ್ಕೆ ಎರಡು ಮೂರು ವರ್ಷದ ಬಡ್ಡಿ–ಎಂದರೆ ಇನ್ನೂರು ರೂಪಾಯಿಗಳಿಗೆ ಕಡಿಮೆ ಇಲ್ಲ. ಆ ಸಾವಿರದಿನ್ನೂರಕ್ಕೆ "ರಿಜಿಸ್ಟರ್" ಖರ್ಚು ಒಂದು ನೂರು ರೂಪಾಯಿ. ಈ ಲೆಕ್ಕದಲ್ಲಿ ಅವಳು ಕೇಳುತ್ತಿದ್ದಾಳೆ. ಆದರೆ ಕೊಡುತ್ತೇನೆಂದು ಒಪ್ಪಿ ಕೊಂಡಮೇಲೆ ಪತ್ರಕ್ಕೆ ರುಜುಹಾಕಿ ಬರಿಕೈಯಲ್ಲಿ ಊರಿಗೆ ಹಿಂದಿರುಗಲು ಅವಳು ಇಷ್ಟಪಡುತ್ತಾಳೆಯೆ ? ಹೊಸ ಅಳಿಯ, ಓದುವ ಮಗ, ಸಂಸಾರ ತಾಪತ್ರಯ ಎಂದು ಇನ್ನೊಂದೆರಡು ನೂರುಗಳನ್ನು ಕೇಳಿಯೇ ಕೇಳು ತ್ತಾಳೆ. ಸಾವಿರದೈನೂರು. ತಮ್ಮದೇ ಹಳೆಯಸಾಲ ಒಂದುನೂರು. ಪುಟ್ಟತಾಯಿಯ ಮದುವೆಯಲ್ಲಿ ತಾಯಕ್ಕನ ಕೈಯಲ್ಲೇ ಕೊಟ್ಟದ್ದು ಮುನ್ನೂರು. ತಾವು ಜವಾಬ್ದಾರಿ ಹೊತ್ತುಕೊಂಡಿದ್ದ ಕೆಲವು ವಿಭಾಗ ಗಳಿಂದ ಆದ ಖರ್ಚು ಒಂದುನೂರು ರೂಪಾಯಿ. ಲೆಕ್ಕಕ್ಕೆಸಿಗದೇಹೋದ ಹೆಣ್ಣಿನ ಕಡೆಯಿಂದ ತಮಗೆ ಆದ ಖರ್ಚು ಒಂದು ಅರವತ್ತುರೂಪಾಯಿ— ಅದಿರಲಿಪಾಪ.... ಪುಣ್ಯಕೆಲಸ ಮಾಡಿ ಆಡಬಾರದು—ಒಟ್ಟು ಎರಡುಸಾವಿರ ರೂಪಾಯಿಗಳು. ಎಲ್ಲಿಂದ ತರಬೇಕು ? ಕೊಡಬೇಕಾಗಿರುವವರು ಕೊಡು ವುದೇ ಇಲ್ಲ.

ಇದು ಚಿಕ್ಕಲಿಂಗಪ್ಪನವರ ಹೊರಗಿನ ವಾದ. ಒಳಗಿನ ಏರ್ಪಾಡು ಗಳು ಆಗಲೇ ಮುಗಿದಿದ್ದವು. ಆಗತಾನೇ ಕಡಲೇಕಾಯಿನ ಬಾಬ್ತು ಅವರ ಕೈಯಲ್ಲಿ ಒಂದುಸಾವಿರ ರೂಪಾಯಿಗಳಿತ್ತು. ಇನ್ನವರಿಗೆ ಬೇಕಾಗಿದ್ದದ್ದು

ಮುನ್ನೂರೇ ರೂಪಾಯಿಗಳು. ಇನ್ನುಳಿದ ಹಣ ಹೇಗೆ ಹೇಗೋ ಅಂತೂ ಈಗಾಗಲೇ ಕೊಟ್ಟು ಆಗಿಹೋಗಿತ್ತು. ಮುನ್ನೂರು ರೂಪಾಯಿಗಳನ್ನು ಒದಗಿಸಿಕೊಳ್ಳುವುದೊಂದು ದೊಡ್ಡ ವಿಷಯವಾಗಿತ್ತೆ ?

ಮೊದಲಿಯಾರರ ಕಿರೀಕಾಟಿಯ ತೋಟವನ್ನು ಖರೀದಿಮಾಡಿಕೊಳ್ಳ ಲಿದ್ದವರು ಬೆಂಗಳೂರಿನ ರೇಷ್ಮೆವ್ಯಾಪಾರಿಗಳೊಬ್ಬರು. ಅವರಂಗಡಿಯಲ್ಲಿ ಗುಜ್ಜಗೆರೆಯ ಕಳಸಯ್ಯನಮಗ ಶಿವಣ್ಣ ಕೆಲಸಕ್ಕಿದ್ದವನು. ಶಿವಣ್ಣನ ಎಂಟು ವರ್ಷಗಳ ಸೇವೆಯಿಂದ ಅವನಿಗೆ ಸಾಹುಕಾರರ ಮೇಲೆ ಸಾಕಾ ದಷ್ಟು ಪ್ರಭಾವವಿತ್ತು. ಶಿವಣ್ಣ ಚಿಕ್ಕಲಿಂಗಪ್ಪನವರಿಗೆ ಮೂರು ತಲೆಯ ದಾಯಾದಿಯೂ ಹೌದು. ಆ ಸಂಬಂಧದಲ್ಲಿ ಆ ರೇಷ್ಮೆ ಸಾಹುಕಾರರ ಪರಿಚಯಮಾಡಿಕೊಳ್ಳಬೇಕೆಂಬ ಒಂದು ಆಸೆ ಚಿಕ್ಕಲಿಂಗಪ್ಪನವರಲ್ಲಿತ್ತು. ಕಿರೀಕಾಟಿಯ ಸುತ್ತಿನ ಜನಗಳೆಲ್ಲರಿಗಿಂತ ಮುಂಚೆ ತಾವು ಹೋಗಿ ಅವ ರನ್ನು ಕಂಡುಬರಬೇಕೆಂಬ ಆತುರವೂ ಇತ್ತು.

ತಾವು ನಿರೀಕ್ಷಿಸಿದ ಮುಗುಳುನಗೆ ತಾಯಕ್ಕನ ಮುಖದಮೇಲೆ ಮೂಡದೇ ಹೋದರೂ ಚಿಕ್ಕಲಿಂಗಪ್ಪನವರು ಅವಳಿಗೆ ಸಹಾಯ ಮಾಡಲು ಒಪ್ಪಲೇಬೇಕಾಯಿತು. ಈ ವ್ಯವಹಾರದಲ್ಲಿ ಅವಳಿಗಿಂತ ಅವಳ ಕೆಲಸ ದಲ್ಲಿ ಇವರಿಗೇ ಆತುರವಿರುವುದು ಕಂಡುಬಂದಿತು. ತಾಯಕ್ಕ ತನ್ನ ಸಂಸಾರದ ದರದುಗಳಿಗೆಂದು ಹಣವನ್ನು ಬೇಡಲಿಲ್ಲ. ಚಿಕ್ಕಲಿಂಗಪ್ಪನವರೇ ಯಾವುದಕ್ಕಾದರೂ ಬೇಕಾಗಬಹುದೆಂದು ಐವತ್ತು ರೂಪಾಯಿಗಳನ್ನು ಅವಳ ಕೈಯಲ್ಲಿ ಕೊಟ್ಟು ಲೆಕ್ಕ ಸರಿಬರುವಂತೆ ಸಾವಿರದ ಏಳುನೂರು ಐವತ್ತು ರೂಪಾಯಿಗಳಿಗೆ ತಾಯಕ್ಕನ ಆಸ್ತಿಗಳೆಲ್ಲವನ್ನೂ ಆಧಾರ ವೆಂದು ಕಾಣಿಸಿ ಪತ್ರ ಬರೆಸಿದರು. ಕಾಗದಪತ್ರಗಳನ್ನು ಬರೆಯುವುದರಲ್ಲಿ ಪ್ರಳಯಾಂತಕನೆಂದು ಹೆಸರುವಾಸಿಯಾಗಿದ್ದ ಗುಜ್ಜಗೆರೆಯ ಶಾಂತರಾಜ ಯ್ಯನೇ ಪತ್ರವನ್ನು ಬರೆದದ್ದು. ಪತ್ರ "ರಿಜಿಸ್ಟರ್" ಆಗುವುದಕ್ಕೆಮೊದಲೇ ಚಿಕ್ಕಲಿಂಗಪ್ಪನವರು ಬೆಂಗಳೂರಿಗೆ ಹೋಗಿ ಮೊದಲಿಯಾರರ ಹಣವನ್ನು "ಫೈಸಲ್"ಮಾಡಿ ಬರುವುದೆಂದೂ ಅವರ ಪ್ರಯಾಣದ ಖರ್ಚನ್ನು ತಾಯ ಕ್ಕನೇ ಕೊಡಬೇಕೆಂದೂ ತೀರ್ಮಾನವಾಗಿತ್ತು. ತಾಯಕ್ಕನ ಕೈಯ್ಯಲ್ಲಿ

ಆಗತಾನೇ ಕೊಟ್ಟಿದ್ದ ಐವತ್ತು ರೂಪಾಯಿಗಳಲ್ಲಿ ಇಪ್ಪತ್ತು ರೂಪಾಯಿಗಳು ಪಟೇಲರಿಗೇ ಹಿಂದಕ್ಕೆ ಬಂದವು.

ತಾಯಕ್ಕನ ವೆಚ್ಚದಲ್ಲಿ ಚಿಕ್ಕಲಿಂಗಪ್ಪನವರ ಬೆಂಗಳೂರು ಯಾತ್ರೆಯು ಯಶಸ್ವಿಯಾಗಿ ನೆರವೇರಿತು. ಹೋಗಿ ಮೊದಲಿಯಾರರಿಗೆ ಉಪಕಾರ ಮಾಡುವವರಂತೆ ಹಣಕೊಟ್ಟು ಅವರೇ "ಮೆಹರ್ಬಾನಿ"ಯನ್ನು ಪಡೆದು ಕೊಂಡರು. ರೇಷ್ಮೆಯ ಅಂಗಡಿ ಸಾಹುಕಾರರನ್ನೂ ಕಂಡು ಸ್ನೇಹ ಬೆಳೆಸಿ ಕೊಂಡು ಕಿರಿಕಾಟೇ ತೋಟವನ್ನು ಸರಿಯಾದವರಿಗೆ ಗುತ್ತಿಗೆಗೆ ಕೊಡಿಸುವು ದಾಗಿ ಅವರಿಗೆ ವಾಗ್ದಾನ ಮಾಡಿದುದೂ ಆಯಿತು. ಗುಜ್ಜಗೆರೆ ಸಾಹೇಬರ ಅಂಗಡಿಗೆ ಜವಳಿಯನ್ನು ಕೊಂಡುದಾಯಿತು. ದಿನಸೀ ಅಂಗಡಿಯ ಸಂಕೇಗೌಡನಿಗೆ ಬೇಕಾಗಿದ್ದ ಸೋಪು, ತಲೆಗೆ ಹಾಕುವ ಸುವಾಸನೆ ಎಣ್ಣೆ, ಪರ್ಸಾರಿ ಸಾಮಾನುಗಳು, ಸ್ಲೇಟು, ಬಳಪಗಳೂ ಮುಂತಾದ ಪದಾರ್ಥಗಳನ್ನು ಕೊಂಡುದ್ದು ಆಯಿತು. ಸುರಕ್ಷಿತವಾಗಿ ಊರಿಗೆ ಬಂದು ಸೇರಿದ್ದೂ ಆಯಿತು.

ಅಷ್ಟೇ ಸುಸೂತ್ರವಾಗಿ ಸೋಮವಾರದ ದಿನ ತಾಯಕ್ಕನ ಪತ್ರದ ರಿಜಿಸ್ಟರೂ ಆಗಿ ಹೋಯಿತು. ತಾಯಕ್ಕನಿಗೆ ತನ್ನ ಗಂಡನ ಮನೆಯ ಆಸ್ತಿಯೆಲ್ಲವನ್ನೂ ಚಿಕ್ಕಲಿಂಗಪ್ಪನವರಿಗೆ ಕೊಟ್ಟು ಬಿಟ್ಟಷ್ಟು ದುಃಖ ವಾಯಿತು. ಪಟೇಲರಿಗೆ ಅದೆಲ್ಲ ದಕ್ಕಿಹೋದಷ್ಟು ಸಂತೋಷವೂ ಆಯಿತು. ಹಾಗೆಯೇ ತಾಯಕ್ಕನಿಗೆ ಮೆಲ್ಲನೆ ಒಂದು ಸೂಚನೆಯನ್ನು ಕೊಟ್ಟರು.

"ಅಲ್ಲಾಕಣ್ತಾಯಿ. ನಿನ್ನ ಮಗನೂ ಕಿರೀಕಾಟೀಲಿರಕ್ಕಿಲ್ಲ. ನಿನ್ನ ಮಗಳೂ ಇನ್ನೇನು ಗುಜ್ಜಗೆರೆಗೆ ಬಂದು ಬುಡ್ತಳೆ. ನೀನೊಬ್ಬೇ ಅಲ್ಯಾ ಕಿರಬೇಕು? ನಿನ್ನ ಮಗಳ ಜೋತೇಲಿ ಇರಕ್ಕೆ ಏರ್ಪಾಡ್ಮಾಡ್ಕಂಡು ಬುಡು"

ತಾಯಕ್ಕನಿಗೆ ಆ ಸಲಹೆ ಭಯಂಕರವಾಗಿ ತೋರಿತು. ಅದಕ್ಕೆ ಸರಿಯಾಗಿ ಹೇಳಿದಳು.

" ಅದ್ಯಾಕಣ್ಣಯ್ಯ, ಸಾಲಾ ಮಾಡ್ದಾಕ್ಷಣ, ಆಸ್ತಿಯೆಲ್ಲಾ ಹಾಳಾಗ್ಹೋಯ್ತು? ಮಗಳ ಮನೆಗೆ ಬಂದು ಸೇರ್ಕಂಡ್ರೆ ಸಾಲಾ ಎಂಗೆ ತೀರದು? ಚೆನ್ನಾಗೇಳಿದ್ರಿ! ಹೊಲ ಮನೇನೆಲ್ಲಾ ಪಾಳು ಬೀಳಸಬುಟ್ಟು ಮಗನತಲೇ ಮೇಲೆ ಕಲ್ಲೆಳೆದುಬುಡ್ಲಾ?"

ಚಿಕ್ಕಲಿಂಗಪ್ಪನವರು ತಬ್ಬಿಬ್ಬಾಗಿ ಹೇಳಿದರು.

"ಛೆ ಛೆ! ಅಂಗಲ್ಲಾ ನಾ ಏಳಿದ್ದು. ಒಳ್ಳೆಯೋರಿಗೆ ಗುತ್ತಿಗೇ ಗಿತ್ತಗೇ ಕೊಟ್ಟುಬಿಟ್ಟು ತಾನಾಗೇ ಸಾಲಾನೂ ತೀರೋಹಂಗೆ ಏರ್ಪಾಡ್ಮಾಡ್ಬುಟ್ಟು ನಮ್ಮೂರ್ಗೇ ಬಂದ್ಬುಟ್ರೆ ಚಂದಾ ಅಂದೆ. ಮಗಳ್ಗೂ ಒತ್ತಾಸೆಯಾಗಿರುತ್ತದೆ. ಕರ್ಚೂ ಕಮ್ಮಿ ಆಯ್ತದೆ. ಸಾಲಾನೂ ತೀರ್ತದೆ—. ಅದಕೆ ಏಳ್ದೆ."

ಚಿಕ್ಕಲಿಂಗಪ್ಪನವರ ಬುದ್ಧಿವಂತಿಕೆ ಮೆಚ್ಚುವಂತಿದ್ದರೂ ಅದರಹಿನ್ನೆಲೆಯಲ್ಲಿದ್ದ ಅವರ ಕೆಟ್ಟತನವನ್ನು ಕಂಡುಹಿಡಿದ ತಾಯಕ್ಕ ಹೇಳಿದಳು.—

" ಅದನ್ನು ಮಾತ್ರ ಸ್ವಪ್ನದಲ್ಲೂ ಮರೆತುಬುಡಿ. ನಾನು ಮಗಳ ಆಸ್ರಯಕ್ಕೆ ಎಂದಿಗೂ ಬರೋಳಲ್ಲ. ಯಾಕೆ ನನಗೇನು ಗಂಡುಮಕ್ಕಳಿಲ್ಲವಾ? ಮಲ್ಲೇಸಾ ಈವತ್ತು ಪೋರ—ನಾಳೇ ಧೀರ. ಅಲ್ಲಾ—ಇಷ್ಟಕ್ಕೂ ಮಗಳ ಮನೇಗೆ ಬರಕ್ಕೆ ನನ್ನ ಅಳಿಯನಿಗೇನು ಸೊತಂತ್ರಯಿರದು? ಇನ್ನೂ ಅದು ಅಪ್ಪನ ಕೈಕೆಳಗಿನ ಹೈದ"

ಚಿಕ್ಕಲಿಂಗಪ್ಪ, ಅವಳ ಮಾತನ್ನೇ ಉಪಯೋಗಿಸಬೇಕೆಂಬ ಚಪಲ ಬಂದು ಹೇಳಿದರು.—

"ನಿನ್ನ ಅಳಿಯನೂ ಈವತ್ತು ಪೋರ—ನಾಳೆ ಧೀರ ಅಲ್ಲವಾ?"

ಆ ಮಾತಿನ ಅರ್ಥದಲ್ಲಿ ತಾಯಕ್ಕನಿಗೆ ಮುಂದಾಗುವ ಯಾವುದೋ ಅನಿಷ್ಟದ ಛಾಯೆ ಕಾಣಿಸಿತು. ಅದನ್ನು ಸರಿಯಾಗಿ ತಿಳಿದುಕೊಳ್ಳಬೇಕೆನ್ನಿಸಿತು. ತಾನಾಗಿಯೇ ಅದನ್ನು ಬೆಳೆಸಿ ಕೇಳಿದಳು.—

" ಅಂಗಂದ್ರೇನಣ್ಣಯ್ಯ? ಏನು ಸದ್ಯದಲ್ಲೇ ಅಣ್ಣತಮ್ಮಂದ್ರು ಭಾಗ ಆಯ್ತಾರೇ ಅಂತ ಏಳ್ತಾಇದ್ದೀರಲ್ಲ"

ತಾಯಕ್ಕನೂ ಪೆದ್ದಿಯಲ್ಲವೆಂಬ ವಿಷಯ ಪಟೇಲರಿಗೆ ತಿಳಿದಂತಾಯಿತು. ತಾಯಕ್ಕ ಅದನ್ನು ಆಡುವಾಗ ಅದು ನನಗಿಷ್ಟವಿಲ್ಲದ ವಿಷಯ ಎಂಬಂತೆ ಆಡಿರಲಿಲ್ಲ. ಆದುದರಿಂದ ಚಿಕ್ಕಲಿಂಗಪ್ಪನವರು ಸ್ವಲ್ಪ ವಿವರವಾಗಿ ಹೇಳಲು ಮನಸ್ಸುಮಾಡಿದರು.—

“ ಅಯ್ಯೋ ಯಾಕೆ ಏಳ್ತೀಯೆ ತಾಯಿ ? ನಿನ್ನಳಿಯ ಮೂರು ಜನದ ಪೈಕಿ ಯೋಗ್ಯ. ಅವನ ಕಷ್ಟಾ ನೋಡ್ಲಾರ್ದೇ ಅವರ್ಮನೇಲಿ ದಿನಬೆಳಗಾದರೆ ನಡೀತಿದ್ದ ಕದನ ಕೇಳ್ಲಾರ್ದೆ, ನಾನೇ ಈ ಮದುವೆಗೆ ನಿಂತೆ. ಒಳ್ಳೇ ಕಡೆ ಸಂಬಂಧವಾದರೂ ಆಹುಡುಗನಿಗೆ ಸಿಕ್ಲೀ ಅಂದ್ಬುಟ್ಟು ಪುಟ್ಟತಾಯೀನೇ ತಂದೆ. ನೀನೇ ನೋಡ್ತಾ ಇರು. ಸೋಬನ ಆಗದೇ ತಡ ಮೂರು ಜನವೂ ಪಾಲಾದರೂ ಅಂತ ಮಡೀಕೋ”

ತಾಯಕ್ಕನಿಗೆ ಒಂದು ವಿಷಯ ತಿಳಿದಂತಾಯಿತು. ಪುಟ್ಟತಾಯಿಯ ಮದುವೆ ಇಷ್ಟು ತರಾತುರಿಯಲ್ಲಾಗುವುದಕ್ಕೆ ಮನೆ ಪಾಲಾಗಬೇಕಾಗಿರುವುದೇ ಕಾರಣವೆಂಬುದನ್ನು ತಿಳಿದು ಅವಳಿಗೆ ತುಂಬ ದುಃಖವಾಯಿತು. ಆ ಸಂವಾದವನ್ನು ಅಲ್ಲಿಗೇ ನಿಲ್ಲಿಸಿದಳು. ಅಂದಿನಿಂದ ಹೊಸ ಆಲೋಚನೆಗೆ ತೊಡಗಿದಳು. ಅಳಿಯ ಊರಿಗೆ ಬಂದಾಗ ಕಾಳಕ್ಕನ ಮುಖಾಂತರ ಅವರ ಮನೆಯ ಅಂತರಂಗವನ್ನು ವಿಚಾರಿಸಿಕೊಳ್ಳಬೇಕೆಂದುಕೊಂಡಳು. ಸಾಧ್ಯವಾದರೆ ಅಳಿಯನನ್ನು ಈ ಚಿಕ್ಕಲಿಂಗಪ್ಪನವರ ಸಹವಾಸದಿಂದ ದೂರಮಾಡಬೇಕೆಂದೂ ಮನಸ್ಸುಮಾಡಿಕೊಂಡಳು. ತಾನೇ ಅವರ ಹಿಡಿತಕ್ಕೆ ದಿನೇದಿನೇ ಒಳಗಾಗುತ್ತಿರುವುದು ಅವಳಿಗೆ ತಿಳಿದಿದ್ದರೂ ಅವಳಿಗೆ ಏನೋ ಧೈರ್ಯ. ತನ್ನನ್ನು ತಾನು ಕಾಪಾಡಿಕೊಳ್ಳುತ್ತೇನೆಂಬ ಯಾವುದೋ ಒಂದು ನಂಬಿಕೆ.

ಒಂದು ದಿನ ಕಾಳಕ್ಕನಿಗೆ ಈ ವಿಷಯವನ್ನೆಲ್ಲಾ ಹೇಳಿದಳು. ಕಾಳಕ್ಕ “ನಿನ್ನ ಅಳಿಯ ಬಂದಾಗ ಒಂದು ಮದ್ಯಾನ್ನ ನನ್ನ ಕರೀ” ಎಂದು ಆ ಕೆಲಸ ಮಾಡಲು ಒಪ್ಪಿಕೊಂಡಿದ್ದಳು. ಅದರಂತೆ ಮಾದೇವು ಮಾರನೇ ವರ್ಷ ದೀವಳಿಗೆಗೆ ಕಿರೀಕಾಟಿಗೆ ಬಂದಿದ್ದಾಗ ಕಾಳಕ್ಕನನ್ನು ಗೊತ್ತಾದ ಸಮಯದಲ್ಲಿ ಕರೆತಂದು ಬಿಟ್ಟಳು.

ಊಟವಾದ ಮೇಲೆ, ಬೀಡಿ ಎಳೆಯಲು ಹೊರಗೆ ಬಂದ ಮಾದೇವುವನ್ನು ಕಾಳಕ್ಕ ಮಾತನಾಡಿಸಿ ಜಗಲಿಯಮೇಲೇ ಕುಳ್ಳಿರಿಸಿಕೊಂಡು ತಾನೂ ಕುಳಿತಳು. ಕಾಳಕ್ಕ ಮಾತಿಗೆ ಮೊದಲು ಮಾಡಿದಳು.

" ನೀ ಒದ್ಕಂಡೀರೋ ವಲ್ಲಿಗೆ ಎಸ್ಟುಕೊಟ್ಟೆ ಮೊಗ ?"

" ಇಪ್ಪತ್ತ್ರೇಡಂತೆ ಕಣವ್ವ "

" ಇಪ್ಪತ್ತ್ರೇಡಂತೆ! ಇದ್ಯಾರು ತಗದೋರು ? ನಮ್ಮ ತಾಯಕ್ಕ ತೊಕ್ಕೊಟ್ಳಾ ? ನಂಗೆ ತೋರ್ಸ್ನೇ ಇರ್ನಿಲ್ಲ ? "

" ಇಲ್ಲಾ ಇದು ನಮ್ಮದೇ. ಆದರೆ ನಮ್ಮನೆ ಮದುವೆ ಜವಳಿ ತಂದವರು ಪಟೇಲಮಾವ "

"ಯಾರು ಚಿಕ್ಕಲಿಂಗಪ್ಪಣ್ಣನಾ. ಅವರು ನಿನಗೆ ಮಾವನಾಗಬೇಕಾ, ಅದೆಂಗೆ ? "

" ಸಂಬಂದ ಏನೂ ಇಲ್ಲ—ಸುಮ್ನೆ ಮಾವ ಅಂತ ಕೂಗದು. ಅವರೇ ಅಂಗೆ ಕೂಗು ಅಂತ್ಲೂ ಏಳವ್ರೆ."

" ಅದೇನು ಮೊಗ ನಿಮ್ಮನೇಗೂ ಅವರ್ಗೂ ಅಷ್ಟು ! "

" ಏನಿಲ್ಲ ಕಣವ್ವ. ಅವರಿಗೆ ನನ್ನ ಕಂಡರೆ ಒಸಿ ಪಿರೀತಿ. ನನ್ನ ಕಷ್ಟ ಸುಕ ವಿಚಾರಸ್ತರೆ. ಎಷ್ಟೋಸತಿ ನನ್ನ ಕಷ್ಟಾ ಕಾದವರೆ ! "

" ಕಷ್ಟಾ ಅರೀದ ಕಂದ ನೀನು ? ನಿನಗೆಂತಾ ಕಷ್ಟಾ ಮಾದೇವು "?

" ಕಷ್ಟಾ ! ಅಂದರೆ ಇನ್ನೇನೂ ಇಲ್ಲ. ನಮ್ಮಣ್ಣಂದಿರಿಬ್ಬರೂ ಸಂಸಾರೀಕರು. ಆರಂಬ, ಸಾರಂಬ, ಅದರ ಲಾಬ, ನಷ್ಟಾ, ಎಲ್ಲಾ ಅವರ್ದೇ. ದುಡ್ಡು ಕಾಸೆಲ್ಲ ಅವರ ಹೆಡ್ತೀರ ಪೆಟ್ಟಿಗೇ ಒಳಗೀಯೆ. ನನಗೆ ಒಂದು ಜಾತ್ರೆ, ಒಂದು ಸಂತೆ, ಒಬ್ಬರ ಮದುವೆ, ಒಸಗೇ ಅಂದ್ರೆ ಕೈಲಿ ಕಾಸಿಲ್ಲ. ಅಂತಾಕಾಲ್ದಲ್ಲಿ ಸೊಂತಾ ಮಾವನಿಗಿಂತ ಎಚ್ಚಾಗಿ ಪಟೇಲಮಾವ ನನ್ನ ಮಾನ ಕಾಪಾಡವ್ರೆ "

" ಅಂಗಾ .. ಏನೋ ಅಕ್ಕರೆ. ಈ ಕಾಲದಲ್ಲಿ ಇನ್ನೊಬ್ಬರ ಮಕ್ಕಳ ಮೇಲೆ ಇಷ್ಟು ಪ್ರೀತಿಯಾಗಿ ಕಾಸೂ ದುಡ್ಡೂ ಕೊಡೋದು ಅಪರೂಪ. ಏನೋ ದರ್ಮದ ನಮ್ಮಪ್ಪ."

" ದರ್ಮ ಏನೂ ಇಲ್ಲ ಕಣವ್ವ. ನಾನಂತೂ ಅದನ್ನ ಸಾಲಾ ಅಂತ್ಲೇ ಈಸ್ಕಳದು. ಒಂದಲ್ಲ ಒಂದಿನ ಆ ಹಣಾನ್ನೆಲ್ಲ ಅವರಿಗೆ ತೀರಸ್ಬುಡ್ತೀನಿ "

" ಅಂಗಾದರೆ ನಿನಗೆ ಅವರು ಸಾಲ ಕೊಟ್ಟಿದ್ದರಾ. ಇದು ನಿಮ್ಮ ಅಣ್ಣಂದಿರಿಗೆ, ಅಯ್ಯನಿಗೆ ತಿಳೀದಾ ?"

" ತಿಳೀಲೇಳವ್ವ. ತಿಳೀಲೀಂತೇ ನಾನೂ ಅವರತ್ರ ಈಸ್ಕಂಡು ಈಸ್ಕಂಡು "ಸೋಕಿ" ಮಾಡ್ತಾ ಇದ್ದದು. ಇಲ್ದೇ ಇದ್ರೆ ನಮ್ಮನೆಯೋರು ನನಗಿಷ್ಟುಬೇಗ ಲಗ್ನಮಾಡ್ತಾ ಇದ್ರಾ ?"

" ಓ ಪರವಾಗಿಲ್ಲ ಬುದ್ವಂತ ! ಅಂತೂ ಲಗ್ನ ಮಾಡ್ಕಂಡಾಯ್ತಲ್ಲ. ಇನ್ನು ಸಂಸಾರ ಕಟ್ಕಂಡಿದೀಯೆ. ಇನ್ಮೇಲೆ ಅಂಗೆಲ್ಲಾ ಮಾಡಕ್ಕಿಲ್ಲತಾನೆ? ಸಾಲಾ-ಸೂಲ ಮಾದೇವು ?"

" ನನಗೆ ಬರಬೇಕಾದ್ನ ನನಗೆ ಕೊಟ್ಟು ಬುಡ್ಲಿ. ಅಲ್ಲೀವರೆಗೆ ನನ್ನ ಖರ್ಚಿಗೇನ್ಮಾಡ್ಲೀ. ನಾನು ಪಾಲಾಗೋವಗೂ ಇಂಗೇನೇಮಾಡದು ?"

" ಐ ಅಂಗಂದ್ರಾದ್ದ ಮಾದೇವು ! ನಿಮ್ಮ ಪಟೇಲರು ಕೇಳ್ದಾಗ್ಲೆಲ್ಲಾ ಸಾಲಾ ಕೊಡ್ತರೆ ಅಂತಾ ನೀನು ಯಿಪರೀತ ಕರ್ಚಿಗೆ ಸುರು ಮಾಡ್ಕಂಡೆ ಒಳ್ಳೆದಾಗಲ್ಲ ಮಾದೇವು. ನನ್ನ ಮಾತು ಕೇಳು. ಅಷ್ಟು ಸುಲಬವಾಗಿ ಕೇಳಕೇಳ್ದಂಗೆ ಸಾಲಾ ಕೊಡೋರನ್ನ ನಂಬಬೇಡ."

" ನಮ್ಮ ಪಟೇಲಮಾವಾನಾ ? ಅವರ್ನ ಅಂಗನ್ನಬ್ಯಾಡವ್ವ. ನನ್ನ ಬಾಗಕ್ಕೆ ಅವರೇ ತಂದೆ-ತಾಯಿ ಎಲ್ಲ "

" ಇಲ್ಲಾ ಮಾದೇವು ನೀನು ಇನ್ನೂ ಹುಡುಗ. ಏನೂ ತಿಳೀದು. ಚಿಕ್ಕಲಿಂಗಪ್ಪನ ದುಡ್ಡಿನ ಸವಾಸ ನಿನಗೆ ಬೇಡ. "

" ನನಗೆ ಚೆಂದಾಗಿ ಗೊತ್ತದೆ ಕಣವ್ವ. ನಾನು ಯಾರ್ಕೈಲೂ ಏಳಿ ಸ್ಕೋಬೇಕಾಗಿಲ್ಲ. ಅವರು ನನ್ನ ಭಾಗಕ್ಕೆ ಒಳ್ಳೆಯೋರೇ "

" ಅಂಗಲ್ಲ—ನನ್ನ ಮಾತು ಕೇಳು ಮಾದೇವು. ಅವರೂ........"

" ಅವ್ವ....ನನಗೇನೂ ಏಳಬೇಡಿ. ನಾಕೇಳದಿಲ್ಲ. ನನ್ನ ಅತ್ರ ನೀವೇನೂ ಮಾತೇ ಆಡಬೇಡಿ "

ಮಾದೇವು ಸ್ವಲ್ಪ ಸಿಡುಕಿನಿಂದಲೇ ಆ ಮಾತು ಹೇಳಿ ಮುಗಿಸಿದ. ಕಾಳಕ್ಕನಿಗೆ ಕೊಂಚ ಮುಖಭಂಗವಾದಂತಾಗಿದ್ದರೂ ಮಾದೇವೂವಿನ ಮನಸ್ಸನ್ನು ಅಷ್ಟು ತಿಳಿದುಕೊಂಡಂತಾಗಿತ್ತು ಅದನ್ನು ತಂದು ತಾಯಕ್ಕನಿಗೆ ತಿಳಿಸಿದಳು.

ತಾನು ಮಾಡಿದ ಮಗಳ ಮದುವೆ ಹಿಂದುಮುಂದೆ ಸರಿಯಾಗಿ ಆಲೋಚಿಸದೆ ಮಾಡಿದುದೆಂದು ತಾಯಕ್ಕನಿಗೆ ತುಂಬಾ ದುಃಖವಾಯಿತು. ಆದರೆ ಅದನ್ನು ಮಗಳಿಗೆ ತಿಳಿಯಗೊಡುವಂತಿಲ್ಲ. ಏಕೆ? ಯಾರಿಗೂ ತಿಳಿಯಗೊಡುವಂತಿಲ್ಲ. ಈ ವಿಷಯ ತಿಳಿದರೆ ಬಸವಣ್ಣ, ಚನ್ನೂರಮ್ಮ ಎಷ್ಟು ನಗಬಹುದು? ತಾಯಕ್ಕ ತನ್ನ ದುಃಖವನ್ನು ತಾನೇ ನುಂಗಿದಳು. ಪುಟ್ಟತಾಯಿಯ ಹಣೆಯಲ್ಲಿ ಹೇಗೆ ಬರೆದಿದೆಯೋ ಹಾಗಾಗುತ್ತದೆ ಎಂಬ ಪುರಾತನ ಸಮಾಧಾನವನ್ನು ತಂದುಕೊಂಡು ಸುಮ್ಮನಾದಳು.

ಸೆಕೆಂಡ್‌ಇಯರ್ ಕ್ಲಾಸಿನಿಂದ ಥರ್ಡಿಯರಿಗೆ ಮಲ್ಲೇಶನಿಗೆ ಪಾಸಾಯಿತೆಂಬ ಸುದ್ದಿ ತಿಳಿಯಿತು. ಪುಟ್ಟತಾಯಿಯ ಚಿಂತೆಯಲ್ಲಿದ್ದ ತಾಯಕ್ಕನಿಗೆ ಅದೊಂದು ದೊಡ್ಡ ಸಂತೋಷದ ಆಗಮನವಾಯಿತು. ಆ ಸುದ್ದಿಯನ್ನು ಮೆಲಕುಹಾಕುವುದರಲ್ಲಿಯೇ ತಾಯಕ್ಕ ಒಂದಷ್ಟು ದಿನಗಳನ್ನು ಉತ್ಸಾಹದಿಂದ ಕಳೆಯುವಂತಾಯಿತು. ಏನಾದರಾಗಲಿ ಮಗನೊಬ್ಬ ತಲೆಯೆತ್ತಿಕೊಂಡು ಬಿಟ್ಟರೆ ಸಾಕು ಅನಂತರ ತಾನು ಹಾಯಾಗಿದ್ದುಬಿಡಬಹುದು. ಸಂಸಾರದ ಎಲ್ಲ ಜವಾಬ್ದಾರಿಯನ್ನೂ ಮಲ್ಲೇಶ ಹೊತ್ತುಕೊಳ್ಳುತ್ತಾನೆ. ಅವನು ದೊಡ್ಡ ಮನುಷ್ಯನಾಗಿರುತ್ತಾನಾದ್ದರಿಂದ ಪುಟ್ಟತಾಯಿಯ ಗಂಡನೂ ಮಲ್ಲೇಶನ ಸಲುವಾಗಿಯಾದರೂ ಯೋಗ್ಯನಾಗಿ ಬಾಳಲೇ ಬೇಕಾಗುತ್ತದೆ. ಹಾಗೆ ತನಗೆ ಪುಟ್ಟತಾಯಿಯ ಯೋಗಕ್ಷೇಮದ ಹೊರೆಯೂ ತಪ್ಪಿ ಹೋಗುತ್ತದೆ. ಎಂದು ತಾಯಕ್ಕ ತನ್ನ ಅಳಿಯನ ಸಮಸ್ಯೆಯನ್ನು ಮಗನ ತಲೆಯಮೇಲೆಯೇ .ತಂದು ತನ್ನಲ್ಲಿ ತಾನೇ ಆನಂದಪಟ್ಟುಕೊಂಡಳು.

ಪುಟ್ಟತಾಯಿ ಆ ವರ್ಷದಲ್ಲಿ ಗಂಡನ ಮನೆಗೆ ಮೂರು ಬಾರಿ ಹೋಗಿ ಬಂದಳು. ಅವಳಿಗೆ ಗಂಡನ ಮನೆಯಲ್ಲಿ ಯಾವ ವಿಧವಾದ ಕಷ್ಟವೂ

ತೋರಿಬರಲಿಲ್ಲ. ಅವಳ ವಾರಗಿತ್ತಿಯರೇ ಅಡಿಗೆಯ ಕೆಲಸವನ್ನು ನೋಡಿ ಕೊಳ್ಳುತ್ತಿದ್ದರು. ಕೊಟ್ಟಿಗೆ ಕೆಲಸವೆಲ್ಲಾ ಅವಳ ಮಾವನಿಗೆ ಸೇರಿದ್ದಿತು. ಆರಂಭದ ಕೆಲಸ ಸಂಪೂರ್ಣವಾಗಿ ಅವಳ ಇಬ್ಬರು ಭಾವಂದಿರಿಗೆ ಸೇರಿತ್ತು. ಅವಳಿಗಿದ್ದ ಕೆಲಸವೆಂದರೆ ದೊಡ್ಡವಾರಗಿತ್ತಿಯ ಮಗಳು ಚನ್ನಮ್ಮ ನೊಂದಿಗೂ ಗಂಡು ಕೈಕೂಸಿನೊಂದಿಗೂ ಮೂರು ಹೊತ್ತು ಆಟವಾಡುತ್ತಿರು ವುದು. ಮಾದೇವೂ ಬಂದಾಗ ಅವನಿಗೆ ನೀರುಕೊಟ್ಟು ಊಟಕ್ಕೆ ಬಡಿಸು ವುದೇ ಅವಳ ಗಂಡನ ಮನೆಯಲ್ಲಿ ಅವಳಿಗಿದ್ದ ಮುಖ್ಯ ಕೆಲಸ. ಬಿಡು ವಾಗಿದ್ದಾಗ ಹಿತ್ತಿಲಿನಲ್ಲಿದ್ದ ಮಲ್ಲಿಗೆ ಬಳ್ಳಿಯ ಶುಶ್ರೂಷೆ ಮಾಡುವುದೊಂದು ಬಿಟ್ಟರೆ ಪುಟ್ಟತಾಯಿಗೆ ಏನೆಂದರೇನೂ ಶ್ರಮವಿಲ್ಲ.

ಮಾದೇವೂ ಹೊಲಗಳ ಕಡೆಗೆ ಹೋಗುತ್ತಿರಲಿಲ್ಲ ವೆಂಬುದು ಅವನು ಮನೆಗೆ ಬರುತ್ತಿದ್ದ ವೇಳೆಗಳಿಂದಲೂ, ಅವನು ಅಣ್ಣಂದಿರೊಡನೆ ಆಡುತ್ತಿದ್ದ ಮಾತುಗಳಿಂದಲೂ ತಿಳಿದುಕೊಳ್ಳಬಹುದಾಗಿತ್ತು. ಮಧ್ಯಾಹ್ನದ ಊಟ ಕ್ಕೇನೋ ಅವನೆಷ್ಟು ಹೊತ್ತಿಗೆ ಬಂದರೂ ಪುಟ್ಟತಾಯಿ ಸಿದ್ಧವಾಗಿರುತ್ತಿ ದ್ದಳು. ರಾತ್ರಿಯವೇಳೆ ಮಾತ್ರ ಅವಳಿಗೆ ನಿದ್ದೆಯದೊಂದು ಕಡೆ ಹಿಂಸೆ, ಗಂಡನಿಗೆ ಊಟಕ್ಕಿಡಬೇಕಾದ ಭಯವೊಂದು ಕಡೆ ಹಿಂಸೆಯಾಗಿ ಫಜೀತಿ ಪಡಬೇಕಾಗಿತ್ತು. ಇದಲ್ಲದೇ ಮಾದೇವೂಗೆ ಮದುವೆಯಾದಮೇಲೆ ಹೆಂಡತಿಯ ಕೈಯಿಂದಲೇ ಊಟವಾಗಬೇಕೆಂಬ ಹಟ ಬೇರೆ ಇತ್ತು. ಅವನು ಬಂದಾಗ ದೊಡ್ಡವಾರಗಿತ್ತಿ ಹಜಾರದಲ್ಲಿ ಮಲಗಿರುತ್ತಿದ್ದ ಪುಟ್ಟ ತಾಯಿಯನ್ನು ಏಳಿಸುವುದೇ ಒಂದು ದೊಡ್ಡ ಗಲಾಟೆಯಾಗುತ್ತಿತ್ತು. ಆಕೆ ಎಷ್ಟು ಮೃದುವಾಗಿ ಏಳಿಸಿದರೂ ಪುಟ್ಟತಾಯಿ ಏಳುತ್ತಿರಲಿಲ್ಲ. ಗಟ್ಟಿಯಾಗಿ ಕೂಗಿಕೊಂಡರೇ ಅವಳಿಗೆ ಎಚ್ಚರ.

ಪುಟ್ಟತಾಯಿ ಹಾಗೆ ಏಳುವುದು ತುಂಬಾ ಹೊತ್ತಾದ ದಿನ ಮಾದೇವೂ ಕೋಣೆಯೊಳಗೆ ಒಂದು ಮೌನ ಯುದ್ಧವಾರಂಭಿಸುತ್ತಿದ್ದನು. ಎರಡನೇ ಬಾರಿ ಹಿಟ್ಟನ್ನೇ ಇಕ್ಕಿಸಿಕೊಳ್ಳದೇ ಊಟತೀರಿತೆಂದು ಎದ್ದೂ ಹೋಗದೆ, ಪುಟ್ಟತಾಯಿಯನ್ನು ಪಾಡುಪಡಿಸುತ್ತಿದ್ದನು. ಒಂದು ದಿನ ಮುದ್ದೆ ಒಣಗಿ ಹೋಗಿದೆ ಎಂದು ಜಗಳ ತೆಗೆದು ಗಂಗಳವನ್ನೇ ಕಾಲಿನಿಂದ ದೂರ ಒದ್ದು

ಬಿಟ್ಟನು. ಪುಟ್ಟತಾಯಿ ಅರನಿದ್ದೆಯಲ್ಲಿ ಆಡಬೇಕೆಂಬ ಮನಸ್ಸಿಲ್ಲದಿದ್ದರೂ ಆಡಿಬಿಟ್ಟಳು.

"ಒತ್ತೂ ಮುಂಚೆ ಬಂದರೆ ಮುದ್ದೆಯಾಕೆ ಒಣಗಿರ್‍ತದೆ. ಅರ್ಧ ರಾತ್ರೇಲಿ ಬರದು ನನ್ನ ಜೀವ ಹಿಂಡದು."

"ಏನೇ ಭಾಳ ಧೈರ್‍ಯವಾಗಿ ಮಾತಾಡ್ತಿದ್ದಿಯಿ. ಬುರುಡೇ ಒಡ ದ್ದಾಕ್ಬುಟ್ಟೇನೂ."

"ಅದ್ಯಾಕೋ........ನಾನೇನ್ಮಾಡ್ದೆ! ಅಲ್ಲಿ ಇಲ್ಲೀ ಅಲೆಯಕ್ಕೋಗಿದ್ನಾ ?".

ಪುಟ್ಟತಾಯಿಯ ಆ ಮಾತು ಗಂಡನನ್ನು ಕೆರಳಿಸಿತು. ಮಾದೇವೂ ಎದ್ದವನೇ ಪುಟ್ಟತಾಯಿಯ ತಲೆಯಮೇಲೆ ಹಿಂಗೈಯಿಂದ ಒಂದು ಬಾರಿ ಮಟುಕಿದ. ಪುಟ್ಟತಾಯಿ ಎರಡು ಕೈಗಳಲ್ಲೂ ತಲೆಯನ್ನು ಹಿಡಿದುಕೊಂಡು 'ಅಯ್ಯೋ' ಎನ್ನುತ್ತಾ ಕುಳಿತುಕೊಂಡಳು. ರಾತ್ರಿ ಒಂಭತ್ತು ಗಂಟೆಯ ಹೊತ್ತಿನಲ್ಲಿ ಪೂಜೇ ಭೋಗಪ್ಪನ ಮನೇಲಿ ಹದಿನೈದು ವಡೆ ತಿಂದು ಒಂದು ಚಿಕ್ಕಕೊಳದಪ್ಪಲೆ ಟೀ ಕುಡಿದು ಬಂದಿದ್ದ ಮಾದೇವೂಗೆ ಊಟಬೇಕಿರಲಿಲ್ಲ. ಅವನು ತನ್ನ ಊಟವನ್ನು ಅಲ್ಲಿಗೇ ನಿಲ್ಲಿಸಿ ತೊಟ್ಟಿಗೆ ಬಂದು ಕೈತೊಳೆದು ಆಚೆಗೆ ಹೋದನು.

ಅವನ ಸಣ್ಣ ಬುದ್ಧಿಯನ್ನು ಅರಿತ ಮಿಕ್ಕ ಮನೆಯ ಜನದ ಪೈಕಿ ಎಚ್ಚರವಾಗಿದ್ದವರೆಲ್ಲರೂ ನಿದ್ದೆ ಬಂದಿದ್ದವರಂತೆಯೇ ಇದ್ದುಬಿಟ್ಟರು.

ಆಬಾರಿ ಪುನಃ ಪುಟ್ಟತಾಯಿ ತೌರಿಗೆ ಹಿಂದಿರುಗಿದಾಗ ಇದನ್ನು ದೊಡ್ಡ ಪ್ರಮಾದಮಾಡಿ ತಾಯಿಯೊಂದಿಗೆ ಹೇಳಿದಳು. ಪುನಃ ಗಂಡನ ಮನೆಗೆ ಹೋಗುವುದಿಲ್ಲವೆಂದೇ ತೀರ್ಮಾನ ಹೇಳಿದಳು. ತಾಯಕ್ಕ ವಿನೋದವಾಗಿ "ಹಂಗೇಮಾಡು" ಎಂದಳು. ಅದನ್ನು ಪುಟ್ಟತಾಯಿ ಬೆಂಬಲವೆಂದೇ ತಿಳಿದಳು. ಗಂಡನ ಮನೆಯ ಯೋಚನೆಯನ್ನೇ ಮರೆತು ಹಾಯಾಗಿ ಇದ್ದುಬಿಟ್ಟಳು. ಅವಳ ಮದುವೆಯಾಗಿ ವರ್ಷ ತುಂಬಿ ಬಹಳ ದಿನಗಳಾಗಿ ಹೋಗಿದ್ದುದರಿಂದ ಅಳಿಯನನ್ನು ಕರೆಯಲೇಬೇಕೆಂಬ ಸಂಪ್ರ

ದಾಯವೂ ಇರಲಿಲ್ಲ. ಮಗಳನ್ನು ಗಂಡನ ಮನೆಗೆ ಕಳುಹಿಸಿಲೇ ಬೇಕೆಂಬ ಶಾಸ್ತ್ರವೂ ಇರಲಿಲ್ಲ. ಆದುದರಿಂದ ಮುಂದಿನ ಉಗಾದಿವರೆಗೂ ಪುಟ್ಟ ತಾಯಿಗೆ "ಪುರಸತ್ತು" ಸಿಕ್ಕಿತು.

ಅದು ಮಾದೇವೂಗೆ ಸಹಿಸಲಿಲ್ಲ. ಪುನಃ ಷಷ್ಠಿಗೆ ಅತ್ತೇ ಮನೆಗೆ ಹೋಗುವ ಆಹ್ವಾನ ಬರುವುದೋ ಏನೋ ಎಂದು ಕಾದುನೋಡಿ ನಿರಾಶ ನಾಗಿದ್ದನು. ಅಲ್ಲಿಂದದಾಚೆಗೆ ಕಿರೀಕಾಟಿಯ ಸುದ್ದಿಯೇ ಅವನಿಗೆ ಮುಟ್ಟದೇ "ವಿಲಿ ವಿಲಿ" ಒದ್ದಾಡಿಕೊಂಡನು. ಉಗಾದಿ ಹತ್ತಿರ ಬರು ತ್ತಿದ್ದಂತೆಲ್ಲಾ ಅವನು ಯಾವುದೋ ಕದನಕ್ಕೆ ಸಿದ್ಧನಾಗುವಂತಿದ್ದನು. ಉಗಾದಿ ಬಂದು ಹೋಯಿತು. ಅತ್ತೆಯ ಮನೆಯ ಕಡೆಯಿಂದ ಗಾಳಿಯೂ ಸರಿಯಾಗಿ ಬೀಸಲಿಲ್ಲ. ನಮ್ಮ ಪದಾರ್ಥ ಇರುವ ಮನೆಗೆ ಯಾರು ಕರೆಯಬೇಕು? ಎಂಬ ವಾದವನ್ನು ಹೂಡಿಕೊಂಡು ಮಾದೇವೂ ಸಂಜೆ ಏಳು ಘಂಟೆಯ ವೇಳೆಯಲ್ಲಿ ಅತ್ತೆಯ ಮನೆಗೆ ನುಗ್ಗಿದನು.

ಆತುರ ಆತುರವಾಗಿ ತಾಯಕ್ಕ "ಎರೆಯಪ್ಪ"ನನ್ನು ಮಾಡಿ ಅಳಿಯನ ಔತಣವನ್ನು ನಡೆಸಿದಳು. ಪುಟ್ಟತಾಯಿಯ ಕೈಯ್ಯಿಂದ ನೀರಿನ ತಪ್ಪಲೆ ಯನ್ನು ತೆಗೆದುಕೊಂಡ ಅವನ ಬಿರುಸಿನಿಂದಲೇ ಅವನಿಗೆ ಅಸಾಧ್ಯ ಕೋಪ ಬಂದಿದೆಯೆಂಬುದು ಪುಟ್ಟತಾಯಿಗೆ ತಿಳಿಯಿತು. ಊಟಮಾಡುವಾಗಲೂ ಕೂಡ ತಲೆತಗ್ಗಿಸಿ ಒಂದು ಮಾತಾಡದೆ ಊಟಮಾಡುತ್ತಿದ್ದ. ಕೋಣೆ ಯೊಳಗೆ ತನ್ನ ತಾಯಿಯಿಲ್ಲವೆಂಬುದನ್ನು ಸೂಚಿಸುವುದಕ್ಕೂ ಮತ್ತು ಮನಸ್ಸಿಗೆ "ಕಿರಿಕಿರಿ"ಯನ್ನುಂಟುಮಾಡುತ್ತಿದ್ದ ಅವನ ಆ ಮೌನವನ್ನು ಮುರಿಯುವುದಕ್ಕೂ ಪುಟ್ಟತಾಯಿ ಪ್ರಯತ್ನಪಟ್ಟು.

"ಇದೇನಾ ಸಾಕೂ ಅನ್ನಕಿಲ್ಲ ಬೇಕೂ ಅನ್ನಕ್ಕಿಲ್ಲ........ಇದೆಂತಾ ಕ್ವಾಪವಾ?" ಎಂದಳು.

"ನಿನಗೆಲ್ಲೋ ಗಚಾರ" ಎಂದು ಮಾದೇವೂ ಅವಳ ಸದ್ದನ್ನು ಅಲ್ಲಿಯೇ ಅಡಗಿಸಿ ಹೊರಗೆ ಬಂದನು. ನಡುವೆಯಲ್ಲಿ ಅವನಿಗೆಂದು ಸಿದ್ಧ ಪಡಿಸಿದ್ದ ಮಂದಲಿಗೆ ದಿಂಬುಗಳನ್ನು ಜತೇಲಿಗೆ ತೆಗೆದುಕೊಂಡು ಹೋಗಿ ಹಾಕಿಕೊಂಡು ಬಿದ್ದುಕೊಂಡನು.

ರಾತ್ರಿ ಬಹಳ ಹೊತ್ತಿನವರೆಗೂ ತಾಯಿ-ಮಗಳಿಗೆ ಈತನ ವರ್ತನೆಯ ಬಗ್ಗೆ ಮಾತುಕತೆಗಳಾಯಿತು. ಹೆಂಡತಿಯನ್ನು ಕರೆದುಕೊಂಡುಹೋಗು ವೆನೆಂದು ಕೇಳಬಹುದು ಎಂದು ತಾಯಕ್ಕ ಹೇಳಿದಳು. ಪುಟ್ಟತಾಯಿ ನಾನು ಹೋಗುವುದಿಲ್ಲವೆಂದು ಅತ್ತಳು. ತಾಯಿ ನಾನಾ ರೀತಿಯ ಸಮಾ ಧಾನಗಳನ್ನೂ, ಅವರಿವರ ಹೆಣ್ಣುಮಕ್ಕಳ ಉದಾಹರಣೆಗಳನ್ನೂ ಕೊಟ್ಟು ಮಗಳು ಗಂಡನ ಮನೆಗೆ ಹೋಗಲು ಪ್ರೇರಿಸಿದಳು. ಪುಟ್ಟತಾಯಿಗೆ ನಿದ್ದೆ ಬಂದಾಗ ಅವಳು ಒಪ್ಪಿಕೊಂಡಿರಲಿಲ್ಲ.

ಬೆಳಿಗ್ಗೆ ಮಾದೇವು ಎದ್ದವನೇ ಎಲ್ಲಿಗೋ ಹೊರಟುಹೋಗಿದ್ದವನು ಮಧ್ಯಾಹ್ನ ಸೂರ್ಯ ನೆತ್ತಿಯಮೇಲಿಂದ ಇಳಿಯುತ್ತಿದ್ದಾಗ ಬಂದ. ಅವನು ಹಾಗೆ ಅತ್ತೆಯನ್ನೇ ನೇರವಾಗಿ ಮಾತನಾಡಿಸುವ ಪದ್ಧತಿಯಿರಲಿಲ್ಲ. ಕಾಳಕ್ಕನ ಮುಖಾಂತರವೇ ಅತ್ತೆ ಅಳಿಯಂದಿರ ಸಂವಾದ ನಡೆಯುತ್ತಿದ್ದುದು. ಆದರೆ ಕಾಳಕ್ಕನನ್ನು ಯಾವ ಉಪಕಾರಕ್ಕೂ ಕರೆಯುವ ಮನಸ್ಸಿಲ್ಲದಿದ್ದುದರಿಂದ ಮಾದೇವೂ ನೇರವಾಗಿ ಅತ್ತೆಯಬಳಿಗೇ ಬಂದು ಕೇಳಿದ.

" ಅವಳ್ನ ಊರಿಗೆ ಕಳೀಸ್ಕೊಡಿ ; ಮನೇಲಿ ಹಬ್ಬಹರಿದಿನ ಅವೆ."

" ಹಬ್ಬಹರಿದಿನ .. ....ಉಗಾದಿ ಆಯ್ತು, ಇನ್ನು ಗೌರೀಗಂಟಾ ಹಬ್ಬಗಳೇ ಇಲ್ಲವಲ್ಲ."

" ಇಲ್ಲ—ನಾನು ಕರ್ಕಂಡೇ ಓಗ್ಬೇಕು. ಅವಳಿಗೆ ಇನ್ನೂ ನಮ್ಮೂರ್ರೇ ಸರಿಯಾಗಿ ಒಗ್ಗಿಲ್ಲ."

" ಅವಳೇನು ಚಿಕ್ಕೋಳಾ ; ಪುಟ್ಟೋಳಾ ? ಇನ್ನುಮೇಲೆ ಯಾಕೆ ಅವಳು ಅತ್ತಿಂದಿತ್ತ ತಿರಗೋದು. ಇಲ್ಲೇ ಇದ್ದುಬುಡ್ಲಿ ಬುಡಿ."

" ಅದ್ಯಾಕಲ್ಲೇ ಇರ್ಲೇಳಿ !"

" ಅಂಗಲ್ಲಪ್ಪಾ....ಈ ವಿಸಯ ನಿಮಗೆ ಗೊತ್ತಾಗಕ್ಕಿಲ್ಲ. ಹಿರೀಕರನ್ನ ಹೇಳಿಕೇಳಿ...."

" ನನಗ್ಯಾರೂ ಇಲ್ಲ. ಅದಕ್ಕೇ ನಾನು ಕರ್ಕೊಂಡ್ಹೋಗದು. ನೀವು ಇಲ್ಲ ಅಂತನ್ನೇ ಕೂಡದು."

ನಿಮ್ಮಿಷ್ಟಾಪ್ಪ ಇಷ್ಟರಮೇಲೆ. ಈವೊತ್ತು ಶುಕ್ರವಾರ! ನಾಳೇ ದಿನ ..."

" ಅದೆಲ್ಲಾ ಆಗಕ್ಕಿಲ್ಲ, ನಾನಿವತ್ತೇ ಕರ್ಕೊಂಡೋಗಬೇಕು."

" ಈಗಾಗ್ಲೇ ದನ ಬರೋ ಹೊತ್ತಾಗದೆ, ನೋಡ್ಕೋರೇನನ್ಕಂಡಾರು!"

" ಏನ್ಬೇಕಾದ್ರೂ ಅನ್ಕಳ್ಳಿ, ನಾನು ಇವತ್ತು ಉಳಿಯಕ್ಕಾಗಕ್ಕಿಲ್ಲ."

ಒಳಗೆ ಪುಟ್ಟತಾಯಿಯ ರಂಪ. ಹೊರಗೆ ಅಳಿಯನ ಹುಡುಗು ಸಹವಾಸ. ತಾಯಕ್ಕ ಬಲು ಪೇಚಾಟಕ್ಕೆ ಸಿಕ್ಕಿಬಿದ್ದಳು. ಕೊನೆಗೆ ತಾಯಕ್ಕ ಮಗಳಿಗೆ ದೊಡ್ಡ ಆಸೆಯನ್ನು ತೋರಿಸಬೇಕಾಯಿತು. ಮದುವೆಯ ಕಾಲದಲ್ಲಿ ತೆಗೆಯಬೇಕಾಗಿದ್ದ ರೇಷ್ಮೆ ದೊಡ್ಡಸೀರೆಯನ್ನು ಮುಂದಿನ ಗೌರಿಯಹಬ್ಬದ ಹೊತ್ತಿಗೆ ಖಂಡಿತ ತೆಗೆದುಕೊಡುವೆನೆಂದು ಮಾತುಕೊಟ್ಟು ಮಗಳನ್ನು ಹೊರಡಿಸಿದಳು.

ಹೊತ್ತುಬೀಳಲು ಇನ್ನು ಎರಡೇಮಾರು ಉಳಿದಿತ್ತು. ಪುಟ್ಟತಾಯಿಯು ಸಿಂಗರಿಸಿಕೊಳ್ಳುವುದರಲ್ಲಿ ಒಂದು ಮಾರು ಕಳೆದುಹೋಯಿತು. ಅವಳು ಸಿದ್ಧಳಾದಮೇಲೂ ತಾಯಕ್ಕ ಉಳಿದ ಒಂದೇ ಮಾರನ್ನು ಅಳಿಯನಿಗೆ ತೋರಿಸಿ " ಇಂದು ಬೇಡ. ಹೊತಾರೆ ಅಷ್ಟೊತ್ತಿಗೇ ಹೊರಟುಬಿಡಿ " ಎಂದು ಕೊನೆಯದಾಗಿ ಕೇಳಿಕೊಂಡಳು. ಮಾದೇವು ಜಗ್ಗಲಿಲ್ಲ, " ಗುಜ್ಜಗೆರೆ ಏನು ದುರ್ಗವಾ ? ಎರಡು ಹರಿದಾರಿ ಅದೆ. ನನಗೇನೂ ಭಯವಿಲ್ಲ " ಎಂದು ತನ್ನ ಪ್ರಯಾಣವನ್ನೇ ಸ್ಥಿರಪಡಿಸಿದ. ಒಂದುಬಾರಿ ಕಳುಹಿಸುವುದಕ್ಕಾಗುವುದಿಲ್ಲ ಎಂದು ಧೈರ್ಯವಾಗಿ ಹೇಳಿಬಿಡಲೇ ಎನ್ನಿಸಿತು ತಾಯಕ್ಕನಿಗೆ. ಆದರೆ ಮರುಕ್ಷಣವೇ ತಾನಾಗಿ ಪುಟ್ಟತಾಯಿಗೆ 'ಸರಾಗ' ತೋರಿಸಿದಂತಾಗುತ್ತದೆ ಎಂದು ಸುಮ್ಮನಿದ್ದುಬಿಟ್ಟಳು. ಪುಟ್ಟತಾಯಿ ಒಪ್ಪಿಕೊಂಡಿರುವ ಇದೇ ಸಮಯದಲ್ಲಿ ಅವರು ಹೊರಟುಬಿಡುವುದೇ ಒಳ್ಳೆಯದೆಂದುಕೊಂಡಳು.

ಪುಟ್ಟತಾಯಿಯು ತೊಳೆದ ಮುಖವನ್ನು ಮತ್ತೊಮ್ಮೆ ಕಣ್ಣೀರಲ್ಲಿ ತೊಳೆದುಕೊಂಡಳು. ಅವಳು ತೆಗೆದುಕೊಂಡುಹೋಗಬೇಕಾದ 'ರೈಲುಪುಟ್ಟಿ' ಯನ್ನು ತೆಗೆದು ನಡುವಿನಮೇಲಿಟಳು. ಅದನ್ನು ಕಂಡ ತಕ್ಷಣವೆ

ಮಾದೇವು ಬೀದಿಗಿಳಿದು ನಡೆದೇಬಿಟ್ಟ. ಅವನು ಹತ್ತಾರುಮಾರು ದೂರ ಹೊರಟುಹೋದಮೇಲೆ, ಮಗಳೂ ಹೊರಡಲೇಬೇಕಾಯಿತು. ಮಗಳ ಜೊತೆಯಲ್ಲಿ ತಾಯಿಯೂ ಅಷ್ಟು ದೂರ ಬೀಳ್ಕೊಡಲು ಹೊರಟಳು.

ಊರು ಮುಗಿಯಿತು, ಮಾದೇವು ಹಿಂತಿರುಗಿ ನೋಡದೇ ಮುಂದು ವರಿಯುತ್ತಲೇ ಇದ್ದನು. ಹೊತ್ತು ಕೆಂಬಣ್ಣವನ್ನು ತಳೆಯುತ್ತಿತ್ತು. ತಾಯಕ್ಕ ಇನ್ನು ಹೆಚ್ಚುಹೊತ್ತು ಮಾಡಬಾರದೆಂದು ನಿಂತುಕೊಂಡಳು. ಮಗಳ ಕೈಯನ್ನು ಹಿಡಿದು ಖಂಡಿತ ಇನ್ನೊಂದು ತಿಂಗಳಿನೊಳಗೆ ಬಂದು ಕರೆದು ಕೊಂಡುಬರುತ್ತೇನೆಂದು ನಂಬಿಸಿ ಕಳುಹಿಸಿಕೊಟ್ಟಳು. ಕೆಂಪು ಆಕಾಶದ ಕಡೆಗೆ ಬಹಳ ದೂರದಲ್ಲಿ ಹೋಗುತ್ತಿದ್ದ ಗಂಡನ್ನು ಹಿಂಬಾಲಿಸಿ ಓಡುನಡಿಗೆ ಯಿಂದ ಹೆಣ್ಣು ಹೊರಟಿತು.

ಆ ದೃಶ್ಯವನ್ನು ದುಃಖತುಂಬಿದ ಕಣ್ಣುಗಳಿಂದ ತಾಯಕ್ಕ ಬಹಳ ಹೊತ್ತು ನೋಡುತ್ತ ನಿಂತಿದ್ದಳು. ಮಗಳು ಅಳಿಯಂದಿರು ಕಣ್ಣಿನ ಶಕ್ತಿ ಯನ್ನು ಮೀರಿದ ದೂರಕ್ಕೆ ತಲುಪಿದಮೇಲೆ ತಾಯಕ್ಕ ಹಿಂತಿರುಗಿದಳು. ಕಿರೀಕಾಟಿಯೂ ಸ್ವಲ್ಪ ದೂರದಲ್ಲೇ ಇತ್ತು. ಅವಳಿಗೆ ಅದೇ ಗುಜ್ಜಗೆರೆ ಯಷ್ಟು ದೂರವಿದೆ ಎನ್ನಿಸಿತು. ನಿಧಾನವಾಗಿ ಕಾಲೆಳೆಯುತ್ತಾ ಊರಕಡೆಗೆ ಹೊರಟಳು. ಅವಳ ಮನಸ್ಸು ಬಹಳ ಹಿಂದಿನ ದಿನಗಳನ್ನು ನೆನೆಸಿಕೊಂಡು ಓಡಿತ್ತು. ಹೆಣ್ಣುಮಕ್ಕಳೇ ತಾಯಿತಂದೆಗಳಿಗೆ ಆಗುವವರೆಂದು ಗಂಡ ಹೇಳಿದ್ದ ಮಾತೂ ನೆನಪಿಗೆ ಬಂತು. ತಾಯಕ್ಕ ಬಲು ನೀಳವಾದೊಂದು ಉಸಿರನ್ನು ಬಿಟ್ಟಳು. ತಾಯಿತಂದೆಗಳಿಗೆ ಹೆಣ್ಣುಮಕ್ಕಳು ನೆರವಾಗುವು ದಿರಲಿ, ಅವರ ಪಾಡಿಗೆ ಅವರು ಮಾನವಾಗಿ ಬಾಳಿದರೆ ಸಾಕು ಎನ್ನಿಸಿ ತವಳಿಗೆ.

ಕೆರೆಯ ಏರಿಯ ಬಳಿಗೆ ಬಂದಾಗ ತಾಯಕ್ಕನನ್ನು ಕಾಳಕ್ಕ ಎದುರು ಗೊಂಡಳು. ಅವಳು ತಾಯಕ್ಕನನ್ನು ಹಾಗೆ ಸಂಧಿಸಿ ಸಮಾಧಾನದ ನಾಲ್ಕು ಮಾತನ್ನಾಡಲೆಂದೇ ಬಂದಿದ್ದದ್ದು. ಅವಳ ಆ ವಾತ್ಸಲ್ಯವನ್ನು ಕಂಡು ತಾಯಕ್ಕನ ಹೃದಯ ತುಂಬಿ ಬಂತು. ಇದ್ದುದರಲ್ಲಿ ಕಷ್ಟಪಟ್ಟು ಒಂದು ನಗುವನ್ನು ತುಟಿಗಳಮೇಲೆ ತಂದು "ನನಗೆ ಸಿಕ್ಕಿದ ಅಳಿಯ ಮೂಕನ

ಕಾಳಕ್ಕ. ಸುಕ್ರವಾರ ಮುಚ್ಚಂಜೇಲಿ, ಕಾಲಿಗೊಂದು ಬೀಳ್ಲಿಲ್ಲ—ಅಂಗೆ ಕೇಳ್ಕಂಡ್ರೂ ಕೇಳದೇ ಕರಕಂಡ್ಹೋದಕಣಕ್ಕ. ನಮ್ಮ ಪುಟ್ಟಿಯೋ—ಎಷ್ಟು ವಯಸ್ಸಾದರೂ ಎಳೇಕೂಸೇ ! ಒಂದೊಡ್ಡ ಸೀರೆ ಕೊಡಸ್ತೀನಿ ಅಂತ ನಾಹೇಳಿ ದ್ಮಾತು ನಂಬ್ಕಂಡು ಬೇಡ್ದೇ ಇದ್ರೂ ಅಳಳ್ತಾ ಒಂಟೋಯ್ತು ಕಾಳಕ್ಕ! ನನ್ನೊಟ್ಟೆ ಎಷ್ಟು ಉರೀತೋ ?" ಎಂದ ತಾಯಕ್ಕನ ಮಾತನ್ನು ಕೇಳಿ ಕಾಳಕ್ಕನ ಹೊಟ್ಟೆಯೂ ಉರಿಯಿತು.

ಕೆರೆಯು ಮುಗಿಯಿತು, ಊರು ಸಿಕ್ಕಿತು. ಅವರಿಬ್ಬರೂ 'ಇಸ್ಕೂಲಿ'ನ ಹತ್ತಿರಕ್ಕೆ ಬರುವುದಕ್ಕೂ ಗುಡೀಬೀದಿಯ ಕಡೆಯಿಂದ 'ಜೊಯ್ಯೆಂ'ಬ ಹಾರ್ಮ್ಮನಿ ಶಬ್ದದ ಜೊತೆಗೆ ಅತಿ ಎತ್ತರದ ಎರಡುಮೂರು ಗಂಟಲುಗಳ 'ರಾಮಜಯತು ಶ್ರೀರಾಮ ಸುನಾಮ' ಕಿವಿಗೆ ಬೀಳುವುದಕ್ಕೂ ಸರಿ ಹೋಯಿತು. ತಾಯಕ್ಕ ಬೆದರಿದಳು, ಕೇಳಿದಳು :

"ಇದೇನು ಕಾಳಕ್ಕ, ಕಿರೀಕಾಟೇಲಿ ತಿರಗಾ ನಾಟಕ ಕಲ್ತರಾ ?"

"ಔದಂತೆ ತಾಯಿ, ಪ್ರಾಲ್ಲಾದ ಚರಿತ್ರೆ ಅಂತೆ. ಸೆತ್ತೀನಿಂಗನೇ ಪುನಾ ಹಾರ್ಮ್ಮನಿ ಮೇಷ್ಟ್ರಂತೆ."

"ಓ! ಗಾಚಾರ ತೊಲಗ್ತೊಂತಿದ್ದೆ ಕಾಳಕ್ಕ. ಯಾಕೋ ನನ್ನ ಜೀವಕ್ಕೆ ನೆಮ್ಮದೀ ಅನ್ನೋದು ಸಿಗಕ್ಕೇ ಇಲ್ಲ ಅಂತ ಕಾಣಿಸ್ತದೆ."

"ಬುಡು ತಾಯಿ. ಅವನು ನಿನ್ನ ಸುದ್ದಿಗೆ ಇನ್ನು ಬರೋಮಟ್ಟು ಕಾಣೆ. ನರಿಯಾಲದ ಸಂತೇಲಿ ಈಗೊಂದೇಡುತಿಂಗಳ ಹಿಂದೆ ಯಾರೋ ಅವನಿಗೆ ಮ್ಕೊಮುರಿಯಾ ಬಡಿದ್ರಂತೆ. ಈಗ ಅವನು ನಿಂದೇ ಏನು, ಯಾರ ಸುದ್ದೀಗೂ ಬರಲಾರ."

"ಅದು ಮಾನವಿಲ್ಲದೇ ಇದ್ದ ಮಂಗ ಕಾಳಕ್ಕ............ಇರ್ಲಿ ಇರ್ಲಿ, ಅವನೇನಾದರೂ ನನ್ನ ಚಿಂತೆಗೆ ಬರ್ಲಿ, ಇಲ್ಲಾ-ಅವನುಳ್ಕಬೇಕು, ಇಲ್ಲಾ-ನಾನುಳ್ಕಬೇಕು ಆಂಗೆ ಮಾಡುಬುಡ್ತೀನಿ."

ಅಷ್ಟು ಕ್ರೋಧ ಉಕ್ಕಿಬಂದಿತು ತಾಯಕ್ಕನಲ್ಲಿ! ಮೂರ್ಖ ಅಳಿಯ ನೊಂದಿಗೆ ಮುಗ್ಧಮಗಳನ್ನು ಕಳಿಸಿಬಂದಿದ್ದ ಆಗಿನ ಅವಳ ಕೋಪದಲ್ಲಿ ಸೆತ್ತೀನಿಂಗಪ್ಪನೇನಾದರೂ ಅವಳನ್ನು ಎದುರಿಸಿಬಂದಿದ್ದರೆ ಹುಚ್ಚು ಗಂಡಸಿ

ನಂತೆ ಅವನಮೇಲೆ ಬಿದ್ದು ಉಗುರು ಹಲ್ಲುಗಳಿಂದಲೇ ಅವನನ್ನು ಮುಗಿಸಿ ಬಿಡುವವಳಾಗಿದ್ದಳು.

ಅಂದಿನಿಂದ ತಿಂಗಳೆರಡುತಿಂಗಳು ಸೆತ್ತೆನಿಂಗನ ಕೆಣಕಾಟವನ್ನು ನಿರೀಕ್ಷಿಸುತ್ತಲೇ ಇದ್ದ ತಾಯಕ್ಕನಿಗೆ ಅದರ ಸುಳಿವೇ ತೋರಿಬರಲಿಲ್ಲ. ಕಾಳಕ್ಕ ಹೇಳಿದಂತೆ ನರಿಯಾಲದ ಸಂತೆಯಲ್ಲಿ ಸೆತ್ತೇನಿಂಗಪ್ಪನಿಗೆ ಬಲವಾದ ಏಟುಗಳು ಬಿದ್ದಿದ್ದುದು ನಿಜ.

ಗುಜ್ಜಗೆರೆಯ ದಿನಸೀ ಅಂಗಡಿ ಸಂಕೇಗೌಡ ನರಿಯಾಲದ ಸಂತೆಯಲ್ಲಿ ಅಂಗಡಿ ಹಾಕುತ್ತಿದ್ದುದು ಪದ್ಧತಿ. ಆ ದಿವಸ ಅವನಿಗೆ ಎರಡು ಅಂಗಡಿಗಳ ಕೆಲಸ ಬೀಳುತ್ತಿದ್ದುದರಿಂದ ಒಂದರಲ್ಲಿ ತಾನೂ, ಇನ್ನೊಂದರಲ್ಲಿ ತನ್ನ ದೊಡ್ಡ ಮಗಳು ನಂಜು, ಹೀಗೆ ಕೂಡುತ್ತಿದ್ದುದು. ಆ ಬಾರಿ ತಮಾಷೆಯಾಗಿ ಸಂತೆಗೆ ಬರಬೇಕೆಂದ ನಂಜುವೇ ಸಂತೆಯ ಅಂಗಡಿಯಮೇಲೆ ಕುಳಿತುಕೊಂಡಿದ್ದಳು. ಕಿರೀಕಾಟಿಯಲ್ಲಿ ನಾಟಕವನ್ನು ಮುಗಿಸಿದಮೇಲೆ ಸೆತ್ತೆನಿಂಗನ ಪತ್ತೆಯೇ ಆ ಸುತ್ತಿಗೆ ಬಹಳ ವರ್ಷಗಳಿಂದ ಇಲ್ಲವಾಗಿತ್ತು. ಎಲ್ಲೆಲ್ಲಿಯೋ ಅಲೆದಾಡಿ ಕೊನೆಗೆ ನರಿಯಾಲದ ಸಂತೆಯಲ್ಲಿ ಓಡಾಡಿದರೆ ಅದರ ಸುತ್ತಮುತ್ತಲ ಹಳ್ಳಿಯವರು ಯಾರಾದರೂ ತನ್ನ ಬಲೆಗೆ ಬೀಳಬಹುದೆಂದು ಸೆತ್ತೆನಿಂಗಪ್ಪ ಸಂತೆಗೆ ಬಂದಿದ್ದನು.

ಸೆತ್ತೆನಿಂಗನಿಗೆ ಸಿಕ್ಕಿದವರೆಲ್ಲ ನುಣುಚಿಕೊಂಡು ಹೊರಟುಹೋಗುತ್ತಿದ್ದರು. ಮಧ್ಯಾಹ್ನದವರೆಗೂ ಒಂಟಿಯಾಗಿ ಅಲೆದೂ ಅಲೆದೂ ಸಾಕಾಯ್ತವನಿಗೆ. ಹಾಗೆ ಅಲೆಯುತ್ತಿದ್ದಾಗ ಗುಜ್ಜಗೆರೆ ಸಂಕೇಗೌಡನ ಅಂಗಡಿಯ 'ಗಲ್ಲ'ದಮೇಲೆ ಕುಳಿತಿದ್ದ ನಂಜು ಅವನ ಕೆಂಗಣ್ಣುಗಳಿಗೆ ಬಿದ್ದಳು. ನಂಜುವಿಗೆ ಸುಮಾರು ಹದಿಮೂರು ವರ್ಷವಿರಬಹುದು. ಸೆತ್ತೆನಿಂಗನಿಗೆ ಹದಿನಾರನೇ ವರ್ಷದಲ್ಲೇ ಮದುವೆಯಾಗಿ ಮಕ್ಕಳ ಫಲ ಚೆನ್ನಾಗಿದ್ದಿದ್ದರೆ ಈಗ್ಗೆ ನಂಜುವಿನಂತಹ ಒಬ್ಬ ಮೊಮ್ಮಗಳಿರುತ್ತಿದ್ದಳೋ ಏನೋ? ಆದರೆ ಸೆತ್ತೆನಿಂಗನಿಗೆ ಮದುವೆಯೇ ಆಗಿರಲಿಲ್ಲವಾದ್ದರಿಂದ ಅವನು ತಾನೊಬ್ಬ ನಿತ್ಯಯುವಕನೆಂದೇ ತಿಳಿದುಕೊಂಡಿದ್ದನು. ಅದೇ ಭಾವನೆಯಲ್ಲಿ ಆ ನಂಜುವನ್ನು 'ಕೆಕ್ಕರಿಸಿ' ನೋಡುತ್ತ ಅತ್ತ ಇತ್ತ ಓಡಾಡುತ್ತಿದ್ದ.

ಸಂಜೆಯಾಗುತ್ತಬಂದಹಾಗೆ ಸೆತ್ತೆನಿಂಗನಿಗೆ ತಾನು ಬಂದ ಕೆಲಸವಾಗದೇಹೋದ ಕಿಚ್ಚಿನಲ್ಲಿ ಕೊನೆಯಪಕ್ಷ ನಂಜುವನ್ನಾದರೂ ಮಾತನಾಡಿಸಿ ಹೋಗಬೇಕೆಂಬ ಚಪಲ ಬಂದಿತು. ನಂಜುವಿನಂಗಡಿಯ ಡೇರೆಯ ಮುಂದೆ ಇದ್ದ ಸೋಪಿನ ಡಬ್ಬಗಳ ಪೈಕಿ ಒಂದರಮೇಲೆ ಗುಜ್ಜಗೆರೆ ಪಟೇಲರು ಕುಳಿತಿದ್ದರು. ಅವರ ಪಕ್ಕದಲ್ಲಿ ಸೆತ್ತೆನಿಂಗನೂ ಹೋಗಿ ಕುಳಿತನು. ನಂಜುವಿನೊಂದಿಗೆ ಯಾವಯಾವ ವ್ಯಾಪಾರವನ್ನೋ ಮಾಡತೊಡಗಿದನು. ಅದನ್ನೆಲ್ಲಾ ಪಟೇಲರು ಕಿವಿಯಲ್ಲೇ ನೋಡುತ್ತಿದ್ದರು.

ಎಲ್ಲದರ ಧಾರಣೆಯ ವಿಚಾರಣೆಯೂ ಆದಮೇಲೆ ಸೆತ್ತೆನಿಂಗ ಸುವಾಸನೆ ಎಣ್ಣೆಯ ವ್ಯಾಪಾರಕ್ಕೆ ಮೊದಲುಮಾಡಿದನು. ಆ ಹುಡುಗಿಗೂ ಈತನಲ್ಲಿ ಬೇಜಾರು ಹುಟ್ಟಿತ್ತು. “ಇದೊಂದೇ ಇರದು, ಹತ್ತಾಣೆ, ಬೇಕಾದರೆ ತಕೋ ಬ್ಯಾಡವಾದರೆ ಎದ್ದೋಗಯ್ಯ” ಎಂದಳು. ಸೆತ್ತೆನಿಂಗ ರಸಿಕತೆಯನ್ನು ತೋರ್ಪಡಿಸುತ್ತಾ “ನನಗ್ಯಾಕೇ ಈ ಎಣ್ಣೆ, ಇದೊಂದೇ ಇರದು ಅಂತೀಯೇ—ಪ್ರಾಯದುಡಗೀ—ನೀನೇ ಹಾಕ್ಕಳಕ್ಕೆ ಮಡೀಕೋ ಇರ್ಲಿ” ಎಂದು ನಗುತ್ತಾ ಎದ್ದು ಅಲ್ಲಿಂದ ಹೊರಟ. ಪಟೇಲರು ಅವನನ್ನೇ ನೋಡುತ್ತ ಕುಳಿತಿದ್ದರು

ಅವನು ಸುಮಾರು ಹತ್ತು ಮಾರುಗಳಷ್ಟು ದೂರ ಹೋಗಿರಬೇಕು. ಯಾವನೋ ಒಬ್ಬ ಹಿಂದಿನಿಂದ ಬಂದು ಸೆತ್ತೇನಿಂಗನ ಕುತ್ತಿಗೆಯನ್ನು ಹಿಡಿದುಕೊಂಡು ಹಿಂದಕ್ಕೆ ಎಳೆದು ತಂದ. ಚಿಕ್ಕಲಿಂಗಪ್ಪನವರೂ ಅಲ್ಲಿಗೆ ಬಂದರು. ನಂಜುವಿಗೆ ಆ ಬಗ್ಗೆ ಅಷ್ಟೇನೂ ಅಸಮಾಧಾನವಾಗದಿದ್ದರೂ ಚಿಕ್ಕಲಿಂಗಪ್ಪನವರಿಗೆ ಆಗಿತ್ತು. ಸೆತ್ತೆನಿಂಗನನ್ನು ಹಿಡಿದಿದ್ದ ವ್ಯಕ್ತಿಗೆ ಅವರ ಅಪ್ಪಣೆಯಾಯಿತು. ಸೆತ್ತೆನಿಂಗನನ್ನು ಒದ್ದಿದ್ದವರೆಂದರೆ ಅವರಪ್ಪ ಒಬ್ಬನೇ. ಈಗ ಒದ್ದವನೇ ಅಪ್ಪನಾಗಬೇಕಾಯಿತು. ಅನಿರೀಕ್ಷಿತವಾಗಿ ಬಿದ್ದ ಏಟುಗಳನ್ನು ತಾಳಲಾರದೆ ಅವನನ್ನು “ಅಪ್ಪ, ತಪ್ಪಾಯ್ತು ಬುಡಪ್ಪ” ಎಂದು ಸೆತ್ತೆನಿಂಗ ಅಂಗಲಾಚಿ ಪಾರಾದ. ಜನಗಳು ಅದನ್ನು ಬಹಳ ಚೆನ್ನಾಗಿ ಆನಂದಿಸಿದರು.

ಅವನಿಗೆ ಇನ್ನೂ ಅನುಮಾನ ಹೋಗಿಲ್ಲ. ತಮ್ಮೂರಿನ ಅಂಗಡೀ ಹುಡುಗಿಯನ್ನು ತಮಾಷೆಯಾಗಿ ಮಾತನಾಡಿಸಿದ ಮಾತ್ರಕ್ಕೆ ಚಿಕ್ಕಲಿಂಗಪ್ಪನವರು ಅಷ್ಟು ಕೋಪಮಾಡಿಕೊಳ್ಳಬೇಕಿಲ್ಲವೆಂದು ಅವನ ಅಭಿಪ್ರಾಯ. ಆದರೆ ಏಟುಗಳನ್ನು ತಿಂದೂ ಆಯಿತು, ಅವುಗಳು ಅರಗಿಯೂ ಆಯಿತು. ಈ ಅನುಮಾನದಿಂದ ಪ್ರಯೋಜನವೇನೆಂದು ಸುಮ್ಮನಿದ್ದುಬಿಟ್ಟನು. ಪುನಃ ಕಿರೀಕಾಟಿಯವರೇ ಅವನಿಗೆ ಸಿಕ್ಕಿ 'ಪ್ರಲ್ಹಾದ ಚರಿತ್ರೆ' ಕಲಿಸಿಕೊಡೆಂದು ಅವನನ್ನು ತಮ್ಮೂರಿಗೆ ಕರೆದುಕೊಂಡು ಬಂದಮೇಲೆ ಸ್ವಲ್ಪದಿವಸದಮೇಲೆ ಆ ಅನುಮಾನ ಮತ್ತೆ ಹೊರಕ್ಕೆ ಬಂದಿತು. ಅದರ ಮೂಲವು ಕಿರೀಕಾಟಿಯಲ್ಲಿ ಸಿಗಬಹುದೆಂದೆನಿಸಿ ಸೆತ್ತೆನಿಂಗನು ಅದರ ಪರಿಶೋಧನೆಯಲ್ಲಿ ಆಗಾಗ್ಗೆ ಆಸಕ್ತಿವಹಿಸತೊಡಗಿದನು.

ಚಿಕ್ಕಲಿಂಗಪ್ಪನವರ ಓಡಾಟ ಈಗ ಕಿರೀಕಾಟಿಯಲ್ಲಿ ಸ್ವಲ್ಪಹೆಚ್ಚಿದ್ದು, ಅವರೊಡನೆ ತಾಯಕ್ಕನಿಗಿರುವ ಲೇವಾದೇವಿ ಸಂಬಂಧ, ತಿಳಿದಮೇಲೆಯೇ ಸೆತ್ತೆನಿಂಗನ ಅನುಮಾನದಮೇಲೆ ಸ್ವಲ್ಪ ಬೆಳಕು ಬಿದ್ದಂತಾದುದು. ಚಿಕ್ಕಲಿಂಗಪ್ಪನವರ ಮಧ್ಯಸ್ತಿಕೆಯಲ್ಲೇ ಪುಟ್ಟತಾಯಿಯ ಮದುವೆಯೂ ಆಯಿತೆಂದಮೇಲೆ ಅನುಮಾನದ ಬುಡವೇ ಹಾರಿಹೋಯಿತು. ಹೀಗೆಯೇ ಇರಬೇಕೆಂದು ಸೆತ್ತೆನಿಂಗ ಲೆಕ್ಕಹಾಕಿಕೊಂಡುಬಿಟ್ಟದ್ದನು. ಇದನ್ನು ಖಚಿತಪಡಿಸಿಕೊಳ್ಳಬೇಕೆಂಬ ಆಸೆಯೊಂದು ಕಡೆ, ತಾನು ಮನಸ್ಸಿಟ್ಟ ಕಡೆ ತನಗೆ ಸೋಲಾಗಿ ಚಿಕ್ಕಲಿಂಗಪ್ಪನವರಿಗೆ ಜಯವಾಗಿರುವುದಲ್ಲ ಎಂಬ ಹೊಟ್ಟೆಯುರಿಯೊಂದು ಕಡೆ, ತಾಯಕ್ಕನ 'ಗರತಿಯಾಟ' ಕಂಡಾಗ ಉಂಟಾಗುವ ಕೋಪವೊಂದುಕಡೆ ಸೇರಿಕೊಂಡು ಸೆತ್ತೆನಿಂಗನನ್ನು ಎಳೆದಾಡುತ್ತಿದ್ದವು. ಅವುಗಳ ಹಿಂಸೆಯಿಂದ ಪಾರಾಗಲು ಯಾವುದಾದರೂ ಪ್ರಯತ್ನವನ್ನು ಪ್ರಾರಂಭಿಸೋಣವೆಂದರೆ ಚಿಕ್ಕಲಿಂಗಪ್ಪನವರ ಭಯ!

ಸೆತ್ತೆನಿಂಗ ದಿನಕ್ಕೆ ಏನಿಲ್ಲವೆಂದರೂ ಮೂರುನಾಲ್ಕು ಬಾರಿಯಾದರೂ ತಾಯಕ್ಕನ ಮನೆಯ ಮುಂದೆ ಓಡಾಡುತ್ತಲೇ ಇದ್ದನು. ಆದರೆ ಆ ಮನೆಯ ಕಡೆ ನೆಟ್ಟದೃಷ್ಟಿಯಿಂದ ನೋಡುತ್ತಿರಲಿಲ್ಲ. ಇದನ್ನು ತಿಳಿದ ತಾಯಕ್ಕನಿಗೆ ನಿರ್ಭೀತಿಯಾಯಿತು. ಅವನಿಂದ ಹಿಂದೆ ತನಗುಂಟಾಗುತ್ತಿದ್ದ ಕಿರುಕುಳ

ಗಳೆಲ್ಲವೂ ಮರೆತುಹೋಗಿ, ಅವನೊಬ್ಬ ಊರಿನಲ್ಲಿದ್ದಾನೆ ಎಂಬುದನ್ನೇ ಲೆಕ್ಕದಲ್ಲಿಟ್ಟುಕೊಳ್ಳದೇ ಇದ್ದುಬಿಟ್ಟಳು.

ನಾಲ್ಕು ಬಾರಿ ಕರೆಯುವುದಕ್ಕೆ ಹೋಗಿದ್ದರೂ ಪುಟ್ಟತಾಯಿಯನ್ನು ಅಳಿಯ ಕಳುಹಿಸಲಿಲ್ಲವಲ್ಲ ಎನ್ನುವ ಚಿಂತೆಯೊಂದನ್ನು ಬಿಟ್ಟರೆ ಈಗ ಇನ್ನಾವ ಚಿಂತೆಯೂ ಇಲ್ಲ ಎಂದುಕೊಂಡಳು. ಬೆಳಗಾಗೆದ್ದು ಹೊಲ, ತೋಟ, ಹಿತ್ತಲುಗಳ ಕಡೆ ಸುತ್ತಾಡಿ ಬರುವಳು. ಮಧ್ಯಾಹ್ನ ಅಡಿಗೆ ಮಾಡಿದರೆ ಊಟ, ಇಲ್ಲದಿದ್ದರೆ ಸಾಯಂಕಾಲದವರೆಗೆ ಕಾಲ ತಳ್ಳಿ ರಾತ್ರಿಗೆ ಅಡಿಗೆ ಮಾಡಿ ಊಟ ಮಾಡಿ ಸ್ವಲ್ಪ ತಂಗಳು ಮಿಗಿಸಿ ಮಲಗಿಬಿಡುತ್ತಿದ್ದಳು. ಈಚೆಗೆ ಅವಳಿಗೆ ತನ್ನಿಂದ ರೇಷ್ಮೆಹುಳುಗಳ ಕೆಲಸವಾಗುವುದಿಲ್ಲವೆಂದು ಬಿಟ್ಟುಬಿಟ್ಟಿದ್ದಳು. ಹೊಲದ ಕೆಲಸಗಳೇ ಸಾಕಾಗುತ್ತಿತ್ತು. ತೋಟದಲ್ಲಿ ನಾಲ್ಕು ತೆಂಗಿನಗಿಡಗಳನ್ನು ಬಿಟ್ಟು ಮತ್ತೇನೂ ಇರಲಿಲ್ಲ. ತೆಂಗಿನ ಕಾಯಿಗಳೂ ಕಳ್ಳರಿಂದಾಗಿ ಸರಿಯಾಗಿ ಸಿಕ್ಕುತ್ತಿರಲಿಲ್ಲ. ತೆಂಗಿನಮರಗಳಿದ್ದೂ ತೆಂಗಿನಕಾಯಿಗಳನ್ನು ತರುವುದಿಲ್ಲವೆಂಬ ಕೆಂಪಮ್ಮಣ್ಣಿಯವರ ಆಕ್ಷೇಪಣೆಯನ್ನು ತಪ್ಪಿಸಿಕೊಳ್ಳಲು ತಾಯಕ್ಕನಿಗೆ ಆಗಿಯೇ ಇರಲಿಲ್ಲ. ಒಂದು ಬಾರಿ ಮಟ್ಟೆಸಹಿತದ ನಾಲ್ಕು ತೆಂಗಿನಕಾಯಿಗಳನ್ನು ಕ್ರಯಕ್ಕೆ ಕೊಂಡು ತೆಗೆದುಕೊಂಡುಹೋಗಿ ಕೊಟ್ಟಿದ್ದಳು. ನಾಲ್ಕು ಕೆಂಪಮ್ಮಣ್ಣಿಯವರಿಗೆ ಸಮಾಧಾನವನ್ನು ತರಲಿಲ್ಲ.

ಮಾರನೆಯ ದಿನ ಅರಸಿನವರ ಮನೆಗೆ ಹೋಗಬೇಕೆಂದು ತಾಯಕ್ಕನಿಗೆ ಮನಸ್ಸಾಗಿತ್ತು. ಹಿಂದಿನ ರಾತ್ರಿಯೇ ಕೊಗ್ಗ ರಂಗನಿಗೆ ತೆಂಗಿನಮರ ಹತ್ತಲು ಹೇಳಿದ್ದಳು. ಬೆಳಿಗ್ಗೆ ರಂಗ ಬಂದು ಅವಳನ್ನು ಕರೆದುಕೊಂಡು ತೋಟಕ್ಕೆ ಹೋದನು. ನಾಲ್ಕು ಮರವನ್ನೂ ಸೋಸಲಾಗಿ ಹನ್ನೆರಡು ಕಾಯಿಗಳು ಸಿಕ್ಕಿದವು. ಅದರಲ್ಲಿ ಒಣಗಿದ ಗರಿಗಳೊಡನೆ ರಂಗನಿಗೆ ಎರಡು ಕಾಯಿಗಳು ಹೋದವು. ಇನ್ನುಳಿದ ಹತ್ತು ಕಾಯಿಗಳನ್ನೂ ಹಾರೆಯಲ್ಲಿ ಅವನೇ ಮಟ್ಟೆ ಬಿಡಿಸಿಕೊಟ್ಟು, ಮಟ್ಟೆಗಳನ್ನೂ ಸಂಪಾದಿಸಿಕೊಂಡಿದ್ದನು. ಅವನ ಹೆಗಲಮೇಲೆ ಕಾಯಿಗಳನ್ನು ಹೊರಿಸಿಕೊಂಡು ತಾಯಕ್ಕ ಮನೆಯ ಕಡೆ ಬಂದಳು. ಬುದ್ಧಿಯವರ ಮನೆಯವರೆಗೂ ಅವನ್ನು ಹೊತ್ತುಕೊಂಡು

ಬರಲು ರಂಗನನ್ನೇ ಗೋಗರೆಯುತ್ತಾ ಬರುತ್ತಿದ್ದ ತಾಯಕ್ಕನಿಗೆ ತನ್ನ ಮನೆಯು ಕಣ್ಣಿಗೆ ಬಿದ್ದ ಕೂಡಲೇ ಅದರ ಅಗತ್ಯವೇ ಇಲ್ಲವೆನಿಸಿತು.

ಮನೆಯ ಬಾಗಿಲಿನಲ್ಲಿ ಮಲ್ಲೇಶನ ಪೆಟ್ಟಿಗೆ ಇರಿಸಿತ್ತು. ಬಲಗಡೆ ಜಗಲಿಯ ಗೋಡೆಯಕಡೆಯ ಅಂಚಿನಲ್ಲಿ ಬುದ್ಧಿಯವರು ಕುಳಿತಿದ್ದರು. ತನ್ನನ್ನು ಹುಡುಕಿಕೊಂಡು ಮಲ್ಲೇಶ ಎಲ್ಲಿಗೋ ಹೋಗಿರಬೇಕೆಂದು ತಾಯಕ್ಕನಿಗೆ ಅರಿವಾಯಿತು. ಅವಸರದಿಂದ ಮನೆಗೆ ಬಂದು "ಯಾವಾಗ ದಯಮಾಡಿದಿರಿ ಬುದ್ಧಿ ?" ಎಂದಳು. "ಇದೇ ತಾನೇ ಅಮ್ಮಾ" ಎಂದು ಬುದಿಯವರು ಬಹಳ ತೂಕವಾಗಿ ಉತ್ತರಕೊಟ್ಟರು. ಅವಳು ಮಾಡಹೋದ ಯಾವ ಆತಿಥ್ಯವನ್ನೂ ಅವರು ಒಪ್ಪಿಕೊಳ್ಳಲಿಲ್ಲ. ತಮ್ಮ ಮನೆಯಲ್ಲಿ ಹಿಂದಿನ ದಿವಸ ನಡೆದ ಘಟನೆಗಳನ್ನೆಲ್ಲಾ ಸರಿಯಾಗಿ ವಿವರಿಸಿ, ತಮಗೆ ಎಲ್ಲಿಲ್ಲದ ಕೋಪ ಬಂದು ಹಾಗಾಯಿತೆಂದು ಒಪ್ಪಿಕೊಂಡು, ಅವಳ ಹುಡುಗನನ್ನು ಅವಳಿಗೆ ಒಪ್ಪಿಸಿಹೋಗಲು ಬಂದುದಾಗಿ ತಿಳಿಸಿ ಎದ್ದರು. ಎಷ್ಟೆಷ್ಟು ಬಗೆಯಲ್ಲಿ ಕೇಳಿಕೊಂಡರೂ ಅವರು ಪುನಃ ಕೂತುಕೊಳ್ಳಲಿಲ್ಲ. ಅವರು ಮಲ್ಲೇಶನು ಬರುವುದನ್ನೇ ಕಾಯುತ್ತಿದ್ದು ಅವನು ಬಂದೊಡನೆಯೇ ಹೊರಟುಬಿಟ್ಟರು.

ತಾಯಕ್ಕನ ಆಸೆಯೆಲ್ಲ ನಿರಾಸೆಯಾಗಿಹೋಯಿತು. ಮಗನ ಸ್ವಾಭಿಮಾನವನ್ನು ನಿಂದಿಸಿದರೂ ಉಪಯೋಗವಿಲ್ಲ, ಕೆಂಪಮ್ಮಣ್ಣಿಯವರ ಹುಚ್ಚು ಆಡಂಬರವನ್ನು ನಿಂದಿಸಿದರೂ ಸುಖವಿಲ್ಲ. ಬುದ್ಧಿಯವರ ಕೋಪವನ್ನು ತಪ್ಪೆಂದು ಹೇಳುವುದಕ್ಕೂ ಆಗುವುದಿಲ್ಲ. ಹೀಗಾಗಿ ತಾಯಕ್ಕ ತನ್ನ ಗ್ರಹಚಾರವನ್ನು ನಿಂದಿಸಿಕೊಳ್ಳುವುದಕ್ಕೆ ಮಾತ್ರ ಅಡ್ಡಿಯಿರಲಿಲ್ಲ. ಮಲ್ಲೇಶ ತನ್ನ ಮೈಕೈನೋವುಗಳಿಂದ ಸುಧಾರಿಸಿಕೊಳ್ಳಲು ಎಂಟುಹತ್ತು ದಿನಗಳನ್ನು ತೆಗೆದುಕೊಂಡನು. ಅನಂತರ ಹಿಂದಿನಂತೆ ಊರಿನಿಂದಲೇ ಸ್ಕೂಲಿಗೆಹೋಗುವುದಾಗಿ ಹೇಳಿ ಹೋಗಿಬರಲಾರಂಭಿಸಿದನು.

ಒಂದು ವರ್ಷವೂ ತಪ್ಪದೇ ಮುಂದಿನ ಕ್ಲಾಸುಗಳಿಗೆ ಹೋಗುತ್ತಿದ್ದ ಮಲ್ಲೇಶನ ವಿದ್ಯಾಭ್ಯಾಸವನ್ನು ನಿಲ್ಲಿಸುವ ಯೋಚನೆ ತಾಯಕ್ಕನಿಗೆ ಬರಬೇಕಾದ್ದಿರಲಿಲ್ಲವಲ್ಲ. ಅವನು ಹಾಗೆ ತೇರ್ಗಡೆಯಾಗುತ್ತಿದ್ದುದೇ ಅವನ

ಮಿಕ್ಕಿತರ ನಡೆವಳಿಕೆಗಳು ಸರಿಯಾಗಿವೆಯೆಂಬುದಕ್ಕೆ ಸಾಕ್ಷಿಯಾಗುವುದಿಲ್ಲವೇ ? ಆದ್ದರಿಂದ ಮಲ್ಲೇಶನ ವಿದ್ಯಾಭ್ಯಾಸ ನಿಲ್ಲಲಿಲ್ಲ. ಅವನು ಊರಿಂದ ನೆಟ್ಟಗೆ ಸ್ಕೂಲಿಗೆ ಹೋಗುತ್ತಿದ್ದುದೇನೋ ನಿಜ. ಆದರೆ ಬುದ್ಧಿಯವರ ಕ್ಲಾಸಿನಲ್ಲಿರಲು ಅವನಿಗೆ ಮನಸ್ಸಾಗುತ್ತಿರಲಿಲ್ಲ. ಹೇಗಾದರೂ ಮಾಡಿ ಹೊರಕ್ಕೆ ಬಂದುಬಿಡುತ್ತಿದ್ದನು. ಆ ಗಂಟೆಯನಂತರ ಪುನಃ ಸ್ಕೂಲಿಗೆ ಹೋದರೆ ಹೋದ, ಬಿಟ್ಟರೆ ಬಿಟ್ಟ. ಸ್ಕೂಲು ಬಿಡುವ ಹೊತ್ತಿಗೆ ಸರಿಯಾಗಿ ಅವನು ಆ ಊರನ್ನು ಬಿಟ್ಟು ತನ್ನ ಊರಿನ ಕಡೆಗೆ ಹೋಗುತ್ತಿದ್ದ. ಮಿಡಲ್ ಸೆಕೆಂಡ್ ಇಯರಿನಲ್ಲಿ ಒಂದು ವರ್ಷ ಫೇಲಾಗಿದ್ದ ಹುಚ್ಚನ ಮಾತಿಗೆ ಬೆಲೆಯಿರಲಿಲ್ಲವಾದ್ದರಿಂದ ಅವನ 'ಚಾಡಿ' ಪರಿಣಾಮಕಾರಿಯಾಗಿರುತ್ತಿರಲಿಲ್ಲ. ಪೋಲೀಹುಡುಗರಲ್ಲೊಬ್ಬನಾಗಿದ್ದ ಮಲ್ಲೇಶನನ್ನು ತಿದ್ದಲು ಹೊರಡುವಷ್ಟು ಧೈರ್ಯ ಚಿದಂಬರನಿಗಂತೂ ಮೊದಲಿನಿಂದಲೂ ಇರಲೇ ಇಲ್ಲ.

ಮಲ್ಲೇಶ ಸ್ಕೂಲು ಬಿಡುವಹೊತ್ತಿಗಾದರೂ ಊರಿನಕಡೆಗೆ ತಪ್ಪದೇ ಹೊರಟುಬಿಡುತ್ತಿದ್ದುದಕ್ಕೆ ಒಂದು ಕಾರಣವಿತ್ತು. ಅದು ಪ್ರಲ್ಹಾದ ಚರಿತ್ರೆ ! ಮಲ್ಲೇಶ, ಪ್ರಹ್ಲಾದನ 'ಮಂದರ ಗಿರಿಧರನೇ | ಶ್ರೀ ವರನೇ ಬಾ' ಮಟ್ಟನ್ನು ಬಹಳ ಚೆನ್ನಾಗಿ ಅನ್ನುತ್ತಿದ್ದನಂತೆ. ಅದನ್ನು ಕಂಡುಕೊಂಡ ಸೆತ್ತೆನಿಂಗ ಪ್ರಲ್ಹಾದನ ಪಾರ್ಟನ್ನು ಮಲ್ಲೇಶನಿಗೇ ಕೊಡಬೇಕೆಂದು ಮಾತನಾಡುತ್ತಿದ್ದನು. ಅದರಿಂದ ಪ್ರೋತ್ಸಾಹಿತನಾದ ಮಲ್ಲೇಶನು 'ಪ್ರಾಟೀಸು' ಮೊದಲಾಗುವುದಕ್ಕೆ ಮುಂಚೆ ಬಂದು ನಾಟಕದ ಮನೆಯಲ್ಲಿ ಸೇರುತ್ತಿದ್ದನು. ಹೊತ್ತಿಗೆ ಮುಂಚೆ ಸೆತ್ತೆನಿಂಗನು ಬಂದ ದಿನ ಮಲ್ಲೇಶನ ಕೈಯಲ್ಲಿ ಆ ಮಟ್ಟನ್ನು ಎರಡು ಮೂರು ಬಾರಿ ಹೇಳಿಸುತ್ತಿದ್ದನು.

ಇದರಿಂದ ಪ್ರಲ್ಹಾದನ ಪಾರ್ಟನ್ನು ಮಾಡುತ್ತಿದ್ದ ಜವನಪ್ಪನ ಕಿರಿಯ ಮಗ ಗುರುಲಿಂಗನಿಗೆ ಅಸೂಯೆ ಹುಟ್ಟಿ, ತನ್ನ ಪಾರ್ಟನ್ನು ತಾನೇ ದಿನದಿನಕ್ಕೆ ಕೆಡಿಸಿಕೊಳ್ಳುತ್ತಾ ಬಂದನು. ನಿಷ್ಠೂರವೇ ಇಲ್ಲದೆ ಸೆತ್ತೆನಿಂಗ ಗುರುಲಿಂಗನನ್ನು ಆ ಪಾರ್ಟಿನಿಂದ ತಪ್ಪಿಸಿ ಅದನ್ನು ಮಲ್ಲೇಶನಿಗೆ ಕೊಡುವುದಕ್ಕೆ ಸಾಧ್ಯವಾಯಿತು. ಇದರಿಂದ ಮಲ್ಲೇಶನಿಗೆ ಬಹಳ ಸಂತೋಷ

ವಾಯಿತು. ಮೂರುಹೊತ್ತೂ ಮಲ್ಲೇಶನಿಗೆ ಪ್ರಲ್ಹಾದನ ಮಾತುಗಳೇ ಹಾಡುಗಳೇ ಆಗಿಹೋಯಿತು.

ಬಹಳ ದಿನಗಳವರೆಗೆ ತಾಯಕ್ಕನಿಗೆ ಈ ವಿಷಯ ತಿಳಿದೇ ಇರಲಿಲ್ಲ. ಮಗ ಆಗಾಗ್ಗೆ ಗೊಣಗಿಕೊಳ್ಳುತ್ತಿದ್ದ ಮಾತು ಹಾಡುಗಳನ್ನು ಅವಳು ಅಷ್ಟು ಗಮನದಿಂದ ಕೇಳುತ್ತಿರಲಿಲ್ಲ. ಒಂದು ದಿನ ಅವನು ಪಾರ್ಟುಮಾಡುವ ವಿಷಯ ಹೊರಬೀಳಲೇಬೇಕಾಗಿಬಂದಿತು. ಅವನು ಮೇಷ್ಟ್ರಿಗೆ (ಸೆತ್ತೆನಿಂಗ ನಿಗೆ) ಏನನ್ನೂ ಕೊಡದೇ ಇರುವುದು ಅವನಿಗೇ ಸರಿಯಾಗಿ ತೋರಲಿಲ್ಲ. ರೂಪಾಯಿಗಟ್ಟಲೆ ಹಣಕ್ಕೆ ತಾಯಿಯನ್ನು ಕೇಳಿದರೆ ಅವಳಿಗೆ ಅನುಮಾನ ಬಂದುಬಿಡಬಹುದೆಂದು ಮನೆಯಿಂದ ಮೆಲ್ಲಗೆ ಜೋಳವನ್ನು ಸಾಗಿಸಿ ಅಂಗಡಿಗೆ ಹಾಕಿ ಅಂಗಡಿಯಿಂದ ಮೇಷ್ಟ್ರಿಗೆ ಬೇಕಾದುದನ್ನು ತೆಗೆದು ಕೊಂಡುಹೋಗಿ ಕೊಡುತ್ತಿದ್ದನು. ದಿನದಿನಕ್ಕೆ ಕಡಿಮೆಯಾಗುತ್ತಿದ್ದ ಜೋಳ ದಿಂದ ತಾಯಕ್ಕ ಮಗನ ಗುಟ್ಟನ್ನು ಹಿಡಿದುಬಿಟ್ಟಳು. ಮಗನನ್ನು ಬೈದು "ಪಾರ್ಟುಗೀರ್ಟು ಮಾಡಬೇಡ" ಎಂದಳು. "ನಾಟಕ ಇನ್ನು ನಾಕೇ ತಿಂಗಳದೆ, ಈಗ ಬೇರೆಯೋರ್ನ ಮಾಡ್ಕಳಕ್ಕಾಗಕ್ಕಿಲ್ಲವಂತೆ'' ಎಂದು ಮಲ್ಲೇಶ ಸಮಾಧಾನ ಹೇಳಿದನು. ಆ ಸಮಾಧಾನಕ್ಕಿಂತ ಹೆಚ್ಚಾಗಿ ಒಂದೆರಡು ದಿನಗಳು ಕಳೆದಮೇಲೆ ತನ್ನ ಮಗನು ರಾಜಕುಮಾರನ ಅಲಂ ಕಾರ ಮಾಡಿಕೊಂಡು ಊರವರ ಮುಂದೆ ಬರುವುದನ್ನು ನೋಡಬೇಕೆಂಬ ಆಸೆ ಅವಳಲ್ಲಿ ಹುಟ್ಟಿತ್ತು. ಮಲ್ಲೇಶ ಧೈರ್ಯವಾಗಿ ಅಭ್ಯಾಸಮಾಡಲಾರಂಭಿ ಸಿದನು. ನಾಟಕದ ಮೇಷ್ಟ್ರು ತಪ್ಪಿದರೂ ಮಲ್ಲೇಶ ನಾಟಕದ ಮನೆಗೆ ತಪ್ಪಿಸಿಕೊಳ್ಳುತ್ತಿರಲಿಲ್ಲ. ಒಂದೊಂದು ದಿನ ಮೇಷ್ಟ್ರು ಅಕ್ಕಪಕ್ಕದ ಊರಿಗೆ ಎದ್ದುಬಿಡುತ್ತಿದ್ದುದುಂಟು. ಆಗ 'ಕಶ್ಯಪ'ನ ಪಾತ್ರಧಾರಿಯಾದ ಯೀರಣ್ಣ ಗುಳಿಯಲ್ಲಿ ಕುಳಿತು ತನಗೆ ಬಂದಹಾಗೆ 'ಹಾರ್ಮ್ಯನಿ' ಬಾರಿಸುತ್ತಿದ್ದನು. 'ಪ್ರಾಟೀಸು' ಅದೇ ಒಂದು ರೀತಿಯಾದರೂ, ನಡೆಯುತ್ತಲೇ ಇತ್ತು.

ತಾಯಕ್ಕ ಒಬ್ಬಳನ್ನು ಬಿಟ್ಟು ಮಲ್ಲೇಶನಾದಿಯಾಗಿ ಹುಚ್ಚ, ಚಿದಂ ಬರ, ಬುದ್ಧಿಮೇಷ್ಟ್ರು ಮುಂತಾದ ಎಲ್ಲರಿಗೂ ಮೊದಲೇ ತಿಳಿದಿದ್ದ ಪ್ರಕಾರ ಆ ಭಾರಿಯ ಐದು ರೂಪಾಯಿನ ಪರೀಕ್ಷೆಯಲ್ಲಿ ಮಲ್ಲೇಶನಿಗೆ ಫೇಲಾಯಿತು.

ಅದರ ಅಪಖ್ಯಾತಿಯೆಲ್ಲ 'ಪ್ರಲ್ಹಾದ ಚರಿತ್ರೆ'ಯಮೇಲೆ ಹೋಯಿತು. ಮಗನ ಬುದ್ಧಿವಂತಿಕೆಯಮೇಲೆ ತಾಯಕ್ಕನಿಗೆ ನಂಬಿಕೆ ಮಾತ್ರ ತಪ್ಪಿ ಹೋಗಲಿಲ್ಲ. "ಈ ನಾಟಕ ಒಂದು ಆಗ್ಹೋದರೆ ಮುಂದ್ಲೊರಸ ಪರೀಕ್ಸೆ ಆಗೇಆಯ್ತದೆ" ಎಂದುಕೊಂಡಳು. ಫೇಲಾದ ಹುಡುಗರನ್ನು ಅತಿಯಾಗಿ ನಿಂದಿಸಿಬಿಡಬಾರದೆಂದೂ, ಅವರು ಹುಚ್ಚುಹುಚ್ಚಾಗಿ ಏನನ್ನು ಮಾಡಿಕೊಳ್ಳುವುದಕ್ಕೂ ಹೇಸುವುದಿಲ್ಲವೆಂದೂ ಯಾರೋ ತಾಯಕ್ಕನಿಗೆ ಹೇಳಿದ್ದದ್ದು ಜ್ಞಾಪಕ ಬಂದಿತು. ಮಗ ಕಣ್ಣೆದುರಿಗೆ ಚೆನ್ನಾಗಿದ್ದರೆ ಸಾಕೆಂದು ತಾಯಕ್ಕ ಅವನಿಗೆ ನಾಟಕದ ಮೇಲಿದ್ದ ಆಸೆಯನ್ನೇ ಪ್ರೋತ್ಸಾಹಿಸಿದಳು.

ನಾಟಕದ ತಯಾರಿ ಭರದಿಂದ ಸಾಗಿತ್ತು. ಮೈಸೂರಿನಿಂದಲೇ ನಾಟಕದ ಸ್ಟೇಜಿನ ಸಾಮಾನುಗಳನ್ನೆಲ್ಲಾ ತರುವುದೆಂದು ಗೊತ್ತಾಗಿತ್ತು. ಮೈಸೂರಿನಿಂದ ನಾಟಕದ ದಿವಸಕ್ಕೆ ಪಿಟೀಲಿನವರೊಬ್ಬರನ್ನೂ ಕೊಳಲಿನವರೊಬ್ಬರನ್ನೂ ಕರೆಸಬೇಕೆಂದಾಗಿತ್ತು. ನರಸಿಂಹಾವತಾರದವನ ಅಲಂಕಾರಕ್ಕೆ ಬ್ಯಾಟರಿ ಲೈಟುಗಳನ್ನು ತರಿಸುತ್ತೇನೆಂದು ಮೇಷ್ಟ್ರು ಜಂಭ ಹೊಡೆಯುತ್ತಿದ್ದರು. ನಟರೆಲ್ಲರೂ ಅವರ ಉಪಚಾರದಲ್ಲಿ ತೊಡಗಿದ್ದರು. ಮನಸ್ಸಿಲ್ಲದ ಮನಸ್ಸಿನಿಂದ ತಾಯಕ್ಕನೂ ಮೇಷ್ಟರಿಗೆಂದು ಮಗನ ಮೂಲಕ ಆರು ರೂಪಾಯಿಗಳನ್ನು ಕೊಟ್ಟಿದ್ದಳು.

ಮೇಷ್ಟ್ರು ಕೈಗೆ ದುಡ್ಡು ಬಿದ್ದ ದಿನ ಸಾಮಾನ್ಯವಾಗಿ ಅವರು ಕಿರೀಕಾಟಿಯಲ್ಲಿರುತ್ತಿರಲಿಲ್ಲ, ಅಥವಾ ನಾಟಕದ 'ಪ್ರಾಟೀಸಿ'ಗೆ ಅವರು ಚಕ್ಕರು ಹಾಕಿದ ದಿನ ಅವರ ಕೈಗೆ ಯಾರೋ ದುಡ್ಡುಕೊಟ್ಟಿದ್ದಾರೆ ಎಂದು ತಿಳಿದುಕೊಂಡುಬಿಡಬಹುದಾಗಿತ್ತು. ಅವರು ಎಲ್ಲಿಗೆ ಹೋಗುತ್ತಿದ್ದರೋ ಅದಂತೂ ಒಬ್ಬರಿಗೂ ಖಚಿತವಾಗಿ ತಿಳಿಯುತ್ತಿರಲಿಲ್ಲ. ಎಲ್ಲರೂ ಗುಸಗುಸ ಮಾತನಾಡಿಕೊಳ್ಳುವುದರಲ್ಲಿ ಒಬ್ಬೊಬ್ಬರು ಒಂದೊಂದು ಊರಿನ ಹೆಸರು ಹೇಳುತ್ತಿದ್ದರು. ಒಬ್ಬೊಬ್ಬರು ಒಂದೊಂದು ಹೆಂಗಸಿನ ಹೆಸರು ಹೇಳುತ್ತಿದ್ದರು. ಒಬ್ಬರು ಮೇಷ್ಟ್ರಿಗೆ 'ಭಂಗೀಹಲ್ವ' ತಿನ್ನುವ ಷೋಕಿ ಮಿತಿಮಿೀರಿದೆ ಎಂಬ ಹಳೆ ಸಮಾಚಾರವನ್ನೇ ಒತ್ತಿಹೇಳಿ, ಎತ್ತಿಹಿಡಿದು ಅವರು ಹೋಗಿರುವುದು ತಾಲ್ಲೋಕಿಗೇ ಎಂದು ವಾದಿಸುತ್ತಿದ್ದರು. ಹೇಗಾದರಾಗಲಿ ಮೇಷ್ಟ್ರು

ಆದಿನ ಬಂದರೆ ಮಧ್ಯರಾತ್ರಿ ಮುಗಿದಮೇಲೆ ಅಭ್ಯಾಸ ಮುಗಿಯುವಹೊತ್ತಿಗೆ ಬರುತ್ತಿದ್ದರು, ಇಲ್ಲದಿದ್ದರೆ ಇಲ್ಲವೇಇಲ್ಲ. ಮಂಡಲಿಯವರು ಮಾತ್ರ ತಮ್ಮ ಅಭ್ಯಾಸವನ್ನು ನಡೆಸಿಯೇ ಮನೆಗಳಿಗೆ ಹೋಗುತ್ತಿದ್ದರು.

ಅಂದೂ ಹಾಗೆಯೇ ಆಗಿತ್ತು. ಎಲ್ಲ ನಟರೂ ಸೇರಿ ಒಂದು ಗಂಟೆ ಯಾದರೂ ಮೇಷ್ಟ್ರ ಸುಳಿವು ಹತ್ತಲಿಲ್ಲ. ಸರಿ, ಕಶ್ಯಪನ ಯೀರಣ್ಣ ಹಳ್ಳಕ್ಕೆ ಇಳಿದು 'ಹಾರ್ಮ್ಮನಿ'ಯನ್ನು ಮೇಲೆತ್ತಿದನು. ಮಲ್ಲೇಶಮುಂತಾದವರಿಬ್ಬರು ಮೂರುಜನ 'ರಾಮ ಜಯತು ಶ್ರೀ' ಪ್ರಾರಂಭಿಸಿದರು. ಹಾಡು ಊರಿನ ಜನರೆಲ್ಲರ ಕಿವಿಯನ್ನೂ ಮುಟ್ಟಿತು. ನಿದ್ದೆಬರದಿದ್ದವರನ್ನು ನಾಟಕದ ಮನೆಯಕಡೆಗೆ ಆಕರ್ಷಿಸಿತು. ನಿದ್ದೆ ಬರುತ್ತಿದ್ದವರಿಗೆ ಜೋಗುಳವಾಯಿತು.

ಹಾಗೆಯೇ ಕಾಳಕ್ಕನ ಮನೆಯ ಜಗುಲಿಯಮೇಲೆ ಕಾಳಕ್ಕನೊಡನೆ ಮಾತನಾಡುತ್ತ ಕುಳಿತಿದ್ದ ತಾಯಕ್ಕನನ್ನು ಅದು ಮಲಗುವ ಹೊತ್ತಾಯಿ ತೆಂದು ಎಚ್ಚರಿಸಿತು! "ಹೋಗಿ ಮಲೀಕೋ ಕಾಳಕ್ಕ ನಾನೂ ಹೋಯ್ತೀನಿ" ಎಂದು ತಾಯಕ್ಕ ಎದ್ದಳು ಕಾಳಕ್ಕ "ಹ್ಞೂ, ನೋಡ್ದ್ಯಾ ಎಷ್ಟು ಒತ್ತಾಗೋಯ್ತು! ಅಡಿಕೇ ಕೊಟ್ಟುಬುಟ್ಟುಹೋಗಕ್ಕೆ ಬಂದೋಳು ನೀನು. ಬಾಗಿಲೂ ತಗದ್ಹಾಕ್ಬುಟ್ಟುಬಂದಿದ್ಯೇನೋ? ನಾಯಿಗೀಯೀ ನುಕ್ಕಂಡವು" ಎಂದು ಕಾಳಕ್ಕ ಎದ್ದು ತನ್ನ ಮನೆಯ ಒಳಕ್ಕೆ ಹೋದಳು.

ತಾಯಕ್ಕನೂ ಮನೆಯೊಳಕ್ಕೆ ಬಂದು ಬಾಗಿಲನ್ನು ಹಾಕಿಕೊಂಡಳು. ಇನ್ನು ಮಲ್ಲೇಶ ಬರುವುದು ಎಷ್ಟು ಹೊತ್ತಾಗುವುದೋ ಚಿಲಕವನ್ನು ತೆಗೆದೇ ಮಲಗಿಬಿಡೋಣವೆಂದು ತಾಯಕ್ಕ ಒಮ್ಮೆ ಯೋಚಿಸಿದಳು. ಆದರೆ ಅದೇಕೋ ಅವಳಿಗೆ ಅದು ಇಷ್ಟವಾಗದೇ ಚಿಲಕವನ್ನು ಹಾಕಿಕೊಂಡೇ ಹೋದಳು. ಹಜಾರದಲ್ಲಿ ಉರಿಯುತ್ತಿದ್ದ ಸೀಮೇಎಣ್ಣೆ 'ಬುಟ್ಟಿ' ಆರಿ ಹೋಗಿತ್ತು. ಕಡ್ಡೀಪೆಟ್ಟಿಗೆ ಕೈಹಾಕಿದ ತಕ್ಷಣ ಸಿಕ್ಕಿತು. ಇನ್ನೊಂದು ಬಾರಿ ದೀಪವೇಕೆ ಎಂದುಕೊಂಡು ಕತ್ತಲೆಯಲ್ಲೇ ಹಾಸಿಕೊಂಡು ಕಂಬಳಿ ಹೊದ್ದು ಮಲಗಿದಳು. ಎಮ್ಮೆ ಒಂದು ಸರ್ತಿ ಅಸ್ವಾಭಾವಿಕವಾಗಿ ಉದ್ದ ವಾಗಿ ಕೂಗಿತು.

ಅವಳಿಗೆ ಬೇಗನೆಯೇ ನಿದ್ದೆಬಂದಿತು. ಅರೆನಿದ್ದೆಯಲ್ಲಿ ಕೂಡ ಒಮ್ಮೆ ಎಮ್ಮೆ ಮೊದಲಿನಂತೆಯೇ ಕೂಗಿದರೂ ಏಳಲಾರದೇ ಹಾಗೆಯೇ ಮಲಗಿಬಿಟ್ಟಳು. ಎಮ್ಮೆಯೂ ಸುಮ್ಮನಾಗಿಬಿಟ್ಟಿತು. ದೂರದಲ್ಲಿ ಅಸ್ಪಷ್ಟ ವಾಗಿ ನಾಟಕದ ಹಾಡು, ಮಾತುಗಳು ಕೇಳಿಸುತ್ತಲೇ ಇದ್ದವು. ಆದರೆ ತಾಯಕ್ಕನಿಗಲ್ಲ. ಅವಳಿಗೆ ಸುಖವಾದ ನಿದ್ದೆ. ಎಷ್ಟೋ ಹೊತ್ತು ಕಳೆ ಯಿತು. ಸುಮಾರು ಹನ್ನೊಂದೂವರೆ ಗಂಟೆಯಿರಬಹುದು, ಆಗ ಚಂದ್ರೋ ದಯವಾಗಿತ್ತು.

ತಾನು ಯಾವುದೋ ದೊಡ್ಡ ಹೊಳೆಯಲ್ಲಿ ಸ್ನಾನ ಮಾಡುತ್ತಿದ್ದ ಹಾಗೂ, ದಡದಲ್ಲಿ ಮಲ್ಲೇಶ ಕುಳಿತು ಹತ್ತಿ ಬಿಡಿಸುತ್ತಿದ್ದಹಾಗೂ ಅಷ್ಟರಲ್ಲಿ ಪೋಲೀಸಿನವರು ಬಂದು ಮಲ್ಲೇಶನನ್ನು ಹಿಡಿದುಕೊಂಡಹಾಗೂ, ಅವನು ಅವರ ಕೈಯಿಂದ ತಪ್ಪಿಸಿಕೊಂಡು ಓಡಿಬಂದು ತನ್ನ ತೊಡೆಯಮೇಲೆ ಬಿದ್ದ ಹಾಗೂ, ತಾಯಕ್ಕ ಕನಸು ಕಾಣುತ್ತಿದ್ದಳು. ತೊಡೆಯಮೇಲೆ ಬಿದ್ದ ಹಾಗೆ—

—ನಿಜವಾಗಿಯೂ ತಾಯಕ್ಕನ ತೊಡೆಯಮೇಲೆ ಯಾರೋ ಬಂದು ಬಿದ್ದಹಾಗೆಯೇ ಆಗಿತ್ತು. ಎಚ್ಚರವಾಗಿದೆ ಎಂಬುದನ್ನು ಖಚಿತಮಾಡಿ ಕೊಂಡಮೇಲೆ ತಾಯಕ್ಕ ತಲೆಯೆತ್ತಿ ನೋಡಿದಳು. ಅವಳ ಕಾಲುಬಳಿ ಯಾರೋ ಕುಳಿತಿದ್ದಂತಿತ್ತು ! !

ಅದು ಮಲ್ಲೇಶನ ಆಕೃತಿಗಿಂತ ದೊಡ್ಡದೆಂಬುದನ್ನು ಮನಗಂಡ ತಕ್ಷಣವೇ ತಾಯಕ್ಕನ ಬಾಯ ದ್ರವವೆಲ್ಲ ಆರಿಹೋಗಿ ನಾಲಿಗೆ ಒಳಮುಖ ವಾಗಿ ಸೇರಿಕೊಳ್ಳಲಾರಂಭಿಸಿತು. 'ಜಿಲ್' ಎಂದು ಬೆವರಿದಳು. ಬೆಳು ದಿಂಗಳು ಆ ಆಕೃತಿಯ ಹಿಂದೆ ಚೆಲ್ಲಿದ್ದು ಅದರ ಭಯಂಕರತೆಯನ್ನು ಮತ್ತಷ್ಟು ಎತ್ತಿತೋರಿಸುತ್ತಿತ್ತು. ತಾಯಕ್ಕ 'ದೈಯ್ಯ'ವೆಂದೊಮ್ಮೆಬಗೆದಳು. ಅವಳ ಅಂಗಾಂಗಗಳು ಕಲ್ಲಿನಿಂದ ಮಾಡಿದಂತಾಗಿತ್ತು. ಅವಳ ಎದೆ ಒಡೆದು ಹೋಗುವಷ್ಟು ಬಿರುಸಾಗಿ ಬಡಿದುಕೊಳ್ಳುತ್ತಿತ್ತು.

ಆಕೃತಿ ಮೆಲ್ಲನೆ "ಹೆದರ್ಕಬೇಡ ತಾಯಿ, ನಾನು !" ಎಂದು ಪಿಸು ಗುಟ್ಟಿತು. ತಾಯಕ್ಕನ ಉಡುಗಿಹೋಗಿದ್ದ ಶಕ್ತಿಯೆಲ್ಲ ತಟ್ಟನೆ ಹಿಂದಿರುಗಿ

ಚಾಟಿ ಏಟು ತಿಂದವಳಂತೆ ಎದ್ದು ಕುಳಿತಳು "ಯಾರಾ?" ಎನ್ನುವಷ್ಟು ಅವಳ ನಾಲಿಗೆಗೆ ಸಾಧ್ಯವಾಯಿತು. ಆಕೃತಿ "ನಾನು, ನಾಟಕದ ನಿಂಗಪ್ಪ" ಎಂದಿತು ತಾಯಕ್ಕನ ಮೈತುಂಬಾ ಬೆಂಕಿಹೊತ್ತಿಕೊಂಡಹಾಗಾಯಿತು. ಸಿಡಿದೆದ್ದು ನಿಂತಳು.

"ನಾಟಕದ ನಿಂಗಪ್ಪನಾ! ಬಾ ಮಗನೆ ನಿನಗಿವತ್ತು ಆಯಸಾ ಮುಗೀತು."

"ತಾಯಿ ಸುಮ್ನ್ಯಾಕೆ ಹಾರಾಡೀಯೇ? ಬೇಡ, ನನ್ನಮೇಲೆ ನಿನಗಿಷ್ಟು ಜಿದ್ದು ಬೇಡ."

"ಈವತ್ತು ನೀನು ಆಚೆಗೆ ಹೋಯ್ತೀನೀ ಅಂದ್ರೂ ಜೀವಸಹಿತ ಬುಡಕ್ಕಿಲ್ಲ."

"ಏನು ಕತ್ತರಿಸಾಕ್ಬುಟ್ಟಿಯಾ?"

"ನೋಡ್ಕೋ."

"ಪಾಪ ಪಾಪ. ನಿನ್ನ ಪಿರೀತಿ ಪಟೇಲ ಚಿಕ್ಕಲಿಂಗಪ್ಪನ ಕೈಲೂ ಆಗದಿಲ್ಲ. ಇನ್ನು ಮೂರುಕಾಸಿನ ಹೆಂಗಸು ನಿನ್ನಕೈಲೇನಾಯ್ತದೆ ಮೂದೇವಿ? ನಾ ಹೇಳ್ದಂಗೆ ಕೇಳಿ ಮಾನ ಉಳೀಸ್ಕೊ!"

"ಮೂರುಕಾಸಿನ ಹೆಂಗಸು?"

ತಾಯಕ್ಕ ಓಡಾಡತೊಡಗಿದಳು. ಅವಳ ಕೈಗೆ ಬೆಂಕಿಯಪೆಟ್ಟಿಗೆ ಸಿಕ್ಕಲಿಲ್ಲ. ಅವಳು ಹುಡುಕುತ್ತಿರುವುದು ಬೆಂಕಿಯಪೆಟ್ಟಿಗೆಯನ್ನೆಂದು ತಿಳಿದು ಸೆತ್ತೆ ತನ್ನ ಜೇಬಿನಿಂದ ಬೆಂಕಿಪೆಟ್ಟಿಗೆಯನ್ನು ತೆಗೆದು ಕುಲುಕಿ ಶಬ್ದ ಮಾಡಿದನು. ತಾಯಕ್ಕನಿಗೆ ಬೆಂಕಿಪೆಟ್ಟಿಗೆಯೇ ಮುಖ್ಯವಾಗಿರಲಿಲ್ಲ. ಓಡಾಡುತ್ತಲೇ ಇದ್ದಳು. ಸೆತ್ತೆ ಅವಳಕಡೆಗೆ ಮುಂದುವರಿದನು ಅವನು ಹತ್ತಿರವಾಗುತ್ತಿದ್ದಹಾಗೆಲ್ಲ ತಾಯಕ್ಕ ಬೇರೆಯಕಡೆಗೆ ಹೋಗುತ್ತಿದ್ದಳು. ಆದರೂ ಅವಳು ಹಜಾರವನ್ನು ಮಾತ್ರ ಬಿಟ್ಟುಹೋಗುತ್ತಿರಲಿಲ್ಲ.

"ಚಿಕ್ಕಲಿಂಗಪ್ಪ ನಿನ್ನ ಕಾಪಾಡ್ತನೇ ಅಂದ್ಕಂಡಿದೀಯೆ? ಅವನು ನಿನಗೆ ಬಡ್ಡೀನೂ ಬುಡಲ್ಲ ತಿಳ್ಕೊ ತಾಯಿ. ನೀನು ಅವನಿಗೆ ನನ್ನ ಮೇಲೆ ಚಾಡಿ ಹೇಳಿದೀಯೆ! ಅವನೊಂದಿನ ನನ್ನ ಸಂತೇಲಿ ಹೊಡೀಸವನೆ!

ಆಗಲಿ, ನಾನೂ ಹೊಟ್ಟೇಲೇ ಮಡಗಿದೀನಿ, ಸಮಯ ಕಾಯ್ತಾ ಇದೀನಿ. ನನಗೇನು ಹೆಂಡ್ರಾ ಮಕ್ಕಳಾ! ಅವನ್ನ ಮುಗಿಸ್ಬುಡ್ತೀನಿ ಬೇಕಾದರೆ! ತಾಯಿ, ನೀನು ಒಸಿ ಯಾರು ಸರಿ ಅನ್ನದ್ನ ಆಲೋಚನೆಮಾಡು. ದುಡುಕ ಬೇಡ.''

"ಬಾಯಿಗೆ ಬಂದಂಗಾಡೀಯಾ ಪಿಚಾಚಿ ? ಆಡು ಆಡು. ನಿನ್ನಿಷ್ಟ ಬಂದದಾಡ್ಕೋ ಇಂದು."

ತಾಯಕ್ಕನ ಆ ಔದಾಸೀನ್ಯದ ಅರ್ಥವಾಗಲಿಲ್ಲ ಸೆತ್ತೆಗೆ. ಅವಳನ್ನು ಹಿಡಿಯುವ ಪ್ರಯತ್ನವನ್ನಂತೂ ಮಾಡುತ್ತಲೇ ಇದ್ದನು. ತಾಯಕ್ಕ ಅವನ ಕೈಗೆ ಸಿಕ್ಕಿಯೂಸಿಕ್ಕಿದಳು. ಒದ್ದಾಡಿದಳು. ಗೀರಿದಳು, ಕಚ್ಚಿ ದಳು. ತಪ್ಪಿಸಿಕೊಂಡಳು. ಪುನಃ ಓಡಾಡುತ್ತಾ ಹುಡುಕಾಡಿದಳು. ಪುನಃ ಅವನಕೈಗೆ ಸಿಕ್ಕಿಹಾಕಿಕೊಂಡಳು. ಪುನಃ ಸೆಣೆಸಾಟ!

ಸಿಕ್ಕಿತು! ರೇಷ್ಮೇಹುಳುಗಳಿಗೆ ಸೊಪ್ಪು ಕತ್ತರಿಸುವ ಚೂರಿ! ಕೊನೆಗೆ ತೊಲೆಯಮೇಲೆ ಅದನ್ನಿಟ್ಟದ್ದುದ್ದು ಜ್ಞಾಪಕಬಂದು ಸೆತ್ತೆಯೊಡನೆ ಸೆಣಸಾಡುತ್ತಲೇ ನೆಗೆದು ಅದನ್ನು ತೆಗೆದುಕೊಂಡಳು. ಅದರಲ್ಲಿ ಅವನ ಭುಜಕ್ಕೆ ಹೊಡೆಯಲಾರಂಭಿಸಿದಳು. 'ಹಾ' ಎಂದನು ಸೆತ್ತೆ. ನಿಂತಲ್ಲಿ ನಿಂತನು. ತಾಯಕ್ಕನೂ ಸ್ವಲ್ಪದೂರ ಸರಿದು ನಿಂತಳು. ಅವಳಕೈಯಲ್ಲಿ ಸೆತ್ತೆಯನ್ನು ಕೊಂದುಬಿಡಲು ಸಿದ್ದವಾಗಿದ್ದ ಚೂರಿ ಅವನನ್ನೇ ನೋಡು ತ್ತಿತ್ತು.

ಇಬ್ಬರಿಗೂ ಪರಸ್ಪರ ಭೀತಿ ಹುಟ್ಟಿತ್ತು. ಸೆತ್ತೆ ತನ್ನ ಎಡಭುಜವನ್ನು ಮುಟ್ಟಿನೋಡಿಕೊಳ್ಳುತ್ತಿದ್ದನು. ಚೂರಿಯ ಬಾಯಿನಕಡೆಯಿಂದ ಅವನ ಭುಜಕ್ಕೆ ಬಿದ್ದಿದ್ದದ್ದು ಒಂದೇ ಏಟು. ಅದರ ನೋವಿನ್ನೂ ಕಾಣುತ್ತಿರ ಲಿಲ್ಲ. ರಕ್ತ ಬಟ್ಟೆಯನ್ನು ಆಗತಾನೇ ಹಿಡಿಯುತ್ತಿತ್ತು. ಅಲುಗಿನಹಿಂಭಾಗ ದಿಂದ ಬಿದ್ದ ಎರಡೇಟು ನೋಯುತ್ತಿತ್ತು. ಅವಳು ತನ್ನನ್ನು ಆ ಹುಚ್ಚು ಕೋಪದ ಅತಿರೇಕದಲ್ಲಿ ತೀರಿಸಿಬಿಡಬಹುದೆಂಬ ಹೆದರಿಕೆ ಸೆತ್ತೆಗೂ ಉಂಟಾ ಯಿತು. ಅವನು ಮುಂದುವರಿದರೆ ತಾನು ಕೊಲೆಗಾತಿಯಾದರೂ ಆಗಿ ಬಿಡಬಹುದೆಂಬ ಭಯ ತಾಯಕ್ಕನಿಗೂ ಉಂಟಾಯಿತು.

ಕತ್ತಲೆಯೇ ಹೆಪ್ಪುಗಟ್ಟಿದಂತೆ ಇಬ್ಬರು ಎದುರುಬದರಾಗಿ ನಿಂತರು. ಮುಂದೇನಾಗಬಹುದೆಂಬುದನ್ನು ಇಬ್ಬರೂ ಊಹಿಸುತ್ತಾ. ಬಾಗಿಲು ಶಬ್ದ ವಾಯಿತು. ಅವರು ಹಾಗೆಯೇ ನಿಂತಿದ್ದರು. 'ಅವ್ವಾ—ಅವ್ವಾ'ಎಂಬ ಮಲ್ಲೇಶನ ಕರೆ. ತಾಯಕ್ಕನಿಗೆ ಮೈಯೆಚ್ಚರಿಕೆ ಬಂದರೂ ಏನೂ ಮಾಡ ಲಾರದೇ ನಿಂತಿದ್ದಳು. ಸೆತ್ತೆಗೆ ಮಲ್ಲೇಶನ ಕೂಗು ಅದೇಕೋ ಒಂದು ರೀತಿಯ ಸಂತೋಷವನ್ನು ತಂದಿತು.

ಇನ್ನೂ ನಾಲ್ಕಾರು ಬಾರಿ ಮಲ್ಲೇಶ ಕೂಗಿದನು. ತಾಯಕ್ಕನಿಗೆ ಬಹಳ ಸಂಕಟವಾಗಿತ್ತು. ಬಾಗಿಲು ತೆಗೆದ ಕ್ಷಣವೇ ಸೆತ್ತೆಗೆ ಅಂದಿನ ಕದನ ದಲ್ಲಿ ಜಯವೆಂಬುದಾಗಿ ತೀರ್ಮಾನವಾಗುವುದಲ್ಲ ಎಂದು ತಾಯಕ್ಕ ಬಹಳ ನೊಂದುಕೊಂಡಳು. ಹೆಣ್ಣಿಗೆ ಕಲಂಕ ಹತ್ತಿಕೊಳ್ಳುವುದು ಎಷ್ಟು ಸುಲಭ ವಾದದ್ದು ! ಎಂದು ತಾಯಕ್ಕನ ವಿವೇಚನೆಗೆ ಸಖೇದಾಶ್ಚರ್ಯವಾಯಿತು. ವಿಧಿಯಿಲ್ಲದೇ ಹೋಗಿ ಚೂರಿ ಹಿಡಿದಿದ್ದ ಕೈಯಿಂದಲೇ ಬಾಗಿಲು ತೆರೆದಳು. ಅಷ್ಟರಲ್ಲಿ ಸೆತ್ತೆ ಬೇಕೆಂದೇ ಸೀಮೆಣ್ಣೆಬುಟ್ಟಿಯನ್ನು ಹುಡುಕಿ ಮನೆಯ ನ್ನೆಲ್ಲಾ ಬೆಳಕಮಾಡಿದನು.

ಹದಿಮೂರುವರ್ಷದ ಮಲ್ಲೇಶ, ಮನೆಯೊಳಗೆ ಬಂದು ನಾಟಕದ ಮೇಷ್ಟ್ರನ್ನು ಕಂಡು ತಲೆಕೆರೆದುಕೊಳ್ಳುತ್ತಾ ಕಣ್ಣುಕಣ್ಣು ಬಿಟ್ಟನು.



ಶುದ್ಧ ಸುಳ್ಳು. ಗೌರೀಹಬ್ಬಕ್ಕೆ ದೊಡ್ಡ ಸೀರೆಯನ್ನು ತೆಗೆದುಕೊಡುತ್ತೇನೆಂದು ತಾಯಕ್ಕ ಪುಟ್ಟತಾಯಿಗೆ ಕೊಟ್ಟದ್ದ ಮಾತನ್ನು ನಡೆಸಿಕೊಡಲಿಲ್ಲ. ಅದು ಕೇವಲ ಎಳೆಯ ಮಕ್ಕಳಿಗೆ ಮಾಡುವ ಮೋಸದಂತಾಗಿತ್ತು. ಅದರಿಂದ ಪುಟ್ಟತಾಯಿಯೂ ಬಹಳ ಸಿಟ್ಟಾಗಿದ್ದಳು. ಗಂಡನ ಮನೆಯಲ್ಲಿ ಇರಲು ಸಮಾಧಾನವಿಲ್ಲದಿದ್ದರೂ, ತಾಯಿಯ ಮೇಲಿನ ಕೋಪಕ್ಕೆ ಕಿರೀಕಾಟಿಗೆ ಬರುವುದಿಲ್ಲವೆಂದೇ ನಿರಾಕರಿಸಿಬಿಟ್ಟದ್ದಳು. ಆದರೆ ತಾಯಕ್ಕನಿಗೆ ಅಷ್ಟು ದೊಡ್ಡ ಮೊತ್ತದಹಣ ಆ ಸಮಯಕ್ಕೆ ಒದಗಲಿಲ್ಲ. ಅಥವಾ ಅದಕ್ಕಾಗಿ ಕಷ್ಟಪಡುವ ಮನಸ್ಸೂ ಆಗಲಿಲ್ಲ.

ಎಲ್ಲ ಸ್ಥಿರಆಸ್ತಿಗಳೂ ಚಿಕ್ಕಲಿಂಗಪ್ಪನವರಿಗೆ ಆಧಾರವಾದಮೇಲೆ ತಾಯಕ್ಕನಿಗೆ ಸಮಯದಲ್ಲಿ ಐವತ್ತು ರೂಪಾಯಿಗಳನ್ನು ಸಾಲವಾಗಿ ಹುಟ್ಟಿಸುವುದು ಮಹಾ ಪ್ರಯಾಸದ ಕೆಲಸವಾಗಿ ಹೋಗಿತ್ತು. ಈಚೆಗೆ ಒಡೆಯನ ಹೊಲದ ಬೆಳೆಯು ಕೈಹತ್ತುತ್ತಲೇ ಇರಲಿಲ್ಲ. ಅಲ್ಲಿ ಬಂದದ್ದು ಲೆಕ್ಕಹಾಕಿ ನೋಡಿದರೆ ಅಗಸನಿಗೆ, ಕೆಲಸಿಗೆ (ಕ್ಷೌರದವನು) ವರ್ಷದ 'ಅಡದೆ' (ಚಂದಾ) ಯನ್ನು ಕೊಟ್ಟು, ವ್ಯವಸಾಯಕ್ಕೆ ಕರೆದುಕೊಳ್ಳುತ್ತಿದ್ದ ಏರುಗಳ ಬಾಡಿಗೆಯನ್ನು ಕೊಡುವುದಕ್ಕಾಗುತ್ತಿದ್ದ ಮೊಬಲಗಿಗೆ ಸರಿಹೋಗುತ್ತಿತ್ತು. ತೋಟದ ಉತ್ಪತ್ತಿ ಒಟ್ಟು ಕಂದಾಯಕ್ಕೂ ಸಾಲುತ್ತಿರಲಿಲ್ಲ. ಲಕ್ಕೀ ಹೊಲದ ರಾಗಿ ಅಥವಾ ಜೋಳವೇ ಜೀವನಾಧಾರವಾಗಿದ್ದದ್ದು. ಹಿತ್ತಲಿನಲ್ಲಿ ಹಾಕುತ್ತಿದ್ದ ತರಕಾರಿ ವ್ಯವಸಾಯ ಈಗ ಕೈಲಾಗದೇ ನಿಂತುಹೋಗಿತ್ತು.

ಇದರಮಧ್ಯೆ ಮಲ್ಲೇಶನ ವಿದ್ಯಾಭ್ಯಾಸದ ಗಲಾಟೆ. ಮೊದಲನೇವರ್ಷ ಐದುರೂಪಾಯಿನ ಪರೀಕ್ಷೆ ಹೋಯಿತೆಂದು ಅವನು ಅದರಮೇಲೆ ಹೆಚ್ಚಿನ ಗಮನವನ್ನೇನೂ ತೆಗೆದುಕೊಳ್ಳುತ್ತಿರಲಿಲ್ಲ. ಒಂದುಕಡೆ ನಾಟಕದಹೊಡೆತ ಇನ್ನೊಂದುಕಡೆ ನಿಜವಾಗಿ ಅವನು ಮಿಡಲ್ ನಾಲ್ಕನೇ ತರಗತಿಗೆ ಅನರ್ಹನಾಗಿದ್ದದ್ದು. ಇದರಿಂದ ಎರಡನೇ ಬಾರಿಯೂ ಸೋಲಾಯಿತು. ಆದರೂ

ಅವನ ಓದುವ ಹಂಬಲ ಕಡಿಮೆಯಾಗಲಿಲ್ಲ. ಚಿದಂಬರ ಆಗಲೇ ಮೈಸೂರಿಗೆ ಹೋಗಿ ಹೈಸ್ಕೂಲು ಎರಡನೇ ತರಗತಿಯಲ್ಲಿದ್ದನು. ಹುಚ್ಚ ಈಬಾರಿ ಮಲ್ಲೇಶನ ಜೊತೆಯಲ್ಲಿಯೇ ಇದ್ದನು. ಹುಚ್ಚ ಪಾಸುಮಾಡಿಬಿಡುತ್ತಾನೆಂಬುದು ತಿಳಿದಿದ್ದರೂ ಮಲ್ಲೇಶ ಅವನ ಕೈಯಲ್ಲಿ ಈಬಾರಿ ಆಗುವುದಿಲ್ಲವೆಂದೂ ತಾನು ಖಂಡಿತ ಪಾಸಾಗುವೆನೆಂದೂ ಹೇಳಿ ಪುನಃ ಶಾಲೆಗೆ ಹೋಗುತ್ತಿದ್ದನು. ಸದ್ಯ ಊರಿನಲ್ಲಿ ನಾಟಕದ ಅವಾಂತರವಿರಲಿಲ್ಲ. ಸೆತ್ತಿ ಪುನಃ ಅದೃಶ್ಯನಾಗಿ ಹೋಗಿದ್ದನು.

ಮಲ್ಲೇಶನ ಓದಿಗೆ ದುಡ್ಡು ಒದಗಿಸುವುದರಲ್ಲೇ ತಾಯಕ್ಕ ತುಂಬಾ ಸುಸ್ತಾಗಿಹೋಗಿದ್ದಳು ಜವನಪ್ಪಹತ್ತಿರ ಇನ್ನೂರು ರೂಪಾಯಿಗಳಸಾಲವಾಗಿತ್ತು. ಕೊಗ್ಗ ರಂಗನಿಗೆ ಸುಮಾರು ಹದಿನೆಂಟು ರೂಪಾಯಿಗಳಷ್ಟು ಕಂಬಳ (ಕೂಲಿ)ವನ್ನು ಕೊಡಬೇಕಾಗಿತ್ತು. ಎಮ್ಮೆಗೆ ಕರುಸತ್ತು ಕರೆಯಿಸಿಕೊಳ್ಳುತ್ತಲೇ ಇರಲಿಲ್ಲ. ಅದೂ ಕಾವಲಿನ ತಿರುಗಾಟವಿಲ್ಲದೇ ಬಡಕಲಾಗಿ ಹೋಗಿತ್ತು. ಮಲ್ಲೇಶ ಓದುವುದೊಂದನ್ನು ಬಿಟ್ಟುಬಿಟ್ಟರೆ ತಾನು ಪುನಃ ಎಲ್ಲವನ್ನೂ ಸರಿಪಡಿಸಿಕೊಳ್ಳಬಲ್ಲೆ ಎಂದು ತಾಯಕ್ಕನಿಗೆ ಒಮ್ಮೊಮ್ಮೆ ಅನಿಸುತ್ತಿತ್ತು.

ಅಷ್ಟು ಚುರುಕಾದ, ಸುಂದರನಾದ ಹುಡುಗ ಮಲ್ಲೇಶನನ್ನು ಆರಂಭಕ್ಕೆ ಹಾಕುವುದೇ ಎಂಬ ಪ್ರಶ್ನೆ ಬಂದಾಗ ತಾಯಕ್ಕನಿಗೆ ಎಲ್ಲಿಲ್ಲದ ಕನಸುಗಳು ಬಂದು "ಬೇಡ" ಎಂದು ಹೇಳಿ ಹೋಗುತ್ತಿದ್ದವು. ಅವನು ಓದಿ ತಿಂಗಳಿಗೆ ನೂರು ರೂಪಾಯಿಗಳನ್ನು ತರುವ ಅಧಿಕಾರವನ್ನಾದರೂ ಮಾಡಲಿ, ಅಥವಾ ಯಾವ ಕೆಲಸ ಸಿಕ್ಕದಿದ್ದರೂ ಬೇಡ. ಊರಿಗೆ ಬಂದು ಅವರಿವರ ಕೈಲಿ ತನ್ನ ಜಮೀನುಗಳನ್ನು ಆಬಾದುಮಾಡಿಸಿಕೊಂಡು ಊರಿಗೆ ಮುಂದಾಗಿ ಬಾಳುವುದಿದ್ದರೆ ಬಾಳಲಿ ಎಂದು ತಾಯಕ್ಕ ಹಾರೈಸುತ್ತಿದ್ದಳು. ಆ ಸುಂದರವಾದ ಕನಸು ಬಂದಾಗ ತಾಯಕ್ಕ ಊರಿಗೆ ದೂರದಲ್ಲಿರುವ ಒಡೆಯನ ಹೊಲವು ಮಾರಿಹೋದರೂ ಚಿಂತೆಯಿಲ್ಲ ಮಗನ ಓದನ್ನು ಮುಂದುವರಿಸಲೇಬೇಕೆಂದುಕೊಳ್ಳುತ್ತಿದ್ದಳು.

ಈ ತಾಪತ್ರಯದಲ್ಲಿ ಪುಟ್ಟತಾಯಿಯ ಸೀರೆಯನೆನಪು ಯಾರಿಗೆ ತಾನೇ ಬಂದೀತು ? ಗುಜ್ಜಗೆರೆಗೆ ಹೋಗಿ ಮಗಳ ಮುಖವನ್ನು ಕಂಡಾಗ ಮಾತ್ರ ಜ್ಞಾಪಕಬರುತ್ತಿದ್ದ ವಿಷಯವದು. ಪುಟ್ಟತಾಯಿಯ ಮುಂದೆ ತನ್ನ ತಾಪತ್ರಯಗಳನ್ನೆಲ್ಲಾ ಇನ್ನಿಲ್ಲದಹಾಗೆ ಬಣ್ಣಕಟ್ಟಿ ಹೇಳಿಕೊಂಡರೂ ಅವಳದನ್ನು ಕಿವಿಯಮೇಲೆಯೇ ಹಾಕಿಕೊಳ್ಳುತ್ತಿರಲಿಲ್ಲ. ಪುನಃ ನಿನ್ನ ಮನೆಯಕಡೆಗೆ ತಿರುಗಿನೋಡುವುದಿಲ್ಲವೆನ್ನುತ್ತಿದ್ದಳು. ಅದು ಒಂದುವಿಧಕ್ಕೆ ಒಳ್ಳೆಯದೇ ಆಯಿತೆಂದುಕೊಳ್ಳುವಳು ತಾಯಕ್ಕ. ಮಗಳು ತನ್ನಮೇಲೆ ದ್ವೇಷವಿಟ್ಟುಕೊಂಡರೂ ಸರಿಯೇ ಅವಳು ಗಂಡನ ಮನೆಯನ್ನೇ ತನ್ನಮನೆ ಯೆಂದು ಇಷ್ಟುಬೇಗ ತಿಳಿದುಕೊಂಡಿದ್ದಳಲ್ಲ ಎಂಬುದೇ ಅವಳ ಸಮಾಧಾನ. ಇಷ್ಟರಮೇಲೆ "ಮಾದೇವೂ"ವಿನ ಕೇಡಿಗಬಾಯಿಗೆ ಹೆದರಿ ಅವರಪ್ಪ ಅಣ್ಣಂದಿರೂ ಒಳ್ಳೆಯ ಮಾತಿನಲ್ಲೇ ತಪ್ಪನ್ನೆಲ್ಲಾ ಮಾದೇವೂವಿನವಯಸ್ಸಿನ ಮೇಲೆಹಾಕಿ " ಪುಟ್ಟತಾಯಿ ಇಲ್ಲೇ ಇರಲಿ ಹೋಗಿ" ಎನ್ನುತ್ತಿದ್ದರು.

ಮಾದೇವೂವಿನ ಕೇಡಿಗಬಾಯಿಗೆ ನಾಲ್ಕು ಕಾರಣಗಳಿತ್ತು. ಈಚೀಚಿಗೆ ಚಿಕ್ಕಲಿಂಗಪ್ಪ 'ಮಾವ'ನವರು ಕೇಳಿದಂತೆಲ್ಲ ದುಡ್ಡುಕೊಡುತ್ತಿರಲಿಲ್ಲ. ವಾಯಿದೆಗಳನ್ನು ಹೇಳುತ್ತಾ ಹತ್ತುಕೊಡುವಕಡೆ ಎರಡನ್ನು ಕೊಡಲು ಬರುತ್ತಿದ್ದರು. ಎರಡನೆಯದಾಗಿ ಸೆತ್ತೆ, ಮಾದೇವೂವನ್ನು ಸಂಧಿಸಿ ನಿಮ್ಮ ಚಿಕ್ಕಲಿಂಗಪ್ಪಮಾವ, ನಿನಗೆ ನಿಜವಾದ ಮಾವ ಎಂದು ಹೇಳಿ ಮಾನ ಕಳೆದಿದ್ದನು. ಮೂರನೆಯದಾಗಿ ತನ್ನ ಆಡಳಿತಕ್ಕೆ ತನ್ನ ಸಂಸಾರ ಇನ್ನೂ ಬಂದಿಲ್ಲವಲ್ಲ ಎಂಬುದು. ನಾಲ್ಕನೆಯದು ಮದುವೆಯಾಗಿ ಮೂರುವರ್ಷಗಳು ತುಂಬಿದ್ದರೂ ಆ ವಯಸ್ಸಿನಲ್ಲಿ ಒಂಟಿಯಾಗಿ ಕಾಲಕಳೆಯಬೇಕಾಗಿದ್ದದ್ದು. ತನ್ನ ಸರಿಸಮದವರೆಲ್ಲಾ ಗಂಡಹೆಂಡಿರು ಜೊತೆಯಾಗಿಸ್ವತಂತ್ರವಾಗಿ ಬಾಳುತ್ತ ಇರುವುದು ಕಣ್ಣುಗಳಿಗೋ ಕಿವಿಗಳಿಗೋ ಬಿದ್ದಾಗ ಮಾದೇವೂ ವ್ಯಗ್ರನಾಗುತ್ತಿದ್ದನು. ದಿನವೆಲ್ಲ ಪುಟ್ಟತಾಯಿಯನ್ನು ದೂರದಿಂದಲೇ ನೋಡಿ ನೋಡಿ ಬೇಸತ್ತಿದ್ದನು. ಒಂದೊಂದು ಬಾರಿ ಅವಳು ಕಣ್ಮರೆಯಾಗಿದ್ದರೆ ವಾಸಿಯೆನ್ನಿಸುತ್ತಿದ್ದರೂ ತನ್ನ ಅತ್ತೆ, ಮಗಳನ್ನು ಕರೆದುಕೊಂಡು ಹೋಗಲು ಬಂದು ಕೇಳಿದಾಗ ಮಾತ್ರ ಅವನ ಮನಸ್ಸು ಬದಲಾ

ಯಿಸಿಹೋಗಿತ್ತು. ತನ್ನ ಅತ್ತೆಯ ನಡತೆ ಚೆನ್ನಿಲ್ಲವೆಂದೂ ಅವಳ ಬಳಿ ತನ್ನ ಹೆಂಡತಿಯನ್ನು ಬಿಡುವುದು ಗೌರವವಲ್ಲವೆಂದೂ ಅವನ ಭಾವನೆಯಾದರೆ ಕೊನೆಯಪಕ್ಷ ಪುಟ್ಟತಾಯಿ ಕಣ್ಣೆದುರಿಗಾದರೂ ಇರಲಿ ಎಂಬುದು ಅವನ ಯೌವನದ ಬೇಡಿಕೆಯಾಗುತ್ತಿತ್ತು.

ಹಾಗೆ ಈಬಾರಿಯೂ ಹೆಂಡತಿಯನ್ನು ಕಳಿಸಿಕೊಡಲು ನಿರಾಕರಿಸಿ ಮಾದೇವೂ ಹೊಲದಕಡೆಗೆ ಹೊರಟುಹೋಗಿದ್ದನು. ಅವನ ಹೊಲದ ಮಗ್ಗುಲಿನಲ್ಲೇ ಚಿಕ್ಕಲಿಂಗಪ್ಪನವರ ವಿಶಾಲವಾದ ಹೊಲ. ಅವನ ಜಮೀನಿನ ಇನ್ನೊಂದು ಪಕ್ಕದಲ್ಲೇ 'ಅಡ್ಡಹಳ್ಳ'.ಅದರಲ್ಲಿ ವರ್ಷದಲ್ಲಿ ಅರುತಿಂಗಳು ನೀರು ಹರಿಯುತ್ತಿತ್ತು. ಇನ್ನಾರು ತಿಂಗಳು ಮರಳನ್ನು ತೋಡಿದರೆ ನೀರು ಸಿಕ್ಕುತ್ತಿತ್ತು. ಆ ನೀರಿನ ಆಸರೆಯಿಂದ ಮಾದೇವೂಮನೆಯವರು ಆ ಚಿಕ್ಕ ಹೊಲದಲ್ಲಿ ಮೆಣಸೀ, ಬದನೇ, ಈರುಳ್ಳಿ, ಮುಂತಾದ ಫಸಲುಗಳನ್ನು ಎತ್ತುತ್ತಿದ್ದರು. ಕಷ್ಟಗಾರರಾದ ಮಾದೇವೂವಿನ ಅಣ್ಣಂದಿರು ಆ ಹೊಲವನ್ನು ತೋಟವನ್ನಾಗಿ ಮಾಡಿಕೊಂಡಿದ್ದರು. ಆ ತೋಟದ ಅಂಚಿನಲ್ಲಿ ಅಡ್ಡಹಳ್ಳದ ನೀರು ಪ್ರವಾಹವಾಗಿ ಬಂದಾಗ ಕುಸಿಯದಿರಲಿ ಎಂದು ಸಾಲಾಗಿ 'ನೀರಂಜಿ' ಮರಗಳನ್ನು ಬೆಳಸಲಾಗಿತ್ತು. ಅದರ ನೆರಳು ಯಾವಾಗಲೂ ತಣ್ಣಗಿದ್ದು ಉಲ್ಲಾಸ ತರುವಂತಿತ್ತು. ಹೆಂಡತಿಯನ್ನು ಕಳುಹಿಸಿಕೊಡಲಾಗುವುದಿಲ್ಲವೆಂದು ಹೇಳಿ ಕೋಪಗೊಂಡು ಬಂದಿದ್ದ ಮಾದೇವೂ ಅ ನೀರಂಜೀ ಮರಗಳ ನೆರಳಿನಲ್ಲಿ ಮಲಗಿಬಿಟ್ಟಿದ್ದನು.

ಅವರ ಹೊಲದಲ್ಲಿ ಚಿಕ್ಕಲಿಂಗಪ್ಪನವರೂ ಇದ್ದರು. ಅವರಿಗೆ ಆ ಬಾರಿಯ ರಾಗಿ ಅಷ್ಟು ಚೆನ್ನಾಗಿರಲಿಲ್ಲ. ರಾಗಿಯಾಗದಿದ್ದರೆ ಬೇಡ ಹುಲ್ಲಾದರೂ ಆಗಲಿ. ಕೀಳಿಸಿ ಬಿಟ್ಟು ಉತ್ತು, ಗೊಬ್ಬರ ಹಾಕಿ ಮಳೆಗೆ ಸಿದ್ದಪಡಿಸಿಕೊಂಡಿರೋಣ ಎಂದು ಅವರಿಗೆ ಮನಸ್ಸಾಯಿತು. ನಾಳೆಯ ಬೆಳಿಗ್ಗೆ ಬರುವಂತೆ ಕಂಬಳದಾಳುಗಳಿಗೆ ಹೇಳುವುದಕ್ಕಾಗಿ ಆ ದಿನ ಮಧ್ಯಾಹ್ನವೇ ಹೊಲವನ್ನು ನೋಡಿಕೊಂಡುಹೋಗಲು ಬಂದಿದ್ದರು.

ಅವರಿಗೆ ತಾಯಕ್ಕ ಬಂದಿದ್ದದ್ದೂ ಗೊತ್ತು. ಮನೆಯಲ್ಲಿ ನಡೆದ ವಿದ್ಯಮಾನವೂ ಗೊತ್ತು. ತಾಯಕ್ಕ ಸಾಮಾನ್ಯವಾಗಿ ರಾತ್ರಿಯಹೊತ್ತು

ಗುಜ್ಜಗೆರೆಯಲ್ಲಿ ಉಳಿದುಕೊಳ್ಳುವುದಿಲ್ಲ ಎಂಬುದೂ ಗೊತ್ತು. ಈ ಬಾರಿ ಅವಳು ತಮ್ಮ ಬಳಿಗೆ ಬಂದು ಬಡ್ಡೀ ಪಾವತಿ ಮಾಡುವವಳಿದ್ದಳು ಎನ್ನು ವುದೂ ಗೊತ್ತು. ಇಷ್ಟೆಲ್ಲಗೊತ್ತಿದ್ದೂ ಅವರು ಹೊಲಕ್ಕೆ ಬಂದಿದ್ದದು ಏಕೆಂದರೆ, ಕಾಲಾವಕಾಶವಿಲ್ಲದೆ, ತಾಯಕ್ಕ ಆ ಹೊಲಕ್ಕೆ ಬಂದರೂ ಸರಿಯೆ. ಇಲ್ಲವಾದರೆ ರಾತ್ರಿ ಮನೆಯ ಬಳಿಗೆ ಬಂದರೂ ಸರಿಯೆ ಎಂದು ಲೆಕ್ಕಹಾಕಿದ್ದರು.

ಬಂದಮೇಲೆ ಇಲ್ಲಿ ಮಾದೇವು ಇರುವುದನ್ನು ಕಂಡು ಅವರಿಗೆ ನಿರಾಶೆಯಾಯಿತು ತಾಯಕ್ಕ ಅಲ್ಲಿಗೆ ಬರುವುದಿಲ್ಲ, ಬಂದರೂ ಪ್ರಯೋಜನ ವಿಲ್ಲವೆಂದು ಕೊಂಡರು. ಹೊಲವನ್ನೆಲ್ಲಾ ತಿರುಗಿ ಆದಮೇಲೆ ಅಡ್ಡಹಳ್ಳದ ಕಡೆಗೆ ಬಂದವರಂತೆ ಬಂದು ಮಾದೇವೂವನ್ನು ಏಳಿಸಿದರು.

"ಯೋ! ಮಾದೇವ್ರೂ, ಇದೇನಾ ಮನೇಲಿ ನೆಂಟರು ಬಂದಿದ್ರೂ ನೀನಿಲ್ಲಿ ಬಂದು ಮಲಗಿದ್ದಯೇ?"

"ನಾನೇನ್ಮಾಡ್ತಿದ್ದೆ ಅಲ್ಲಿ ಮಾವೋ! ಮಗಳ ಕರ್‍ಕಂಡೋಗಕ್ಕೆ ಬಂದವರೆ ಮಗಳೇ ಬರಕ್ಕಿಲ್ಲ ಅಂತಳೆ. ನಾನೇನ್ಮಾಡಲಿ?"

"ಅದ್ಯಾಕಂತೆ?"

"ಅದ್ಯಾಕೋ ಕಾಣಪ್ಪ. ಹೋದ ವರ್ಷದ ಉಗಾದಿ ಹಬ್ಬ ದಿಂದಲೂ ತಾಯಿಮಗಳಿಗೆ ಆಗದೇ ಇಲ್ಲ."

"ನೀನು, ಯಾಕೆ ಅಂತ ವಿಚಾರಿಸ್ನಿಲ್ವಾ?"

"ಐ ಆ ಮೂದೇವೀನ ಮಾತಾಡ್ಸಕ್ಕೋಯ್ತೀನಿ! ಅಂತೂ ಅವರಿವರ ಮಾತು ಕೇಳಿದ್ದರಲ್ಲಿ ತಾಯಿ ನಡತೆ ಮಗಳಿಗೇ ಸರೀಬಿಳಕ್ಕಿಲ್ವಂತೆ ಏನು ಜನವೋಪ್ಪ. ತಮ್ಮ ತಮ್ಮ ಸಮದ ಮಕ್ಕಳಿದ್ದರೂ ಬುದ್ಧಿ ಬರಕ್ಕಿಲ್ಲ."

"ಓ ಏನು ದೊಡ್ಡ ಮುದುಕ ಮಾತಾಡ್ದಂಗೆ ಮಾತಾಡ್ತಾ ಇದೀ ಯಲ್ಲ ಮಾದೇವು? ನಿನ್ನ ಬುದ್ದಿ ನಿನಗೆ ಸರಿ, ಅವರ ಬುದ್ದಿ ಅವರಿಗೆ ಸರಿ?"

ಅಷ್ಟರಲ್ಲಿ ಕಳಸಯ್ಯನ ಮೊಮ್ಮಗ ಮುದ್ದನಂಜ ಕೈಲೊಂದು 'ಕೊಳದಪ್ಪಲೆ' ಹಿಡಿದು ಬರುತ್ತಿದ್ದುದು ಇಬ್ಬರಿಗೂ ಕಾಣಿಸಿತು. ಮುದ್ದ

ನಂಜನ ಕಣ್ಣು, ತುಟಿಗಳಲ್ಲಿ ನಗು ಉಕ್ಕಿಬರುತ್ತಿತ್ತು. ಅವುಗಳನ್ನು ಹೇಗೋ ತಡೆಯುತ್ತ ಅವರ ಹತ್ತಿರಕ್ಕೆ ಬಂದನು. ಪಟೇಲರು 'ಏನ್ಲಾ ಅದು ಮುದ್ದನಂಜ. ಟೀ ಗೀ ಕಾಯ್ಸ್ಕಂಡು ಬಂದಿದ್ದಯೋ ?" ಅಂದರು. ಮುದ್ದನಂಜ ಅಸ್ಪಷ್ಟವಾಗಿ "ಹ್ಞು" ಅಂದ. ಟೀ ಎಂದರೆ ಮಾದೇವೂಗೆ ಬೀಡಿಯಷ್ಟೇ ಪ್ರಾಣ. ಅವನು ಟೀ ಎಲ್ಲಿಂದ ಬರಬೇಕು. ಅದನ್ನು ಮುದ್ದ ನಂಜ ಏಕೆ ತರಬೇಕು ಒಂದನ್ನೂ ಯೋಚಿಸದೆ, ಟೀ ಕುಡಿಯಲು ಕುಳಿ ತಲ್ಲಿಂದಲೇ ಸಿದ್ಧನಾಗ ತೊಡಗಿದನು. ಮುದ್ದನಂಜ ಎಚ್ಚರಿಕೆಯಿಂದ ಮಾದೇವೂವನ್ನು ಸಮೀಪಿಸಿದನು. ತಪ್ಪಲೆಯು ನೆಲದಕಡೆಗೆ ಇಳಿಯು ವುದಕ್ಕೆ ಬದಲಾಗಿ ಮಾದೇವೂ ತಲೆಯ ಕಡೆಗೆ ಸಾಗಿ, ತಲೆಕೆಳಗಾಯಿತು. ತಪ್ಪಲೆಯಲ್ಲಿದ್ದ ಅರಿಶಿನ, ಸುಣ್ಣ ಕದರಿದ್ದ ಕೆಂಪು ರಂಗು, ಮಾದೇವೂವಿನ ಮೇಲೆ ಅಭಿಷೇಕವಾಯಿತು. ಚಿಕ್ಕಲಿಂಗಪ್ಪನವರು 'ಖ್ಖೊ ಖ್ಖೊ ಖೋ' ಎಂದು ನಕ್ಕರು. ಮಾದೇವುವಿನ ಬಟ್ಟೆಗೆಲ್ಲಾ ಅಚ್ಚುಕಟ್ಟಾಗಿ ಬಣ್ಣವಾಯಿ ತೆಂದು ತಿಳಿದು ಮುದ್ದನಂಜನಿಗೆ ಬಲು ಸಂತೋಷವಾಯಿತು. ಮಾದೇವು ಬಲುಬಿರುಸಿನಿಂದ ಮುದ್ದನಂಜನನ್ನು ಸದೆ ಬಡಿಯುವವನಂತೆ ಮೇಲೆದ್ದ. ಮುದ್ದನಂಜ ಧೈರ್ಯವಾಗಿ ನಿಂತೇ ಇದ್ದ. ಚಿಕ್ಕಲಿಂಗಪ್ಪನವರು ಮಾದೇವು ವನ್ನೇ ತಡೆದು ಅದೆಲ್ಲಾ ಪೂರ್ವದ ಸಂಪ್ರದಾಯ, ಅವನದೇನೂ ತಪ್ಪಿಲ್ಲ ಎಂದು ಹೇಳಿ ಸಮಾಧಾನ ಪಡಿಸಿದರು.

ಆ ಸ್ವರೂಪದಲ್ಲಿ ಊರೊಳಕ್ಕೆ ಹೇಗೆ ಹೋಗುವುದೆನ್ನುವುದೇ ಮಾದೇ ವೂಗೆ ದೊಡ್ಡ ಸಮಸ್ಯೆಯಾಗಿತ್ತು. ಅಡ್ಡಹಳ್ಳದಲ್ಲಿ ಬಟ್ಟೆಯನ್ನೊಗೆದು ಕೊಳ್ಳುವ ಆಲೋಚನೆಯನ್ನು ಮಾಡಿದನು. ಆದರೆ ಉಳಿದಿಬ್ಬರು ಅದಕ್ಕೆ ಅವಕಾಶಕೊಡಲಿಲ್ಲ. ಕೊನೆಗೆ ಕತ್ತಲಾಗುವವರೆಗೂ ಊರಿಗೇ ಬರುವು ದಿಲ್ಲವೆಂದು ಮಾದೇವೂ ತಿಳಿಸಿದನು. ಮುದ್ದನಂಜ ಮತ್ತೊಂದು ವಿಷಯ ವನ್ನು ಹೇಳಿ ಅದಕ್ಕೂ ಕಲ್ಲುಹಾಕಿದನು.

ಶಾಂತರಾಜಯ್ಯನವರ ಶಾಸ್ತ್ರದ ಪ್ರಕಾರ, ಇನ್ನೇನು ಪುಟ್ಟತಾಯಿಯೂ, ತಾಯಕ್ಕನೂ ಕಿರೀಕಾಟಿಗೆ ಹೊರಟುಬಿಡುವರೆಂದೂ, ಗಾಡಿಯು ಆಗಲೇ ಸಿದ್ಧವಾಗಿತ್ತೆಂದೂ, ಪುಟ್ಟತಾಯಿ ಹೊರಡುವ ವಿಷಯದ ಬಗ್ಗೆ ಮಾದೇವೂ

ವಿನ ಅನುಮತಿಬೇಕಾಗಿರುವುದರಿಂದ ಮಾದೇವೂವನ್ನು ಕರೆದುಕೊಂಡು ಬರಲೆಂದೇ ಮುದ್ದನಂಜನನ್ನು ಕಳುಹಿಸಲಾಗಿತ್ತೆಂದೂ ಮುದ್ದನಂಜನು ವಿವರವಾಗಿ ತಿಳಿಸಿದನು. ಬೆಳಿಗ್ಗೆ ಹೊರಡುವುದಿಲ್ಲವೆಂದ ಪುಟ್ಟತಾಯಿ ಸಂಜೆಯಹೊತ್ತಿಗೆ ಹೊರಟು ನಿಲ್ಲಲೇ ಬೇಕಾಯಿತು. ನಿನ್ನೆಯ ಹುಡುಗಿ ಇಂದು ಹೆಂಗಸಾಗಿ ತೌರಿಗೆ ಹೋಗುವುದರಲ್ಲಿದ್ದಳು. ತಾಯಕ್ಕನ ನಡ ವಳಿಕೆ ಹೇಗಿದ್ದರೂ ಸರಿಯೆ ಪುಟ್ಟತಾಯಿಯನ್ನು ಅವಳೊಡನೆ ಕಳಿಸದೇ ವಿಧಿಯಿಲ್ಲದ ಸಂದರ್ಭವೊದಗಿತ್ತು. ಈ ಸುದ್ದಿ ತಿಳಿದಮೇಲೆ ಮಾದೇವುವೇ ಊರಕಡೆ ಹೊರಡಲು ತವಕಪಟ್ಟನು. ಓಕಳಿಯಾಗಿದ್ದ ಬಟ್ಟೆಗಳೊಡ ನೆಯೇ ಹೊರಟನು.

ಆಳುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ಊರಿನ ಬೀದಿಯಲ್ಲಿ ನುಗ್ಗಿದನು. ಪುಟ್ಟತಾಯಿಯನ್ನು ಬೇರೆಯ ಮನೆಯಲ್ಲಿರಿಸಲಾಗಿತ್ತು. ಮಾದೇವು ಬಂದ ಸ್ವಲ್ಪ ಹೊತ್ತಿನಲ್ಲೇ ಎತ್ತುಗಳ ಕತ್ತಿನಮೇಲೆ ನೊಗಬಿತ್ತು. ಗಾಡಿಹತ್ತುವಾಗ ಕೂಡ ಪುಟ್ಟತಾಯಿಯು ಅವನ ಕಣ್ಣಿಗೆ ಬೀಳದಂತೆ ಎಚ್ಚರಿಕೆ ವಹಿಸಲಾಗಿತ್ತು. ತಾಯಿ ಮಗಳಿಬ್ಬರೂ ಕಿರೀಕಾಟಿಗೆ ಹೊರಟೇ ಬಿಟ್ಟರು. ಸುತ್ತುಮುತ್ತಿನವರು ಮಾದೇವೂವನ್ನು ಒಂಟಿಯಾಗಿ ಬಿಟ್ಟಿದ್ದರೆ ಅವನು ಸ್ವಲ್ಪ ದೂರದವರೆಗೆ ಹೋಗಿ ಆ ಕಮಾನು ಗಾಡಿಯನ್ನಾದರೂ ನೋಡಿಕೊಂಡು ಬರುತಿದ್ದನೇನೋ.

ಇನ್ನು ಉಳಿದಿದ್ದ ಹದಿನೈದು ದಿನಗಳನ್ನು ಕಳೆಯುವುದು ಹದಿನೈದು ವರ್ಷಗಳನ್ನು ಕಳೆಯುವಷ್ಟು ಕಷ್ಟಕರವಾಗಿ ಮಾದೇವೂಗೆ ಕಾಣಿಸುತ್ತಿದ್ದರೂ ಅವನ ತಂದೆಗೆ ಮತ್ತು ತಾಯಕ್ಕನಿಗೆ ಆ ಹಧಿನೈದು ದಿನಗಳು ಹದಿನೈದು ನಿಮಿಷಗಳಂತೆ ಓಡುತ್ತಿರುವಂತೆ ತೋರುತ್ತಿತ್ತು. ಒಬ್ಬರಿಗೆ ಆ ದಿನ ಬೇಗನೆ ಬರಲಿ ಎನಿಸಿದರೆ ಇನ್ನೊಬ್ಬರಿಗೆ ಸ್ವಲ್ಪ ನಿಧಾನವಾಗಿ ಬರಲಿ ಎನ್ನಿಸಿತು. ಒಬ್ಬರಿಗೆ ಹೆಂಡತಿಯನ್ನು ವಶಮಾಡಿಕೊಳ್ಳುವ ಚಿಂತೆಯಾದರೆ ಇನ್ನೊಬ್ಬ ರಿಗೆ ಹೇಳದೇ ಕೇಳದೇ ಬಂದೊದಗಿದ ಈ ಸಮಾರಂಭದ ಖರ್ಚಿಗೆ ಹಣ ಕಾಸನ್ನೊದಗಿಸುವ ಚಿಂತೆ.

ಪುಟ್ಟತಾಯಿಯೊಬ್ಬಳದೇ ಒಂದು ರೀತಿ. ಅವಳಿಗೆ ಒಂದು ಘಳಿಗೆ ಆ ದಿನದ ಬಗ್ಗೆ ಆತುರ, ಮರುಘಳಿಗೆಯೇ ಒಂದು ಬಗೆಯ ಭೀತಿ. ತನ್ನ ಗಂಡ ಇನ್ನಾದರೂ ತನ್ನ ಮಾತನ್ನು ಕೇಳುತ್ತಾ ತನ್ನನ್ನು ಸಂತೋಷ ವಾಗಿಟ್ಟುಕೊಳ್ಳುವನೇನೋ ಎಂಬ ನಿರೀಕ್ಷಣೆಯಿಂದ ಆ ದಿನ ಬೇಗ ಬರಲಿ, ಎನ್ನಿಸಿದರೆ, ಆ ದಿನವೂ ಗಂಡ ಅದೇ ಒರಟಾದವನೆಂಬುವುದು ಸ್ಥಿರವಾದರೆ ಸಾಯುವವರೆಗೂ ಅವನ ಜೊತೆಯಲ್ಲಿ ಒದ್ದಾಡಬೇಕಲ್ಲ ಎಂಬ ಭೀತಿಯಿಂದ ಆ ದಿನವು ನಿಧಾನವಾಗಿ ಬರಲಿ ಎನ್ನಿಸುತ್ತಿತ್ತು. ಒಮ್ಮೆ ಬೇರೊಂದು ಮನೆಯ ಯಜಮಾನಿಯಾಗುತ್ತೇನೆಂದು ಸಡಗರಗೊಂಡರೆ ಮತ್ತೊಮ್ಮೆ ತನ್ನ ತೌರನ್ನು ಸಂಪೂರ್ಣವಾಗಿ ಬಿಟ್ಟು ಹೊರಟು ಹೋಗ ಬೇಕಲ್ಲ ಎಂದು ಸಂಕಟಪಡುವಂತಿತ್ತು. ಎಂತಹ ಅರಿವಿಲ್ಲದ ಹೆಣ್ಣಿಗೂ ಈ ಒಳತೋಟ ಈ ಸಂದರ್ಭದಲ್ಲಿ ಒದಗಿಯೇ ತೀರುವುದು. ಅವಳಿಗೆ ದಿನದ ಹನ್ನೆರಡು ಗಂಟೆಗಳು ಅದೇ ಯೋಚನೆಯಲ್ಲಿ ಕಳೆಯುತ್ತಿದ್ದವು.

ಪುಟ್ಟತಾಯಿ ಆ ದಿನ ತನ್ನ ಪಾಲಿಗೆ ಆನಂದದ ದಿನವೋ, ದುಃಖದ ದಿನವೋ ಎಂದು ತೀರ್ಮಾನಿಸುವುದರೊಳಗೆ ಆ ದಿನ ಬಂದೇ ಬಿಟ್ಟಿತು. ಗಂಡು, ರಾತ್ರಿ ಹತ್ತು ಗಂಟೆಗೆ ಸರಿಯಾಗಿ ಕಿರೀಕಾಟೆಯನ್ನು ತಲುಪಿ ಸ್ಕೂಲು ಮನೆಯಲ್ಲಿ ಬಿಡಾರ ಬಿಟ್ಟಿತು. ಹೆಣ್ಣಿನ ಮನೆಯಿಂದ ತಟ್ಟೆಗಳು ಸ್ಕೂಲು ಮನೆಗೆ ಹೋದವು. ಅನಂತರ ತಾಯಕ್ಕನ ದೊಡ್ಡ ನಾದಿನಿಯ ಗಂಡ ವಿಭೂತಿ ವಿಳ್ಯವನ್ನು ತೆಗೆದುಕೊಂಡು ಹೋಗಿ ಗಂಡನ್ನು ಹೆಣ್ಣಿನ ಮನೆಗೆ ಆಹ್ವಾನಿಸಿದ. ಗಂಡು ಒಂದು ಬಡಕಲು ಬಾಡಿಗೆಯ ಕುದುರೆಯ ಮೇಲೆ ಏರಿತು. ಹೆಣ್ಣಿನ ಮನೆಯ ತಟ್ಟೆಗಳಿಗೆಲ್ಲ, ಹಣ್ಣು, ಕಾಯಿ, ಎಳ ನೀರು, ಮಿಠಾಯಿ ಸಾಮಾನುಗಳು ಉಡುಗೊರೆಗಳು ಮುಂತಾದುವನ್ನು ತುಂಬಿಕೊಂಡು ಗಂಡಿನ ಜೊತೆಯಲ್ಲಿ ತೆಗೆದುಕೊಂಡು ಬರುವುದಕ್ಕೆ ಸಿದ್ಧ ವಾಗಿತ್ತು. ಹಳ್ಳಿಯ ಕಡೆಯ ಬ್ಯಾಂಡು ಕಿರೀಕಾಟೆಯಲ್ಲಿ ಮಲಗಿ ನಿದ್ರಿಸು ತ್ತಿದ್ದವರೊಬ್ಬರನ್ನೂ ಬಿಡದೆ ಏಳಿಸಿತು. ಕುದುರೆ ಹೆಜ್ಜೆ ಹಾಕಿತು. ಕಣ್ಣು ಹೊಸಗಿಕೊಳ್ಳುತ್ತಾ ಕಿರೀಕಾಟೆಯ ಹೆಂಗಸರೆಲ್ಲ ಬಾಗಿಲಿಗೆ ಎದ್ದು ಬಂದು ಪಂಜಿನ ಬೆಳಕಿನಲ್ಲಿ ಗಂಡಿನ ಮುಖನೋಡಿಕೊಂಡು ಹೋಗಿ ಮಲಗಿದರು.

ಗಂಡು, ಹೆಣ್ಣಿನ ಮನೆಯ ಬಾಗಿಲಿಗೆ ಬಂತು. ಕಾಳಕ್ಕನ ವಾರಗಿತ್ತಿಯ ಇಬ್ಬರು ಹೆಣ್ಣು ಮಕ್ಕಳು ಅವನಿಗೆ ಆರತಿ ಮಾಡಿದರು. ಮನೆಯೊಳಗೆ ಗಂಡುಹೆಣ್ಣಿಗೆ ಮುಖತೋರಿಸುವುದು ಮೊದಲಾದ ಶಾಸ್ತ್ರಗಳೆಲ್ಲವೂ ನಡೆದು, ಸೇರಿದ್ದ ಸುಮಾರು ಮೂವತ್ತು ಜನಗಳಿಗೂ ಕಜ್ಜಾಯದ ಊಟವಾಯಿತು. ಅಷ್ಟು ಹೊತ್ತಿಗೆ ವಾತಾವರಣದ ಹಿಂದಿನದಿನದ ಉಷ್ಣತೆಯೆಲ್ಲ ಕಳೆದು ಮುಂದಿನ ದಿನದ ಮೊದಲ ತಂಪು, ಗಾಳಿಯೊಡನೆ ಸೇರಿ ಬಂದಿತು. ಇದ್ದುದರಲ್ಲಿ ಅಲಂಕರಿಸಿದ್ದ ಊಟದ ಮನೆಯಲ್ಲಿ ಗಂಡು ಹೆಣ್ಣುಗಳನ್ನು ಬಿಟ್ಟು ಬಂದಾಗ ಸುಮಾರು ಮೂರೂವರೆ ಗಂಟೆಯಿರಬಹುದು

ಆಶ್ಚರ್ಯ! ಗಂಡ ಹೆಂಡಿರಿಬ್ಬರಿಗೂ ನಿದ್ದೆಯೇ ಬರುತ್ತಿರಲಿಲ್ಲ. ಆ ಚಿಕ್ಕ ಊಟದ ಮನೆಯ ಎರಡು ಮೂಲೆಗಳಿಗೆ ಸೇರಿದಂತೆ ಹಾಕಿದ್ದ ಕಾಲು ಮಣೆಯಮೇಲೆ ತಟ್ಟೆಗಳನ್ನಿಟ್ಟದ್ದರು. ಅವುಗಳ ತುಂಬಾ ತಿಂಡಿ ತಿನಸುಗಳು. ಒಂದು ಮೂಲೆಯಲ್ಲಿ ಒರಳು ಕಲ್ಲು. ಇನ್ನೊಂದು ಮೂಲೆಯಲ್ಲಿ ನಾಲ್ಕು ಬತ್ತಿ ಉರಿಯುತ್ತಿದ್ದ ಒಂದು ಕಂಬ ಅವುಗಳ ಮಧ್ಯೆ ಹಾಸಿದ್ದ ಎರಡು ಹೊಸ ಮಂದಲಿಗೆಗಳು ಎರಡು ಹೊಸ ದಿಂಬು, ಒಂದು 'ಬೂರ್ನೀಸು' (ರಗ್ಗು), ಮಂದಲಿಗೆಯ ಮೇಲಿದ್ದ ಒಂದು ಎಲೆ ಅಡಿಕೆ ತಟ್ಟೆ. ಮನೆ ತುಂಬಾ ಹೂವಿನ ವಾಸನೆ ಮತ್ತು ವಿಪರೀತದ ಶಕೆ.

ಗಂಡ ಕೋಟು ಪೇಟಗಳನ್ನು ಕಳಚಿ ತೊಲೆಯ ಮೇಲೆ ತಳ್ಳಿ ವಲ್ಲಿಯಿಂದ ಗಾಳಿಹಾಕಿಕೊಳ್ಳುತ್ತಿದ್ದುದನ್ನು ಕಂಡು ಪುಟ್ಟತಾಯಿ "ಏನಾರೀ ಧಗೆಯೋ....ಕೋಣೇ ಕಿಟಕೀನಾದರೂ ತಗೀಯವೆ!" ಎಂದು ಹೋಗಿ ಆ ಕೆಲಸ ಮಾಡಿದಳು. ಆ ಕಿಟಕಿ ಹೊಗೆ ಹೋಗುವುದಕ್ಕೆಂದು ಮಾಡಿದ್ದುದೇ ಹೊರತು ಗಾಳಿ ಬರಲಿ ಎಂದಲ್ಲ. ಮಾದೇವು "ಇದೇನಾ ಈ ಮನೆ ಕತೆ! ಕೂತ್ಕಳಕ್ಕೂ ಜಾಗವಿಲ್ಲವಲ್ಲ!" ಎಂದನು. ಪುಟ್ಟತಾಯಿಗೆ ಒಂದು ಉಪಾಯ ಹೊಳೆಯಿತು. ತಟ್ಟೆಗಳು, ಕಾಲುಮಣೆ, ಎಲ್ಲವನ್ನೂ ಕೋಣೆಯೊಳಕ್ಕೆ ಸಾಗಿಸಿಬಿಟ್ಟಳು. ಅವಳ ಬುದ್ಧಿಯೋಡಿದುದನ್ನು ಕಂಡು ಅವನ ಬುದ್ಧಿಯೂ ಓಡಿತು. "ಈ ದೀಪಾನೂ ಒಳಕ್ಕೇ ಸಾಗಿಸಿಬುಡು" ಎಂದನು.

ಅಲ್ಲಿಗೆ ಒಂದು ರೀತಿಯಾಯಿತು. ಮನೆಯಲ್ಲಿ ತೀರ ಕತ್ತಲೆಯ ಇಲ್ಲ. ತೀರ ಬೆಳಕೂ ಇಲ್ಲವಾಗಿ ದೀಪದಿಂದಾಗುತ್ತಿದ್ದ ಶಖೆಯೂ ಕಡಿ ಯಾಯಿತು. ಮಾದೇವು ಬಾಗಿಲ ಕಂಡಿಯಿಂದ ಹೊರಗೆ ನೋಡಿದ ಮನುಷ್ಯರ ಸುಳಿವಿರಲಿಲ್ಲ. ಬಾಗಿಲು ತೆಗೆದು ಹೊರಗೆ ಹೋಗಿ ನೊ ದನು. ದೂರದಲ್ಲಿ ತಲೆ ಬಾಗಿಲ ಪಕ್ಕದಲ್ಲಿ ಯಾರೋ ಇಬ್ಬರು ನೆಂ ಮಲಗಿ ಗೊರೆಯುತ್ತಿದ್ದರು. ಮತ್ಯಾರೂ ಇಲ್ಲ. ಹಿಂದಕ್ಕೆ ಬಂದ ಪುಟ್ಟತಾಯಿ ಕೊಣೆಯೊಳಕ್ಕೆ ಸೇರಿದಹಾಗೆ ಅವಿತಂತೆ, ಬಾಗಿಲ ಗೋ ಹತ್ತಿದಂತೆ ನಿಂತಿದ್ದಳು. ಮಾದೇವು ಸಣ್ಣಗೆ ನಕ್ಕು ಹೇಳಿದನು. ಅ ಪಿಸು ಮಾತಿಗೆ ಸ್ವಲ್ಪ ಧ್ವನಿ ಬಂದು ಸೇರಿಕೊಂಡಿತ್ತು.

"ತಟ್ಟಿಗಳು, ಕಂಬ, ಕೊಣೇಗೆ ಹೋಗಿ ಸೇರ್ಕಂಡ್ಹಂಗೆ ನೀ ಸೇರ್ಕಂಡು ಬುಡವೇ ಅಂತ ಮಾಡಿದ್ದಯೋ ?" ಎಂದನು. ಪುಟ್ಟತಾಂ ಅಷ್ಟು ಹೊತ್ತಿನವರೆಗೆ ಇರದಿದ್ದ ನಾಚಿಕೆ ನಾನಾ ಕಡೆಯಿಂದ ಬಂದು ತು ಕೊಂಡಿತು. ಅವಳು ತನ್ನ ಎರಡು ಕೈಗಳಿಂದ ಮುಖಮುಚ್ಚಿಕೊಂಡ ಅದನ್ನು ಬಿಡಿಸಲು ಮಾದೇವು ಪ್ರಯತ್ನಪಟ್ಟನು. ಕೈಗಳು ಕೈಗಳೊ ಹುಸಿಕದನವನ್ನಾಡಿದವು. ಪುಟ್ಟತಾಯಿ ಆ ಕೈಗಳೊಡನೆ ತಾನೂ ಒ ಮಂದಲಿಗೆಯ ಮೇಲಿದ್ದಳು. ಕೋಣೆಯೊಳಗಿನಿಂದ ಕಂಬದ ಪರೊ ವಾದ ಬೆಳಕು ಬಂದು ಅವಳನ್ನು ತೋರಿಸುತ್ತಿತ್ತು. ಮಾದೇವೂ ಅವಳು ಸಂಪೂರ್ಣ ಕರವಶಳಾಗಿದ್ದಳು. ಮದುವೆಯಾಗುವಾಗ ಅವಳ ದಕ್ಕೂ ಈಗಿರುವುದಕ್ಕೂ ಬಲು ವ್ಯತ್ಯಾಸವಿದೆ ಎಂದು ಅವನ ಕೈಗಳು ನಿಗೆ ಹೇಳಿದವು. ಅವಳ ಮುಖದಲ್ಲಿ ತಾನೇ ತಾನಾಗಿ ಮೆರೆಯುತ್ತಿ ದೊಡ್ಡದಾದ ಕಣ್ಣುಗಳು ಮುಚ್ಚಿಕೊಂಡಿದ್ದು ಮಿಕ್ಕ ಮುಖದ ಸೌಂದ ವನ್ನು ಆಸ್ವಾದಿಸಲು ಅಣಿಮಾಡಿಕೊಟ್ಟಿದ್ದವು. ಆ ಚಿಕ್ಕ ಬಾಯಿಗಳ ಒಂದೆರಡು ಮಾತುಗಳನ್ನು ಹೊರಡಿಸಬೇಕೆಂದು ಪಟ್ಟ ಮಾದೇವೂ ಭಗೀರಥಯತ್ನ ವಿಫಲವಾಯಿತು. ಆ ಸೋಲಿನಿಂದ ಕೆಣಕಲ್ಪಟ್ಟ ಅ ಮನಸ್ಸು ಹುಚ್ಚು ಹುಚ್ಚಾಗಿ ಆಡಿತು. ಅದರ ಹುಚ್ಚಾಟದ ಮಧ್ಯೆ ತಾಯಿ ಎರಡು ಬಾರಿ "ಹಾ" ಎಂದುದಕ್ಕೆ ಮಾದೇವೂ ಕಾರಣ ಕೇಳಿದ ತುಂಬಾ ಹೊತ್ತಿನ ಬಳಿಕ.

ಆಕಾಶದಲ್ಲಿ ಬೆಳ್ಳಿ ಮೂಡಿರಬೇಕು ಆಗ ಒಳಗೆ ತಡೆಯಲಾರದ ಶೆಖೆ ಏರ್ಪಟ್ಟು ಮಾದೇವೂ ತಮ್ಮ ಮನೆಯ ಬಾಗಿಲನ್ನೇ ಸ್ವಲ್ಪ ಓರೆ ಮಾಡಿದನು. ಹೊರಗಿನಿಂದ ಬೆಳಗಿನ ಝಾವದ ಶೀತ ಗಾಳಿ ಬಂದು ಗಂಡ ಹೆಂಡಿರನ್ನು ಉಪಚರಿಸಿತು. ಆ ಗಾಳಿಗೆ ಮೈಯೊಡ್ಡಿ ದಂಪತಿ ಗಳಿಬ್ಬರು ಕುಳಿತೇ ಇದ್ದರು. ಪ್ರಪಂಚದಲ್ಲಿದ್ದವರನ್ನೆಲ್ಲಾ ಬಲವಾಗಿ ಸ್ವಾಧೀನದಲ್ಲಿಟ್ಟಿದ್ದ ನಿದ್ದೆ ಇವರಿಬ್ಬಗೆ ವಿನಾಯಿತಿ ಕೊಟ್ಟಂತೆ ತೋರು ತ್ತಿತ್ತು.

"ನಿದ್ದೆ ಬರಕ್ಕಿಲ್ವಾ ಪುಟ್ಟಾ ?"

"ಊಹ್ಞು. ನಾನೊಂದು ಜಿನವೂ ಇಷ್ಟೊತ್ತಗಂಟಾ ಎಚ್ಚರವಾಗಿ ದ್ದೋಳೇ ಅಲ್ಲ."

"ಅಂತಾ ಜಿನ ಇದು....ಇಂದೇ ಏನು ಇನ್ನೂ ಒಸಿ ಜಿನ ಹಿಂಗೇ ಅನ್ನು !"

"ಆ ಮೇಲೆ ?"

"ಆಮೇಲೇನು ? ನಿದ್ದೆಗೆಡೋ ಸಮಾಚಾರ ಇನ್ನೊಸಿಜಿನ ಅಂದೆ. ಉಳಿದದ್ದಂತೂ ಕೊನೇವರ್ಗೂ ಇದ್ದೇಅದೆ.

"ಈ ದಿನದ ಪ್ರೀತೀನೆ ಕೊನೆವರ್ಗೂ ಇರ್ತದೊ ಇಲ್ಲ ನಾಳೆಯಿಂದಲೆ ಮೂದೇವಿ ಪೂಜೆ ನಡೀತದೋ !"

"ಉಂಟಾ ಪುಟ್ಟ. ಇರ್ಲಿ—ಗಂಡ ಹೆಡ್ತೀರೂ ಅಂದ್ರೆ ಒಂದು ಮಾತು ಬರ್ತದೆ ಹೋಯ್ತದೆ."

"ಕೋಪ ಬಂದು ಅದನ್ನಾ ಆಚೇಗೆ ಅಟ್ತದೆ."

"ಸುಮ್ಮ ಸುಮ್ಮನೆ ಬಂದದಾ ಕೋಪ. ಇಲ್ದೇ ಇದ್ದ ಮಾತುಗಳ್ನ ತಗದಾಗ ಬರ್ತದೆ.

"ಕಂಡಂತಾ ಮಾತ್ಗೇನೇ ಕೆಂಡದಂತಾಕೋಪ."

"ಏನು ನೀನು ಕಂಡೀರದು ?"

"ನಾನು ಕಂಡೀರದೇ ನಿಮ್ಮ ಕೋಪ ಒಂದನ್ನ. ನಿಮಗೆ ಎಲ್ಲರ ಮೇಲೂ ಕೋಪ. ಅಣ್ಣ, ಅತ್ತಿಗೆ, ಅಪ್ಪ, ಹೆಡ್ತಿ, ಅತ್ತೆ ಯಾರ್ನೂ ಬುಡ ಕಿಲ್ಲ ನೀವು. ಅದ್ಯಾಕೆ ನಿಮಗೆ ಅಷ್ಟು ಸಿಡುಕು ?"

" ಆವರವರ ನಡವಳಿಕೆ, ಕಂಡು !"

" ಏನು ನಡವಳಿಕೆ. ಇವರೆಲ್ಲರ ನಡವಳಿಕೆಯೂ ಕೆಟ್ಟೋಗಿದ್ದದ್ದೋ ?"

" ನಿನಗೇನು ಗೊತ್ತು. ನಮುಗಿಂತ ದೊಡ್ಡೋರೇ ನಮುಗೆ ಒಳ್ಳೇದ್ಮಾಡೋರು ಅಂತ ನೀನು ತಿಳ್ಕಂಡಿದ್ದರೆ ಅದು ಇವತ್ತೇ ಮರೆತು ಬುಡು ಪುಟ್ಟಾ. ಎಲ್ಲಾ ತಮ್ಮತಮ್ಮ ಸುಕಾ ನೋಡೋರು. ದೊಡ್ಡೋರು ಯಾವಾಗಲೂ ಚಿಕ್ಕೋರಿಗಿಂತ ಬುದ್ಧಿವಂತರು. ಅವರೆಲ್ಲ ತಮ್ಮ ಹೆಂಡತಿ, ತಮ್ಮ ಮಕ್ಕಳು ಅಂತ ಸಿಕ್ಕದ್ದನ್ನ ಬದ್ರ ಮಾಡ್ತಿರ್ತಾರೆ. ಚಿಕ್ಕೋರ್ಗೆ ಏನಿಲ್ಲ—ಬರಿಗೈ ತೋರಸ್ಬುಡ್ತಾರೆ."

" ಯಾರು, ನಿಮ್ಮ ಅಣ್ಣಯ್ಯಂದಿರಗಳ ಮಾತಾ ?"

" ಎಲ್ಲರೂ ಅಷ್ಟೆ. ಮಾತು ಕೇಳು, ಬೆಲ್ಲಕ್ಕಿಂತ ಸೀ— ಅದಕ್ಕೇ ನಾನು ಇಷ್ಟು ಬಲವಂತ ಮಾಡಿ ಲಗ್ನ ಮಾಡಿಸ್ಕಂಡದ್ದು. ಇವತ್ತು ನೀನೂ ಕೈಗೆ ಬಂದೆಯೋ—ಇನ್ನು ನೋಡು ಇನ್ನೆರಡು ತಿಂಗಳಲ್ಲಿ ಪಾಲು ಪಾರೀಕತ್ನೆಲ್ಲಾ ಮುಗಿಸ್ಬುಡ್ತೀನಿ."

" ಪಾಲು !"

" ಹ್ಞೂ ಪಾಲು. ಯಾಕೆ ಗಾಬರಿ ಆಯ್ತು!"

" ಅಯ್ಯೋ ಎಲ್ಲರ ಕೈಲೂ ನನ್ನ ಅನ್ಸಕ್ಕೆ. ನಿಮ್ಮ ದಮ್ಮಯ್ಯ ಪಾಲಿನ ಮಾತು ನೀವಾಡಬೇಡಿ."

" ಯಾಕೆ ಆಡಬೇಡ. ಯಾರಪ್ಪನ ಮನೆ ಗಂಟು ಕೇಳ್ತೀನಿ ನಾನು ? ನಮ್ಮಪ್ಪ ನಮ್ಮ ದೊಡ್ಡಣ್ಣನ ಕಡೆಗೀಯೆ. ನಾನೇನು ಕೇಳದು ನೋಡ್ತಾ ಇರು. ಅವರೇ ಕಾಲು ಕೆರೆದು ಜಗಳಾ ತಗದು ಪಾಲು ಮಾಡಿ ಬುಡ್ತಾರೆ "

" ಅವರು ಪಾಲು ಮಾಡಿದರೆ ತಾನೇ ನಮ್ಮ ಕೈಲಿ ನಡೀಸ್ಕಂಡ್ಹೋಗಕ್ಕಾದ್ದ ?—"

" ಆಗದೇ ಏನಾ. ಇರೋರಿಬ್ಬರು "

" ನನಗೆ ಭಯವಾಯ್ತದೆ. ನಿಮ್ಮ ಕೈ ಮುಗೀತೀನಿ ಈಗ್ಲೇ ಪಾಲಿನ ಸುದ್ದಿ ಎತ್ತ ಬೇಡಿ "

" ನಿನಗೇನು ಗೊತ್ತಾಯ್ತದೆ ಸುಮ್ನಿರು "

" ಹಂಗೆ ಮಾಡಬೇಡಿ ನನ್ನ ಮಾತು ಕೇಳಿ "

" ಸುಮ್ನೆ ಕೂತ್ಕೊ ಮೂದೇವಿ !"

" ಸುರುವಾಯ್ತಲ್ಲ ಮೂದೇವಿ ಪೂಜೆಗೆ "

ಮೂದೇವಿ ಪೂಜೆ ಎನ್ನುವ ಸರಸದ ಮಾತು ಮಾತಿನ ವಿರಸದ ಮಾರ್ಗವನ್ನು ತಿರುಗಿಸಿಬಿಟ್ಟಿತು. ಮಾದೇವೂನೂ ನಕ್ಕು ಬಿಟ್ಟನು.

ಅಳಿಯ ಎರಡು ದಿವಸಗಳು ಕಿರೀಕಾಟಿಯಲ್ಲಿದ್ದು ಮಾರನೇಯ ದಿನ ಹೊರಟು ನಿಂತನು. ತಾಯಕ್ಕನೂ ಅದಕ್ಕೆ ಸಿದ್ಧಳೇ ಇದ್ದಳು. 'ಶೋಭನ'ದಲ್ಲಿ ಕೂಡ ಒಂದು ರೇಶ್ಮೆ ಸೀರೆಯನ್ನು ತರದೇ ನೂಲಿನ ಸೀರೆ ಗಳಲ್ಲೇ ದಬಾಯಿಸಿದ ತನ್ನ ತಾಯಿಯ ವಿಷಯದಲ್ಲಿ ಪುಟ್ಟತಾಯಿಗೆ ಬೇಸರವೇ ಇದ್ದುದರಿಂದ ತೌರನ್ನು ಬಿಟ್ಟುಹೋಗುವಾಗ ಪುಟ್ಟತಾಯಿಗೂ ಕಣ್ಣೀರು ಅಷ್ಟೇನೂ ಸೂರೆ ಹೋಗಲಿಲ್ಲ.

ಅಳಿಯ ಮಗಳು ಹೊರಟುಹೋದ ಮೇಲೆ ತಾಯಕ್ಕನಿಗೆ ಮನೆ ಬಲು ಬಿಕೋ ಎನ್ನಿಸಿತು. ಇಷ್ಟು ದಿನವೂ ಪುಟ್ಟತಾಯಿಯು ಊರಿಗೆ ಬರದಿದ್ದರೂ ಅವಳು ಕಿರೀಕಾಟಿಯವಳೇ ಆಗಿದ್ದು ಇನ್ನು ಮೇಲೆ ಎಷ್ಟು ಅವಳು ಕಿರೀಕಾಟಿಗೆ ಬಂದರೂ ಗುಜ್ಜಗೆರೆಯವಳಾಗಿ ಹೋದಳು. ತಾಯಕ್ಕನಿಗೆ ಒಬ್ಬ ಮಗಳು ಇರಲೇ ಇಲ್ಲವೆಂದರೂ ಸರಿಯೆನಿಸುವಂತಾ ಯಿತು. ಯಾವಾಗಲಾದರೂ ಅವಕಾಶ ಮಾಡಿಕೊಂಡು ಒಂದು ದೊಡ್ಡ ಸೀರೆಯನ್ನು ತೆಗೆದುಕೊಂಡು ಹೋಗಿ ಕೊಟ್ಟುಬಿಟ್ಟರೆ ಅಲ್ಲಿಗೆ ಅವಳ ತೌರಿನ ಋಣವೆಲ್ಲ ತೀರಿಹೋದಂತಾಗುವುದೆಂದು ತಾಯಕ್ಕ ಭಾವಿಸಿದಳು.

ದೊಡ್ಡ ಸೀರೆಗೆಷ್ಟಾಗಬಹುದೆಂಬ ಯೋಚನೆ ಬಂದಾಗ ಶೋಭನಕ್ಕೆ ಎಷ್ಟು ಖರ್ಚಾಯಿತೆಂಬ ಲೆಖ್ಖವೂ ಅವಳ ಗಮನಕ್ಕೆ ಬಂದಿತು. ಅದ ಕ್ಕೆಂದು ಸಾಲತಂದಿದ್ದ ನೂರು ರೂಪಾಯಿಗಳಲ್ಲಿ ಎಂಭತ್ತು ರೂಪಾಯಿ.ಗಳು ಖರ್ಚಾಗಿದ್ದವು. ಉಳಿದಿದ್ದ ಇಪ್ಪತ್ತು ರೂಪಾಯಿಗಳನ್ನು ಚಿಕ್ಕಲಿಂಗಪ್ಪ

ನವರಿಗೇ ಹಿಂದಿರುಗಿಸಿ ಬಿಡೋಣವೇ ಎಂದು ಯೋಚಿಸಿದಳು. ಅದ ಕ್ಕೊಂದು ಬಾರಿ ಆತನ ಮುಖವನ್ನೇನು ನೋಡುವುದೆಂದು ಕೊಂಡು ಸುಮ್ಮನಾದಳು. ಹಾಗಾಡಿ ಹೀಗಾಡಿ ಅದು ಹನ್ನೆರಡು ರೂಪಾಯಿ ಆಯಿತು. 'ಎಲ್ಲಿಗೋ ಸೇರಬೇಕು, ಅದಕ್ಕೆ ಒಂದುತರಹದ ಬಟ್ಟೆಗಳನ್ನು ಹೊಲೆಸಿಕೊಳ್ಳಬೇಕೆಂದು' ಮಲ್ಲೇಶ ಆ ಹನ್ನೆರಡು ರೂಪಾಯಿಗಳನ್ನೂ ಕಿತ್ತುಕೊಂಡು ಹೋದನು.

ಬೇಡಬೇಡವೆನ್ನುತ್ತಲೇ ಚಿಕ್ಕಲಿಂಗಪ್ಪನವರ ಹತ್ತಿರದ ಸಾಲದ ಲೆಕ್ಕ ಹೀಗೆ ಬೆಳೆಯುತ್ತಲೇ ಇತ್ತು. ಅವರ ಬಳಿಯಲ್ಲೇ ಏಕೆ ಮತ್ತೆ ಮತ್ತೆ ಹೋಗಬೇಕೆಂದು ಬೇರೆ ಕಡೆಯಲ್ಲಿ ತಾಯಕ್ಕ ಇನ್ನಿಲ್ಲದ ಪ್ರಯತ್ನಗಳನ್ನು ಮಾಡಿ 'ಇಲ್ಲ' ಅನ್ನಿಸಿಕೊಂಡಿದ್ದಳು. ಚಿಕ್ಕಲಿಂಗಪ್ಪನವರ ಹತ್ತಿರ ಅವಳ ಹೊಲ-ಮನೆಗಳ ಮೇಲಿನ ಸಾಲವಿದೆ ಎಂಬುದು ಊರಿಗೇ ತಿಳಿದ ವಿಷಯ ವಾಗಿತ್ತು. ಚಿಕ್ಕಲಿಂಗಪ್ಪನವರು ಕೋರ್ಟಿನ ವ್ಯವಹಾರದಲ್ಲಿ ಕಿಲಾಡಿ ಗಳೆಂದು ಪ್ರಸಿದ್ಧರಾಗಿದ್ದರು. ಹಾಗಿರುವಾಗ ಅವರ ದುಡ್ಡಿನ ಜೊತೆಯಲ್ಲಿ ತಮ್ಮ ದುಡ್ಡನ್ನು ಬೆರಸುವ ಧೈರ್ಯ ಕಿರೀಕಾಟೆ, ಗುಜ್ಜಗೆರೆಯಲ್ಲಿ ಯಾರಿಗಿ ದ್ದೀತು ? ಸಾಲವನ್ನೇ ಮಾಡದೆ ಇರಬೇಕೆಂದು ತಾಯಕ್ಕ ಎಷ್ಟು ನಿರ್ಧರಿ ಸಿಕೊಂಡಿದ್ದರೂ ಅನಿರೀಕ್ಷಿತವಾದ ಖರ್ಚುಗಳು ಬರುತ್ತಲೇ ಇದ್ದವು. ಉತ್ಪತ್ತಿ ದಿನದಿನಕ್ಕೆ ಕಡಿಮೆಯೇ ಆಗುತ್ತಿತ್ತು. ವರ್ಷವರ್ಷದ ಬಡ್ಡಿ ಯನ್ನು ಅವಳು ಕಟ್ಟಿಕೊಂಡುಬರುತ್ತಿದ್ದರೆ, ಅಸಲು ಬೆಳೆಯುತ್ತಿತ್ತು. ಅಸಲನ್ನು ಬೆಳಸದೇ ಇದ್ದಾಗ ಬಡ್ಡಿ ಬೆಳೆಯುತ್ತಿತ್ತು.

ಮಲ್ಲೇಶನಿಗೂ ಹದಿನಾಲ್ಕು ತುಂಬಿ ಹದಿನೈದನೇ ವರ್ಷ ನಡೆಯು ತ್ತಿತ್ತು. ಐದು ರೂಪಾಯಿನ ಪರೀಕ್ಷೆಯ ತರಗತಿ ಮಾತ್ರ ಅವನನ್ನು ಬಿಟ್ಟಿರಲಿಲ್ಲ. ಅದಕ್ಕೆ ಕಾರಣ ಅವನಿಗೇ ಗೊತ್ತಿತ್ತು. ಆದರೆ ಅವರಿವ ರೊಡನೆ ಆ ಕಾರಣವನ್ನು ಹೇಳುವುದಕ್ಕಾಗುತ್ತಿರಲಿಲ್ಲ. ಬುದ್ದಿಮೇಷ್ಟ್ರು ಮನೆ ಬಿಟ್ಟು ಬಿಟ್ಟುದಕ್ಕೆ ಎಲ್ಲಾ ಮೇಷ್ಟರಿಗೂ ತನ್ನಮೇಲೆ ಕೋಪವೆಂದೂ ಅವರು ತನ್ನೊಬ್ಬನಿಗೇ ಬೇಕೆಂದು ಸರಯಾಗಿ ಪಾಠಹೇಳಿಕೊಡುವುದಿಲ್ಲ ವೆಂದೂ ಮಿಕ್ಕವರೊಡನೆ ಹೇಳಿಕೊಳ್ಳುತ್ತಿದ್ದುದಲ್ಲದೆ ತಾಯಕ್ಕನಿಗೂ ಅದೇ

ಕಾರಣವನ್ನೇ ಹೇಳಬೇಕಾಗಿತ್ತು. ಅದನ್ನೇ ಹೆಚ್ಚಿಸಿ, ಒಂದುದಿನ ತಾನು ಮೈಸೂರಿಗೇ ಹೋಗಿ ಅಲ್ಲಿಯ ಮಿಡಲ್‌ಸ್ಕೂಲಿಗೆ ಸೇರಿ ಪಾಸುಮಾಡಿಕೊಳ್ಳುವುದೊಳ್ಳೆಯದೆಂದು ಸೂಚಿಸಿದನು. ಅವನೊಬ್ಬನೇ ಮೈಸೂರಿಗೆ ಹೋಗಿರುವ ಸಾಹಸದ ಮಾತನ್ನು ತಾಯಕ್ಕ ಆಕ್ಷಣವೇ ಸರಿಯಲ್ಲವೆಂದುಬಿಟ್ಟಳು. ಐದು ರೂಪಾಯಿನ ಪರೀಕ್ಷೆಯಾದಮೇಲೆ ಹೇಗಿದ್ದರೂ ಮೈಸೂರಿಗೆ ಹೋಗಲೇಬೇಕೆಂದೂ, ಒಂದು ವರ್ಷ ಮುಂಚಿತವಾಗಿ ಹೋದರೆ ಏನಾಗಿಹೋದೀತೆಂದೂ ವಾದಿಸುವ ಅವಕಾಶವನ್ನು ಮಲ್ಲೇಶ ಆಗಾಗ್ಗೆ ತೆಗೆದುಕೊಳ್ಳುತ್ತಲೇ ಇದ್ದನು. ಈ ವಾದದ ಮಧ್ಯೆ ಆ ವರ್ಷವೂ ತಾನು ಫೇಲಾಗುವುದು ಖಂಡಿತವೆಂದೂ ತಾನೇ ತಿಳಿಸುತ್ತಿದ್ದನೆಂಬುದೂ ಅವನಿಗೆ ಮರೆತು ಹೋಗುತ್ತಿತ್ತು. ಅವನು ಏನು ಮಾಡಿದರೂ ಅರ್ಥಮಾಡಿಕೊಳ್ಳಲಾರದ ತಾಯಕ್ಕ ಮಗನ ಬಾಯನ್ನೇ ನೋಡುತ್ತ ನಿಂತುಬಿಡುತ್ತಿದ್ದಳು.

ಪುಟ್ಟತಾಯಿ ಗಂಡನ ಮನೆ ಸೇರಿದಮೇಲಂತೂ ಇಪ್ಪತ್ನಾಲ್ಕು ಗಂಟೆಯೂ ಮಲ್ಲೇಶನ ಯೋಗಕ್ಷೇಮ ಚಿಂತನೆಯೇ ತಾಯಕ್ಕನ ಗುರಿಯಾಗಿತ್ತು. ಗುಜ್ಜಗೆರೆಗೆ ಹೋದಾಗ ಅವಳು ಅಳಿಯನ ಮನೆಯಲ್ಲಿ ಕಾಣುತ್ತಿದ್ದ ಊಟ ಉಪಚಾರಗಳಲ್ಲಿನ ಅಚ್ಚುಕಟ್ಟಿನಿಂದಲೇ ಪುಟ್ಟತಾಯಿಯ ಸೌಖ್ಯವನ್ನು ತಾಯಕ್ಕ ಊಹಿಸುತ್ತಿದ್ದುದು. ಅದೇನೋ ನಿಜವಾದ ವಿಷಯವೇ. ಪುಟ್ಟತಾಯಿಯ ವಾರಗಿತ್ತಿಯರಿಬ್ಬರೂ ಅನಾಗರೀಕರಾದರೂ ಜಾಣೆಯರು. ಅವರ ಗಂಡಂದಿರು ದುಡಿಯುವುದರಲ್ಲಿ ಧೀರರು. ಆದುದರಿಂದಲೇ ಮನೆಯು ಉತ್ತಮಸ್ಥಿತಿಯ ಕಡೆಗೆ ಮುನ್ನಡೆಯುತ್ತಿತ್ತು. ಎರಡನೇ ಸೊಸೆ ಬಂದಮೇಲೆಯೇ ಯಜಮಾನ ಮಲ್ಲಪ್ಪ ಎರಡು ಹೊಲಗಳನ್ನು ತೆಗೆದದ್ದು, ಮನೆಯ ಹಂದರವನ್ನು ಬದಲಾಯಿಸಿ ಮಳೆ ತಡೆಯುವಂತೆ ಮಾಡಿದ್ದು. ಹಸುಗಳಿಗೆ ಬದಲಾಗಿ ಒಂದುಜೊತೆ ಎತ್ತುಗಳನ್ನು ತಂದು ಆರಂಭಕ್ಕೆ ಪ್ರಾರಂಭಿಸಿದ್ದು.

ಅದರಿಂದ ಮನೆಯಲ್ಲಿ ಕಿರಿಯಸೊಸೆಯ ಸ್ಥಾನ ಹಿರಿದಾಗಿತ್ತು. ಹಿರಿಸೊಸೆಕೂಡ ಸದ್ಗುಣಿಯಾಗಿದ್ದುದರಿಂದ 'ವಾರಗಿತ್ತಿ'ಯೊಡನೆ ಕಚ್ಚಾಟಕ್ಕೆ ತೊಡಗದೆ ತನ್ನ ಗೌರವವನ್ನು ಹೆಚ್ಚಿಸಿಕೊಂಡಿದ್ದಳು. ಅವಳಿಗಂತೂ ಪುಟ್ಟ

ತಾಯಿಯನ್ನು ಕಂಡರೆ ತನ್ನ ದೊಡ್ಡ ಮಗಳೆಂಬ ಭಾವನೆ. ಅವಳಊಟ ತಿಂಡಿ ನೀರಿನ ಮೇಲ್ವಿಚಾರಣೆ ದೊಡ್ಡವಾರಗಿತ್ತಿಯದೇ. ಚಿಕ್ಕವಾರಗಿತ್ತಿ ಪುಟ್ಟತಾಯಿಗೆ ಸ್ನೇಹಿತೆಯಾಗಿರಲು ಪ್ರಯತ್ನಿಸುತ್ತಿದ್ದಳು. ಹೊಸದರಲ್ಲಿ ಪುಟ್ಟತಾಯಿ 'ತಟಸ್ಥ'ಳಾಗಿದ್ದು ನೋಡಿದಳು. ಕ್ರಮಕ್ರಮೇಣ ಅವರಿಬ್ಬರ ಗುಣವೂ ಅರ್ಥವಾದಮೇಲೆ ಭಯವನ್ನು ಬಿಟ್ಟು ಅವರೊಡನೆ ಬೆರಸಿಕೊಂಡಳು.

ಪುಟ್ಟತಾಯಿಯ ಭಾವಂದಿರೂ ಅಷ್ಟೆ. ಅವರಿಬ್ಬರಿಗೂ ದುಡಿಯುವುದೆಂದರೆ ಸೋಮಾರಿಗಳಿಗೆ ಹರಟೆಯಿದ್ದಂತೆ. ತಮ್ಮ ಬೆವರನ್ನು ತಾವು ನೋಡಿಕೊಂಡವರಲ್ಲ. ಇಬ್ಬರಿದ್ದಕಡೆ ಬಾಯಿಬಿಡುವವರಲ್ಲ. ಒಂದು ಮದುವೆ, ಒಂದು ಶೋಭನದ ಸಮಾರಂಭಗಳಿಗೆ ಹೋಗುವವರಲ್ಲ. ಹೋದರೂ ಬಾಯಿ ಮುಚ್ಚಿಕೊಂಡು ಕುಳಿತಿದ್ದು ಕಾರ್ಯ ಮುಗಿಸಿಕೊಂಡು ಮನೆಗೆ ಬರುತ್ತಿದ್ದವರು. ಅವರಿಗೆ ಒಂದೇ ಆಶ್ಚರ್ಯ. ಮಾದೇವೂ ಅಷ್ಟು ಕಾಲವನ್ನು ಕೆಲಸವಿಲ್ಲದೇ ಹೇಗೆ ಕಳೆಯುವನೆಂದು—

ಮಾದೇವೂಗೆ ಅವರ ಆಶ್ಚರ್ಯ ಅರ್ಥವಾಗುತ್ತಿರಲಿಲ್ಲ. ಬೆಳಗಾಗೆದ್ದು ಒಂದು ಬಾರಿ ಎಲ್ಲೆಲ್ಲಿಯೋ ಅಲೆದು ಸುಮಾರು ಒಂಭತ್ತು ಗಂಟೆಯ ಹೊತ್ತಿಗೆ ಮನೆಗೆ ಬರುತ್ತಿದ್ದ. ತಂಗಳನ್ನು ಒಂದುದಿವಸ ಕೇಳಿದರೆ ಒಂದು ದಿವಸ ಕೇಳುತ್ತಿರಲಿಲ್ಲ. ಒಂದು ಕಪ್ಪು 'ಟೀ' ಮಾತ್ರ ಅವನಿಗೆ ಕೊಟ್ಟೇ ತೀರಬೇಕಾಗಿತ್ತು. ಆನಂತರ ಅವನು ಮನೆಬಿಟ್ಟರೆ ಹಿಂದಿರುಗುತ್ತಿದ್ದುದು ಮಧ್ಯಾಹ್ನ ಮೂರರಮೇಲ್ಪಟ್ಟು. ಅಲ್ಲಿಯವರೆಗೆ ಚಾವಡಿಯಲ್ಲಿ ಹುಲಿಕಲ್ಲಿನಾಟ ಸ್ವಲ್ಪಹೊತ್ತು, ಸಂಕೇಗೌಡನ ಅಂಗಡಿಯ ಮುಂದೆ ಒಂದಷ್ಟು ಹೊತ್ತು, 'ಮಾಂತದೇವರ ಓಟಲಿ'ನಲ್ಲಿ ಸ್ವಲ್ಪಹೊತ್ತು ಕಳೆದಮೇಲೆ ನೊಡಿದರೆ ಮೂರುಗಂಟೆಯಾಗಿರುತ್ತಿತ್ತು. ಮನೆಯಲ್ಲಿ ಮಧ್ಯಾಹ್ನದ ಊಟವಾದಮೇಲೆ ಮನೆಬಿಟ್ಟರೆ, ಗುಂಡಸೆಟ್ಟಿ ಎಲೇತೋಟದಲ್ಲಿ ಸೇರುತ್ತಿದ್ದ ಜೂಜಿನ ಗುಂಪಿನಲ್ಲಿ ಬಹಳಹೊತ್ತು ಕಳೆದುಹೋಗುತ್ತಿತ್ತು. ಅಲ್ಲಿ ಗುಂಪು ಸೇರದಿದ್ದ ದಿನ ಅವರ ಹೊಲ, ಇವರ ತೋಟ ಎಂದು ಸುತ್ತಿ ಅಲ್ಲಿದ್ದ ತನ್ನ ಸ್ನೇಹಿತರ ಬೇಸರವನ್ನೆಲ್ಲಾ ಪರಿಹಾರಮಾಡಿ, ಅವರು ಇವನ ದಾರಿಗೆ

ಬರದೇಹೋದರೆ ದಟ್ಟವಾದ ಯಾವುದಾದರೂ ಮರದಕೆಳಗೆ ನಿದ್ದೆ ಹೊಡೆದು ಸಂಜೆಗೆ ಊರಕಡೆಗೆ ಹೊರಡುತ್ತಿದ್ದ ಪದ್ಧತಿ. ಊರು ಸೇರಿದ ಮೇಲೆ ಎಲ್ಲಾದರೊಂದುಕಡೆ ಕಡಲೇಪುರಿ, ಟೀ, ಸಮಾರಂಭವನ್ನೇರ್ಪಡಿಸಿ ಕೊಂಡು ಕುಳಿತರೆ ಹೊತ್ತು ಹೋಗುವುದೇ ತಿಳಿಯುತ್ತಿರಲಿಲ್ಲ. ಮಾತು.... ಮಾತು....ಮಾತು....

ಮಾದೇವೂ ಕಾಲ ಕಳೆಯುತ್ತಿದ್ದ ಬಗೆ ಹೀಗೆ. ಇವನ ಈ ಕಾರ್ಯ ಕ್ರಮಗಳಿಗೆ ಚಿಕ್ಕಲಿಂಗಪ್ಪನವರ ಹಣದ ಒತ್ತಾಸೆ. ಮಾದೇವು ಒಬ್ಬನಿಗೇ ಅವರು ಕಾಸು ದುಡ್ಡು ಕೊಡುತ್ತಿದ್ದರೆ ಆಕ್ಷೇಪಿಸುವವರು ಯಾರಾ ದರೂ ಹುಟ್ಟಿಕೊಂಡಾರು ಎಂದು ಪಟೇಲರು ಅವನ ಸಂಸಾರಕ್ಕೂ ಪ್ರವೇ ಶಿಸಿಬಿಟ್ಟರು. ಅವರ ಮನೆಯ ಒಳ್ಳೆಯದು ಕೆಟ್ಟದ್ದಕ್ಕೆಲ್ಲಾ ನಿಂತು ಕೊಂಡು ಖರ್ಚುಬಾಬುಗಳನ್ನು ತೋರಿಸಿ ಅವರೂ ತಮಗೆ ಸಾಲಗಾರರಾ ಗುವಂತೆಯೇ ಮಾಡಿದ್ದರು. ಮಾದೇವೂ ತಂದೆ ಮಲ್ಲಪ್ಪ ಯಾವ ಕೆಲಸಕ್ಕೆ ಪ್ರಾರಂಭಿಸಿದರೂ ಚಿಕ್ಕಲಿಂಗಪ್ಪನವರು ತಲೆಹಾಕಿಕೊಂಡು ಬರುತ್ತಿದ್ದರು. ನಿಷ್ಠೂರ ಕಟ್ಟಿಕೊಳ್ಳಬಾರದೆಂದು ಮಲ್ಲಪ್ಪ ಇಲ್ಲಿಯವರೆಗೂ ಅವರನ್ನು ಸಹಿಸಿಕೊಂಡು ನಷ್ಟಪಡುತ್ತಿದ್ದನು. ಅವರ ಸಾಲವೆಂದು ಹೇಳಿಕೊಳ್ಳು ತ್ತಿದ್ದ ಮೊಬಲಗನ್ನು ಮಲ್ಲಪ್ಪ ಹಿಂದಿರುಗಿಸುವುದಕ್ಕೆ ಹೋದರೆ ಏನಾದರೂ ಒಂದು ನೆವ ಹೂಡಿ ಅದನ್ನು ತೆಗೆದುಕೊಳ್ಳದೇ ಇರುವುದಕ್ಕೆ ದಾರಿಮಾಡು ತ್ತಿದ್ದರು. ಮಾದೇವೂಗೆ ಚಿಕ್ಕಲಿಂಗಪ್ಪನವರು ಅಲ್ಪಸ್ವಲ್ಪ ದುಡ್ಡನ್ನು ಸಾಲವಾಗಿ ಕೊಟ್ಟಿರುವರೆಂಬ ವಿಷಯ ಮಲ್ಲಪ್ಪನಿಗೆ ಗೊತ್ತಿದ್ದರೂ ಇಷ್ಟೇ ಎಂದು ಖಚಿತವಾಗಿ ತಿಳಿದಿರಲಿಲ್ಲ.

ಸುಮಾರು ಆರುನೂರು ರೂಪಾಯಿಗಳಷ್ಟನ್ನು ಚಿಕ್ಕಲಿಂಗಪ್ಪನವರಿಂದ ಪಡೆದು ವೆಚ್ಚಮಾಡಿಬಿಟ್ಟಿದ್ದರೂ ಮಾದೇವೂಗೆ ದುಡ್ಡಿನಬೆಲೆಯೇ ತಿಳಿದಿರ ಲಿಲ್ಲ. ಅವನ ಅಷ್ಟಾಳ ಸ್ನೇಹಿತರ ಪೈಕಿಯೂ ಯಾರಾದರೊಬ್ಬರು ಅವನ ದುಂದುಗಾರಿಕೆಯನ್ನು ಆಕ್ಷೇಪಿಸುತ್ತಿದ್ದುದುಂಟು. ನಮ್ಮದೂ ಎಂದು ಒಂದಷ್ಟು ನಮ್ಮ ಕೈಕೆಳಗೆ ಬರೋವರೆಗೆ ಮಾತ್ರ ಹೀಗೆ ಆಮೇಲೆ ಬಹಳ ಬಿಗಿಯಾಗಿರುತ್ತೇನೆ ಎಂದು ಹೇಳಿಕೊಳ್ಳುತ್ತಿದ್ದನು. ಇಂತಹ ಮಾತು

ಗಳನ್ನು ಅಳವಡಿಸಿಕೊಂಡು ಆಡುವುದಕ್ಕೆ ಬರುತ್ತಿತ್ತೇ ಹೊರತು ಮತ್ತೇನೂ ಮಾಡಿ ರೂಢಿಯಿರಲಿಲ್ಲ. ಅವನಿಗೆ ಬರುತ್ತಿದ್ದ ಕೆಲಸವೇನೆಂದರೆ ಟೀ ಕಾಯಿಸುವುದು. ಉಪ್ಪಿಟ್ಟುಮಾಡುವುದು. ಪುರಿಗೆ ಒಗ್ಗರಣೆ ಹಾಕುವುದು. ಹತ್ತುಜನ ಉಂಡಾಡಿಗಳು ಸೇರಿ ಸಮಾರಂಭವನ್ನೇರ್ಪಡಿಸಿದಾಗ ಮಾದೇವೂವೇ ಅಡಿಗೆಯ ನಾಯಕತ್ವವನ್ನು ವಹಿಸಿಕೊಳ್ಳುತ್ತಿದ್ದನು. ಅವನು ಹೇಳಿದ 'ಲವಾಜಮೆ' ಯನ್ನು ಒದಗಿಸಿದರೆ ಅವನ ಕೈನ ತಿಂಡಿ ಟೀ ಗಳ ರುಚಿಯನ್ನು ಹತ್ತಾರುವರ್ಷಗಳವರೆಗೆ ಮರೆಯಲಾಗುತ್ತಿರಲಿಲ್ಲ,

ತಿಂಡಿ ಟೀಗಳ ತಯಾರಿಕೆಯೇ ಅಲ್ಲದೇ ಅವುಗಳ ವೆಚ್ಚಗಳನ್ನೂ ಆಗಾಗ್ಗೆ ಮಾದೇವೂ ವಹಿಸಿಕೊಳ್ಳುತ್ತಿದ್ದನು. ಆದಿನದ ರುಚಿಯೇ ರುಚಿ. ಎರಡು ರೂಪಾಯಿಗಳಾಗುವ ಕಡೆ ಹತ್ತು ರೂಪಾಯಿ ಆಗಲಿ ಮಾಡುವ ಕೆಲಸ ಅಚ್ಚುಕಟ್ಟಾಗಿರಬೇಕೆಂದು ಅವನ ವಾದ. ಇಂತಹ ಸಂದರ್ಭದಲ್ಲಿಯೇ ಅವನು ಸಾಲಕ್ಕೆ ಸಿಕ್ಕಿಕೊಳ್ಳುತ್ತಿದ್ದುದು. ಒಳಗೇ ಈ ಸಾಲದ ಗುಡ್ಡೆ, ಗುಡ್ಡವಾಗಿ ಗುಡ್ಡ, ಬೆಟ್ಟವಾಗಿ, ಬೆಟ್ಟ ಪರ್ವತವಾದಾಗ ಅದರ ಬಗ್ಗೆ ಮಲ್ಲಪ್ಪನವರೆಗೂ ದೂರುಹೋಯಿತು.

ಸಂಕೇಗೌಡ ಯಾರಿಗೂ ಹತ್ತು ರೂಪಾಯಿಗಳಷ್ಟು ಸಾಲ ಕೊಟ್ಟವನಲ್ಲ. ಅವನ ಅಂಗಡಿಯಲ್ಲಿ ಮಾದೇವೂಗೆಂದು ಕೊಡಲಾಗಿದ್ದ ಟೀಸೊಪ್ಪು, ಒಳ್ಳೆಣ್ಣೆ, ಪುರಿ, ಬೀಡಿಗಳ ಲೆಕ್ಕ ಹದಿನೇಳು ರೂಪಾಯಿ ಆಗಿಹೋಗಿದ್ದು ಅವನೇ ಮೊದಲನೆಯವನಾಗಿ ಮಲ್ಲಪ್ಪನನ್ನು ಸಂಧಿಸಿ ಈ ಬಗ್ಗೆ ಮಾತನಾಡಿದ್ದನು ಮಲ್ಲಪ್ಪ. 'ನಮ್ಮುಡಗನಿಗೆ ಬುದ್ದಿ ಏಳಿ ಸೊಲ್ಪ ಬಿಗೀಮಾಡಿ ಆಮೇಲೆ ನಾನೇ ಕೊಡ್ತೀನಿ ಗೌಡ. ಇನ್ಮೇಲೆ ಅವನಿಗೇನೂ ಕೊಡಬೇಡ' ಎಂದು ಸಮಾಧಾನ ಹೇಳಿ ಕಳುಹಿಸಿದನು.

ಎರಡನೆಯವನಾಗಿ ರೇಷ್ಮೆ ದಳ್ಳಾಳಿಯೀರತ್ತಯ್ಯ ಹೋಗಿ ತನಗೆ ಮಾದೇವೂ ಮೂವತ್ತಾಲ್ಕು ರೂಪಾಯಿಗಳನ್ನು ಕೊಡಬೇಕೆಂದು ಮಲ್ಲಪ್ಪನೆದುರಿಗೆ ಅತ್ತನು. ಮಲ್ಲಪ್ಪನೂ ಅತ್ತನು. ಅದರಿಂದ ಯೀರತಯ್ಯನಿಗೆ ಏನೂ ಬರಲಿಲ್ಲ. ಬದಲಾಗಿ 'ನಮ್ಮಪ್ಪನಿಗೆ ಹೋಗಿ ಹೇಳ್ದ್ಯಾ ಶಿ. ಅವನತ್ರವೇ ಈಸ್ಕೋ ಹೋಗು' ಎಂದು ಮಾದೇವು ಯೀರತ್ತಯ್ಯನ ಹತ್ತಿರ ಭಂಡಾಟಕ್ಕೆ ಪ್ರಾರಂಭಿಸಿದ್ದ.

ಎಲ್ಲರಿಗಿಂತ ಹೆಚ್ಚಾಗಿ ಮೂರನೆಯವಳಾಗಿ ಹೆಮ್ಮಾರಿ ಬಟ್ಟಮ್ಮ ಮಲ್ಲಪ್ಪನ ಮನೆ ಬಾಗಿಲ ಹತ್ತಿರಕ್ಕೂ ಹೋಗದೆ ನಡುಬೀದಿಯಲ್ಲೇ ನಿಂತು ಮಾದೇವೂ ಅನ್ನು ಈಚೆಗೆ ಕರೆಯುತ್ತಾ ತನ್ನ ಹಾಲಿನ ಬಾಕಿಗಾಗಿ ಹಿಡಿ ಶಾಪ ಹಾಕುತ್ತ ನಿಂತದಿನ ಪರಿಸ್ಥಿತಿ ಪ್ರಕೋಪಕ್ಕೇರಿತು. ಬಟ್ಟಮ್ಮನ ನಾಲಿಗೆ ಗುಜ್ಜಗೆರೆಗೇ ಪ್ರಸಿದ್ಧಿಯಾದದ್ದು. ಸರ್ಕಾರವನ್ನೇ ನಡುಗಿಸಿಬಿಡು ತ್ತೇನೆನ್ನುತ್ತಿದ್ದ ಚಿಕ್ಕಲಿಂಗಪ್ಪನವರನ್ನೂ ನಡುಗಿಸುತ್ತಿದ್ದ ಳೆಂದರೆ ಅವಳೇ. ಅವಳು ತಮ್ಮೂರಿನ ಯಾರಿಗೂ ಸಾಲವನ್ನು ಕೊಡುವುದಿಲ್ಲವೆಂದು ಹೇಳು ತ್ತಲೇ ಇರಲಿಲ್ಲ. ಒಂದು ಮಗುವಿಗಾದರೂ ಸಾಲಕೊಡುವುದಕ್ಕೆ ತಯಾ ರಾಗಿದ್ದಳು. ಯಾವ ವಿಧವಾದ ಒತ್ತೆಯೂ ಇಲ್ಲದೇ ಅಷ್ಟು ಧೈರ್ಯವಾಗಿ ಸಾಲಕೊಡುತ್ತಿದ್ದ ಹೆಂಗಸು ನಮ್ಮ ದೇಶಕ್ಕೇ ಬಟ್ಟಮ್ಮ ಒಬ್ಬಳೇ ಏನೋ. ನಡುಬೀದಿಯಲ್ಲಿ ನಿಂತು ಅವಳಾಡುತ್ತ ನಿಂತಮಾತು ಮನೆಯವರೆಲ್ಲರನ್ನೂ ಮುಖಮುಚ್ಚಿಕೊಳ್ಳುವಂತೆ ಮಾಡಿತ್ತು. ಮಲ್ಲಪ್ಪ ಗಟ್ಟಿ ಮನಸ್ಸು ಮಾಡಿ ಅವಳಾಡುವುದನ್ನೆಲ್ಲಾ ಸುಮ್ಮನೆ ಕೇಳುತ್ತಾ ಜಗಲಿಯ ಮೇಲೇ ಕುಳಿತು ಬಿಟ್ಟಿದ್ದನು. ಬಟ್ಟಮ್ಮನ ಶೃತಿ ಏರುತ್ತ ಹೋಯಿತು. ಕೊನೆಗೆ ಮಾದೇವೂ ದೊಡ್ಡಣ್ಣ ಬಂದು ಅವಳ ಲೆಕ್ಕವನ್ನು ತೀರಿಸಿ ಅವಳನ್ನು ಕಳಿಸಿ ಮನೆಯೊಳಕ್ಕೆ ಬಂದು ಮಾದೇವೂವನ್ನೂ ಚೆನ್ನಾಗಿ ಬೈದನು.

ಅಷ್ಟುಹೊತ್ತಿನವರೆಗೆ ಮಳ್ಳಿಯಂತೆ ಎತ್ತುಗಳ ಮರೆಯಲ್ಲಿ 'ಚರಣಿಗೆ' ಗೋಡೆಯಮೇಲೆ ಕುಳಿತಿದ್ದ ಮಾದೇವೂಗೆ ಅಣ್ಣನ ಮಾತಿನಿಂದ ಅವಮಾನ ವಾಗಿ ಎದ್ದು ನಿಂತನು. ಮಾತಿಗೆ ಪ್ರತಿಯಾಡಿದನು. ಮಾತು ಜಗಳ ವಾಯಿತು. ಕೈಕೈ ಕೂಡುವಷ್ಟು ಬಿಸಿಯೇರಿತು. ಮೂವರು ಹೆಂಗಸರೂ ಮೂಕರಾದರು. ಎರಡು ಮಕ್ಕಳೂ ಗಟ್ಟಿಯಾಗಿ ಅಳಲಾರಂಭಿಸಿದ್ದವು. ಅಣ್ಣತಮ್ಮಂದಿರ ಕೈಗಳು ಕೂಡಿಯೇ ಬಿಟ್ಟವು. ತಮ್ಮನ ಕೈಕಾಲನ್ನಾದರೂ ಮುರಿದು ಮೂಲೆಯಲ್ಲಿ ಕೂಡಿಸಿ, ಬುದ್ಧಿಕಲಿಸಬೇಕೆಂದು ಅಣ್ಣ, ಈ ದಿವಸ ಏನಾದರೂ ಆಗಲಿ ರಂಪಮಾಡಿ ತನ್ನ ಸಹವಾಸ ಸಾಕೆಂದು ಎಲ್ಲರೂ ತನ್ನನ್ನು ಬಿಟ್ಟುಬಿಡುವಂತೆ ಆಗಬೇಕೆಂದು ತಮ್ಮ, ಹೊಡೆದಾಡಿದರು. ಮಧ್ಯೆ ಬಂದ ಮುದುಕ, ಎತ್ತಿನಮೇಲೆ ಬೀಳಬೇಕಾಯಿತು. ಅಣ್ಣ ಒಡ್ಡ,

ತಮ್ಮ ಭಂಡ. ಕದನ ಭಯಂಕರವಾಯಿತು. ಹೆಂಗಸರೂ ಚೀರಿಡಲು ಮೊದಲಿಟ್ಟರು. ಬೀದಿಯವರು ಮನೆಯೊಳಕ್ಕೆ ನುಗ್ಗಿದರು. ಅಲ್ಪ ಗಾಯಗಳಲ್ಲೇ ಕಾಳಗ ಮುಕ್ತಾಯವಾದರೂ ಮಾದೇವೂವಿನ ಗಂಟಲು ನಿಲ್ಲಲೇ ಇಲ್ಲ. ದೊಡ್ಡವನಾದದ್ದೇ ನಿನ್ನ ತಪ್ಪೆಂದು ಹೇಳಿ ಅಣ್ಣನ ಬಾಯನ್ನು ಎಲ್ಲರೂ ಮುಚ್ಚಿಸಿಹೋಗಿದ್ದರು. 'ನಾಳೇ ದಿನವೇ ನನಕ್ಕೊಡದು ಕೊಟ್ಟು ಬುಟ್ರೆ ಸರಿ ಇಲ್ದೇ ಇದ್ರೆ ನಾನು ಅಟ್ಟೇಗೆ ಬೆಂಕೀ ಅಚ್ಚದೇ ನಿಜ'ಎಂದು ಮಾದೇವು ಹುಚ್ಚನಂತೆ ಕೂಗಾಡಿದನು. ಪುಟ್ಟತಾಯಿಗೆ ಜ್ವರ ಬಂದು ಬಿಟ್ಟಿತು.

ರಾತ್ರಿಯೆಲ್ಲಾ ಒಬ್ಬೊರಿಗೊಬ್ಬರು ಮಾತಾಡಿಕೊಂಡರು. ಮಾದೇವೂ ಪಾಲಾಗಲೇಬೇಕೆಂದು ಹಟಹಿಡಿದನು. ಆಗಿದ್ದ ಬಿಸಿ ಆರಿಹೋದರೆ ಪುನಃ ಪಾಲಿನ ಮಾತು ತರಲು ಒಂದೆರಡು ವರ್ಷಗಳಾದರೂ ಬೇಕಾಗಬಹುದೆಂದು ಹೆದರಿದನು ಅವನ ಕಿರಿಯಣ್ಣ ಪಾಲಿಗೆ ಒಪ್ಪಲೇ ಇಲ್ಲ. ಪುನಃ ಮಾದೇವು ಬೆಂಕಿ, ಮಚ್ಚು ಮುಂತಾದ ಮಾತುಗಳೊಡನೆ ಹಾರಾಡಿದನು. ಕೈಕಾಲು ಮುರಿದು ಕೂರಿಸುವುದಾಗಿ ಅಣ್ಣಂದಿರು ಹೆದರಿಸಿದರು. ಮಾದೇವೂ ತನ್ನ ಕಿರಿತನವನ್ನೇ ರಕ್ಷಣೆಯಾಗಿಟ್ಟುಕೊಂಡು ಮತ್ತೊಮ್ಮೆ ಅವರ ಮೇಲೆ ಬಿದ್ದನು. ಮತ್ತೆ ಗೋಳಾಟ ಚೀರಾಟಗಳು.

ಮುದುಕ ಮಲ್ಲಪ್ಪ, ಎಲ್ಲರ ಸದ್ದನ್ನೂ ಅಡಗಿಸಿ ನಾಳೇಯೇ ದೊಡ್ಡವರು ನಾಲ್ವರನ್ನು ಕರೆಸಿ ಪಾಲುಮಾಡಿಸಿಬಿಡುವುದಾಗಿ ಘೋಷಿಸಿದನು. ಮನೆಯಲ್ಲಿ ಶ್ಮಶಾನ ಮೌನವಾವರಿಸಿತು. ಅಣ್ಣಂದಿರಿಬ್ಬರೂ ಸೇರಿ ಅವನಿಗೆ ಕೊಡಬೇಕಾದುದನ್ನು ಕೊಟ್ಟುಬಿಡುವುದೆಂದೂ ಉಳಿದವರು ಒಟ್ಟಾಗಿರಬೇಕೆಂದೂ ರಾತ್ರೋರಾತ್ರಿ ತೀರ್ಮಾನಿಸಿದರು.

ಮಾರನೆಯದಿನ ಮಲ್ಲಪ್ಪ, ಗುಜ್ಜಗೆರೆಯಗೌಡರು, ಜವಳೀ ಅಂಗಡಿ ಸಾಹೇಬರು, ತನಗೆ ಹೆಣ್ಣುಕೊಟ್ಟಮಾವ ತೆಂಕಳ್ಳಿಯ ಮರಿದೇವರು, ಶಾಂತರಾಜಯ್ಯ ಮುಂತಾದವರನ್ನು ಮನೆಯಲ್ಲಿ ಸೇರಿಸಿದನು. ಚಿಕ್ಕಲಿಂಗಪ್ಪನವರು ಸರ್ಕಾರದಿಂದ ಈ ಕೆಲಸಕ್ಕಾಗಿ ನೇಮಿಸಲ್ಪಟ್ಟವರಂತೆ ತಾವೇ ಬಂದು ಕುಳಿತರು. ಮಾತಿಗೆ ಮೊದಲಾಯಿತು. ಮಲ್ಲಪ್ಪ ಎಲ್ಲರಿಗೂ ತನ್ನ ಚರ

ಸ್ಥಿರ ಆಸ್ತಿಯ ವಿವರಗಳನ್ನು ಹೇಳಿ ಆಯಿತು. ಮಲ್ಲಪ್ಪನ ದೊಡ್ಡಮಕ್ಕಳಿಬ್ಬರೂ ತಾವು ಆಲೋಚಿಸಿದ್ದುದನ್ನು ಸಭೆಯ ಮುಂದಿಟ್ಟರು ಅದರ ಬಗ್ಗೆ ಹಿರಿಯರು ಮಲ್ಲಪ್ಪನ ಅಭಿಪ್ರಾಯ ಕೇಳಿದರು. ಮಲ್ಲಪ್ಪನಿಗೆ ಅದರಲ್ಲಿ ದೋಷ ಕಂಡು ಬರಲಿಲ್ಲ. ಮೇಲಾಗಿ ಸಂತೋಷವೇ ಆಯಿತು. ಹಿರಿಯರುಗಳಿಗೂ ಸಂತೋಷವಾಯಿತು. ಅವರ ಕೆಲಸವೂ ಬಹುಮಟ್ಟಿಗೆ ಅದರಿಂದ ಸುಲಭವಾದಂತಾಯಿತು. ಇಷ್ಟಾದಮೇಲೆ ಸಭೆ ಪುನಃ ಮೌನ ತಾಳಿತು.

ಅಧ್ಯಕ್ಷರಂತಿದ್ದ ತೆಂಕಳ್ಳಿಯ ಮರಿದೇವರೇ ಬಾಯಿಬಿಡಬೇಕೆಂಬುದು ಯಾರು ಬೇಕಾದರೂ ತೀರ್ಮಾನಿಸಬಹುದಾಗಿತ್ತು. ಅಂತೆಯೇ ಅವರೇ ಮಾತನಾಡಿದರು. ಈಗ ಹಾಲಿ ಇರುವ ಅಡಿಗೆ ಮನೆ ಊಟದ ಮನೆಗಳ ಭಾಗವನ್ನೂ, ನರಿಯಾಲದ ದಾರಿಯ ಎರೆಹೊಲವನ್ನು ಅವನ ಭಾಗದ ಪಾತ್ರೆಪದಾರ್ಥಗಳನ್ನೂ ಆರಂಭದ ಸಾಮಾನುಗಳನ್ನೂ ಹಿತ್ತಿಲಿನಲ್ಲಿ ಅರ್ಧ ಭಾಗವನ್ನೂ ಮಾದೇವೂವಿಗೆ ಕೊಟ್ಟುಬಿಡುವುದೆಂದು ತಮ್ಮ ತೀರ್ಪನ್ನು ಹೇಳಿದರು. ಎಲ್ಲರಿಗೂ ಅದು ಸಮ್ಮತವಾಗಿ ತೋರಿತು. ಚಿಕ್ಕಲಿಂಗಪ್ಪನವರು ಮಾತ್ರ ಏಕೋ ಸ್ವಲ್ಪ ಅಶಾಂತರಾಗಿದ್ದರು. ಆದರೂ ಆ ತೀರ್ಪನ್ನು 'ಸೊಗಸಾಗದೆ!' ಎಂದು ಬಾಯಿಬಿಟ್ಟು ಹೊಗಳಿದವರೂ ಅವರೇ. ಅನಂತರ ಆ ತೀರ್ಪಿನ ಬಗ್ಗೆ ಮಾದೇವೂವಿನ ಅಭಿಪ್ರಾಯವನ್ನು ಕೇಳಿದವರೂ ಅವರೆ.

ಮಾದೇವು ಗಂಭೀರ ಧ್ವನಿಯಲ್ಲಿ ಹೇಳಿದ 'ಸರಿಯೇ, ಆ ಒಲ ತಕಂಡೇನ್ಮಾಡ್ಲಿ ? ಎತ್ತೂ ಏರೂ ಇಲ್ದೇ ನಾನೇನಾ ಆರಂಬಾ ಮಾಡದು !' ಎಂದನು. ಚಿಕ್ಕಲಿಂಗಪ್ಪನವರು ತಲೆದೂಗಿದರು. 'ಔದು. ಆ ಒಲ ಕೊಟ್ರೆ ಎತ್ತೂ ಏರೂ ಆಗ್ಲೇಬೇಕು. ಇನ್ನೊಂದು ಕೆಲಸಾಮಾಡಿ. ಮನೇ ಹಿಂದಲ ಹಿತ್ತಲು ಪೂರ್ತಾ ಮಾದೇವೂಗೆ ಬುಟ್ಟುಬುಟ್ಟು ಆ ದೇವಸ್ಥಾನದ ಒಲ ಅವನಿಗೆ ಕೊಟ್ಟುಬುಡಿ. ಊರಿಗೆ ಅತ್ರವಾಗದೆ, ನೆಲ ರಸವಾಗದೆ, ಅಂತಾ ಯವಸಾಯ ಇಲ್ದೇ ಇದ್ರೂ ಬೆಳೆ ಆಯ್ತದೆ.' ಎಂದು ಚಿಕ್ಕಲಿಂಗಪ್ಪನವರು ತಮ್ಮ ಅಭಿಪ್ರಾಯ ಕೊಟ್ಟರು. ಅದರಲ್ಲಿಯೂ ಅವರಿಗೆ ಆಸಕ್ತಿ ಇರಲಿಲ್ಲ ವೆಂಬುದು ಅವರ ಕಣ್ಣುಗಳಲ್ಲಿ ಸ್ಪಷ್ಟವಾಗಿತ್ತು. ಅದಕ್ಕೂ ಮಾದೇವೂ

ಒಪ್ಪಲಿಲ್ಲ. ಕೊನೆಯ ಏರ್ಪಾಡನ್ನು ಚಿಕ್ಕಲಿಂಗಪ್ಪನವರೇ ತಿಳಿಸಿದರು. 'ಇಲ್ಲಾ ಎತ್ತಿನ ಜೊತೆ ಕೊಟ್ಟು ಹೊಲ ಕೊಡಿ; ಇಲ್ದೆ ಓದ್ರೆ ಪೂರ್ತಿ ಹಿತ್ತಿಲು ಕೊಟ್ಟು ಅಡ್ಡಾಳದ ತೋಟ ಕೊಟ್ಟುಬುಡಿ. ಅವನೂ ಹುಡುಗ ಸಂಸಾರಕ್ಕೆ ವರ್ಸಕ್ಕೊಂದ್ಸತಿ ಬರೋ ಬೆಳೀ ಕಾಯಕ್ಕಾಗಲ್ಲ. ತೋಟ ಆದ್ರೆ ದಿನಾ ಅಷ್ಟೊ ಇಷ್ಟೊ ಬತ್ಲೇ ಇರ್ತದೆ' ಇದು ಮಾದೇವೂಗೂ ಹಿಡಿಸಿತು. ಅವನು ಅದನ್ನೇ ಪಟ್ಟಾಗಿ ಹಿಡಿದು ಕುಳಿತನು. ಮಲ್ಲಪ್ಪನ ದೊಡ್ಡಮಗ ಖಂಡಿತ ಎತ್ತುಗಳನ್ನು ಬಿಟ್ಟುಕೊಡುವುದಿಲ್ಲವೆಂಬುದು ಚಿಕ್ಕಲಿಂಗಪ್ಪನವರಿಗೆ ಚೆನ್ನಾಗಿ ತಿಳಿದಿತ್ತು. ಎಲ್ಲರೂ ಇನ್ನೂ ಏನೇನೋ ಏರ್ಪಾಡುಗಳನ್ನು ಮಾಡಿ ಚರ್ಚಿಸಿದರು. ಕೊನೆಗೂ ಚಿಕ್ಕಲಿಂಗಪ್ಪನವರೇ ಗೆದ್ದರು. ದಿನಗಟ್ಟಲೆ ಬರುವ ವರಮಾನವೇ ಮಾದೇವೂಗೆ ಆಕರ್ಷಕವಾಗಿ ಕಂಡು ಅವನು ನನಗೆ ತೋಟವೇ ಬೇಕೆಂದು ಮೊಂಡುಬಿದ್ದನು. ಅಣ್ಣಂದಿರೂ ಒಪ್ಪಿಕೊಂಡರು. ಮಲ್ಲಪ್ಪನೂ 'ಮಾಡಿಬುಡಿ' ಎಂದನು. ಪಾಲಾಗಿಯೇ ಹೋಯಿತು. ಶಾಂತರಾಜಯ್ಯನವರು ಕೈಗೆ ಲೇಖನಿಯನ್ನೆತ್ತಿಕೊಂಡರು.

ಎತ್ತುಗಳನ್ನು ಕಟ್ಟುತ್ತಿದ್ದ ಸ್ಥಳದಲ್ಲಿ ಮತ್ತೊಂದು ಅಡಿಗೆ ಮನೆ, ಊಟದ ಮನೆಗಳು ಆತುರದಲ್ಲಿ ನಿರ್ಮಾಣವಾದವು. ಶುಕ್ರವಾರದ ಶುಭ ಮುಹೂರ್ತದಲ್ಲಿ ಮನೆ ಎರಡಾಯಿತು. ಪುಟ್ಟತಾಯಿಗೆ ಬಲು ಅಂಜಿಕೆಯಾಗಿತ್ತು. ತನ್ನ ವಾರಗಿತ್ತಿಯರು ಇನ್ನುಮೇಲೆ ತನ್ನನ್ನು ಕೀಳು ದೃಷ್ಟಿಯಿಂದ ನೋಡುವರೆಂದು ತಿಳಿದುಕೊಂಡಿದ್ದದು ಸುಳ್ಳಾಯಿತು. ಅವರು ಎಂದಿನ ಪ್ರೀತಿಯನ್ನೇ ಮುನ್ನಡೆಸಿದರು. ಆದರೆ ಮಾದೇವೂವಿನ ಹಿಂಸೆಯೇ ಹೆಚ್ಚಾಗಿತ್ತು. ಅವರೊಡನೆ ಸರಸ ಕೂಡದು. ಅವರಿಬ್ಬರೂ ಒಗ್ಗಟ್ಟಾಗಿ ತಮ್ಮ ಮನೆಯನ್ನು ಮುರಿಯಲು ಹವಣಿಸುತ್ತಾರೆ ಎಂದು ಪುಟ್ಟತಾಯಿಗೆ ಗಂಡನಿಂದ ಸತತವಾಗಿ ಉಪದೇಶಿಸಲ್ಪಡುತ್ತಿತ್ತು. ಅಣ್ಣನ ಮಕ್ಕಳುಗಳು ಪುಟ್ಟತಾಯಿಯ ಬಳಿಗೆ ಬಂದುದನ್ನು ಮಾದೇವು ಕಂಡರೂ ಪುಟ್ಟತಾಯಿಗೆ ಮುಸುಕಿನೊಳಗಣಗುದ್ದು ಸಿಕ್ಕುತ್ತಲೇ ಇತ್ತು.

ಅಣ್ಣತಮ್ಮಂದಿರಿಗೆ ಪಾಲಾಗಿರುವ ಸಂಸಾರಗಳನ್ನು ಪುಟ್ಟತಾಯಿ ನೋಡುತ್ತಲೇ ಇದ್ದಳು. ಹಳ್ಳಿಗಳಲ್ಲಿ ಅದೊಂದು ಸಾಮಾನ್ಯ ದೃಶ್ಯ.

ಆದರೆ ಆ ಜೀವನ ತನಗೇ ನೇರವಾಗಿ ಸಂಬಂಧಿಸಿದಾಗ ಅದರ ರುಚಿ ಗೊತ್ತಾಗುವುದು. ಪುಟ್ಟತಾಯಿಗೆ ಈ 'ಪಾಲು'ಜೀವನ ದುಸ್ಸಹವಾಗಿ ಕಂಡಿತು. ಅವಳ ಎಳೆಯ ನಿಷ್ಕಪಟವಾದ, ನಿಷ್ಪಕ್ಷಪಾತವಾದ ಮನಸ್ಸು ಇದರ ತಪ್ಪೆಲ್ಲಾ ತನ್ನ ಗಂಡನದೇ ಎಂದು ಸಾರಿಸಾರಿ ಹೇಳುತ್ತಿತ್ತು. ಅದನ್ನೇ ಗಂಡನಿಗೆ ತಿಳಿಸಲು ಪ್ರಯತ್ನ ಪಟ್ಟಾಗ ನೀಚ ಬೈಗುಳಗಳನ್ನು ಕೇಳಬೇಕಾಗುತ್ತಿತ್ತು. ಆಗ ಅವಳಿಗೆ ಅಪರಾಧಿಯೊಬ್ಬನಿಂದ ಬೈಗುಳನ್ನು ಕೇಳಿಕೊಂಡು ಇರಬೇಕಾದಷ್ಟು ತನ್ನ ಜನ್ಮ ಕೀಳಾದುದೇ ಎಂಬ ಕಿಚ್ಚು ಹುಟ್ಟುತ್ತಿತ್ತು. ತಮ್ಮ ವಾರಗಿತ್ತಿಯರ ಸಮಾಧಾನಗಳನ್ನು ಕೇಳಿಕೊಂಡು ಆ ಕಿಚ್ಚನ್ನು ನುಂಗಿಕೊಳ್ಳಬೇಕಾಯಿತು.

ಈ ಗಂಡಹೆಂಡಿರ ಸ್ವತಂತ್ರ ಸಂಸಾರ ಪ್ರಾರಂಭವಾಗಿ ನಾಲ್ಕು ತಿಂಗಳಾದರೂ ಮಾದೇವೂವಿನ ನಡತೆಯಲ್ಲಿ ಬದಲಾವಣೆಯೇ ಕಂಡು ಬರಲಿಲ್ಲ. ಅವನು ಮನೆಗೆ ಬರುತ್ತಿದ್ದ ವೇಳೆಗಳೆಲ್ಲಾ ಹಿಂದಿನಂತೆಯೇ ಇದ್ದವು. ಮೂಗಿನ ತುದಿಯ ಕೋಪವಂತೂ ಮರೆಯಾಗುವುದಕ್ಕೆ ಬದಲು ಸ್ವಲ್ಪಸ್ವಲ್ಪವಾಗಿ ಹೆಚ್ಚುತ್ತಿರುವಂತೆ ಕಂಡುಬಂದಿತು. ಕೊನೆಯವರೆಗೂ ಅವನ ಮನಸ್ಸು ಹೇಗಿರುವುದೆಂಬುದನ್ನು ತಿಳಿದುಕೊಳ್ಳಲಾರನೇನೋ ಎನ್ನಿಸಿತು ಹೆಂಡತಿಗೆ.

ಜೋಳ, ರಾಗಿ, ಖಾರದಪುಡಿ, ಹುಣಸೇಹಣ್ಣು, ಕಾಳುಗಳು ಆ ವರ್ಷಕ್ಕೆ ಅವರಿಬ್ಬರಿಗಾಗುವಷ್ಟು ಪಾಲಿಗೆ ಬಂದಿತ್ತು. ಸೀಮೇಎಣ್ಣೆ, ಉಪ್ಪು ಮುಂತಾದ ಚಿಲ್ಲರೆ ಸಾಮಾನುಗಳನ್ನು ಮಾತ್ರ ಕೊಳ್ಳಬೇಕಾಗಿತ್ತು. ತೋಟದಲ್ಲಿ ಬದನೆ ಚೆನ್ನಾಗಿತ್ತು. ಈರುಳ್ಳಿ ನೆಡಲು ಪಾತೆಗಳನ್ನು ಮಾಡಿ ಗೊಬ್ಬರವನ್ನೂ ಹಾಕಿ ಹದಮಾಡಲಾಗಿತ್ತು. ಮೆಣಸೀಪೈರುಗಳು ಚೋಟುದ್ದಕ್ಕಿದ್ದವು. ಹಿತ್ತಲಿನಲ್ಲಿಯೂ ಮೆಣಸೀ ಹಾಕಿಕೊಳ್ಳುವುದಕ್ಕೆ ಅನುಕೂಲವಾಗುವಂತೆ ದಿನಕ್ಕೆ ಒಂದೊಂದು ಮಾರು ದೂರ ನೆಲವನ್ನು ಪುಟ್ಟತಾಯಿಯೇ 'ಕಳಕೊಟ್ಟೆ'ನಲ್ಲಿ ಕೆತ್ತುತ್ತಿದ್ದಳು. ಮಲ್ಲಿಗೆಯ ಬಳ್ಳಿ ಹಸುವಾರದ ಮರಕ್ಕೆ ಹತ್ತಿತ್ತು.

ಎಂದಮೇಲೆ ಗೃಹಕೃತ್ಯದ ವಿಷಯದಲ್ಲಿ ಅವರಿಗೆ ಯಾವ ರೀತಿಯ ತೊಂದರೆಯೂ ಇರಲಿಲ್ಲವೆಂದಹಾಗಾಯಿತು. ತಾಯಕ್ಕನೂ ಒಂದುಬಾರಿ ಬಂದು ಮಗಳ ಬಲವಂತಕ್ಕೆ ಒಂದು ರಾತ್ರಿ ತಂಗಿದ್ದು ಅವರ ಗೃಹಕೃತ್ಯ ವನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಳು. ಎಲ್ಲವೂ ಅಚ್ಚುಕಟ್ಟಾಗಿಯೇ ಇತ್ತು. ಬೇಡವೆಂದು ಕೈಹಿಡಿದು ತಡೆದರೂ ಬಿಡದೇ ಪುಟ್ಟತಾಯಿ 'ಒಬ್ಬಿಟ್ಟ'ನ ಅಡಿಗೆ ಮಾಡಿ ತಾಯಿಗೆ ಬಡಿಸಿದ್ದಳು. ಪುಟ್ಟತಾಯಿಯ ಮನೆಯಲ್ಲಿ ಏತಕ್ಕೆ ಅನಾನುಕೂಲವೆಂಬುದನ್ನು ತಾಯಕ್ಕ ಬಹಳ ಹುಡು ಕಾಡಿದುದರ ಮೇಲೆ ಅವರಿಗೆ ಸ್ನಾನದ ಹಂಡೆಯೊಂದಿಲ್ಲವೆಂಬುದು ಪತ್ತೆ ಯಾಯಿತು. ನಲವತ್ತುರೂಪಾಯೊಳಗೆ ಆರೇಳು 'ಚಲೂಗೆ' ಹಿಡಿಸುವ ಒಂದು 'ಕಡಾಯಿ'ಯನ್ನು ತೆಗೆದು ಮಗಳಿಗೆ ಕೊಡಬೇಕೆಂದು ತಾಯಕ್ಕ ಮನಸ್ಸುಮಾಡಿಕೊಂಡಳು. ಆದರೆ ದೊಡ್ಡಸೀರೆಯ ಸಂಗತಿಯಂತೆ ಆಡಿ ಮಗಳಿಗೆ ಆಸೆ ಹುಟ್ಟಿಸಲಿಲ್ಲ. ಮಗಳ ಮನೆವಾರ್ತೆಗಳಿಗೆ ತನ್ನ ಸಂತೋಷ ವನ್ನು ಸೂಚಿಸಿ ಮತ್ತೆ ಬರುವೆನೆಂದು ಯಾವುದೋ ಒಂದು ವಾಯಿದೆ ಹೇಳಿ ಹೊರಟುಹೋಗಿದ್ದಳು.

ಮನೆಯಲ್ಲಿ ಹೀಗೆ ನೆಂಟರುಗಳು ಬಂದು ಖರ್ಚಾದರೆ ಮಾದೇವೂ ಮನಸ್ಸಿಗೇ ಹಾಕಿಕೊಳ್ಳುತ್ತಿರಲಿಲ್ಲ. ಮುಗಿದುಹೋದ ಸಾಮಾನುಗಳನ್ನು ಕೇಳಿ ತಂದುಕೊಡುತ್ತಿದ್ದ. ನಲವತ್ತೈದು ರೂಪಾಯಿಗಳಿಗೆ ಸಿಕ್ಕಿತೆಂದು ಒಂದು ಹಸುವನ್ನು ತಂದು ಮನೆಯ ಬಾಗಿಲಲ್ಲಿ ಕಟ್ಟಿಹಾಕಿದ. ಬಂದ ಸ್ನೇಹಿತರುಗಳಿಗೆ ಟೀ ಕಾಯಿಸಿ ಕೊಡುವಂತೆ ಒತ್ತಾಯಮಾಡಿ ತಾನೂ ಅವರೊಡನೆ ಕುಡಿದು, ಹೆಂಡತಿಗೂ ಬಲವಂತಮಾಡಿ ಕುಡಿಸಿ ಹೋಗು ತ್ತಿದ್ದ. ಅವಳ ಸೀರೆಯಲ್ಲಿನ ದೊಡ್ಡ ಹರುಕೊಂದನ್ನು ನೋಡಿ ಸಂತೆ ಯಿಂದ ಎಂಟೆಂಟು ರೂಪಾಯಿಗಳನ್ನು ಕೊಟ್ಟು ಎರಡು ಸೀರೆಗಳನ್ನು ತಂದುಕೊಟ್ಟಿದ್ದ. ತಮಾಷೆಯಾಗಿದ್ದಾಗ ನಿನಗೆ ಕಾಸಿನಸರ ಮಾಡಿಸ ಬೇಕೆಂದಿದ್ದೇನೆ ಎನ್ನುತ್ತಿದ್ದ.

ಎಲ್ಲ ಸರಿಯೆ, ಪುಟ್ಟತಾಯಿ ಸ್ವತಂತ್ರವಾಗಿ ತನ್ನ ನಡವಳಿಕೆಯಬಗ್ಗೆ ಒಂದು ಮಾತನಾಡಿದರೆ ಅವಳಮೇಲೆ ಘಾಲಾಕ್ಷವನ್ನು ಬಿಡುತ್ತಿದ್ದ. ದುಡ್ಡು

ಎಲ್ಲಿಂದ ಬಂದಿತೆಂದು ಕೇಳಿದರೆ ಒರಟುಮಾತುಗಳನ್ನಾಡುತ್ತಿದ್ದ. ಆ ಅಕ್ಕನ ಸುದ್ದಿ ಈ ಅಕ್ಕನ ಸುದ್ದಿಯೆತ್ತಿದರೆ ಉರಿಗಾರುತ್ತಿದ್ದ. ತೋಟದ ವ್ಯವಸಾಯದ ಮಾತಾಡಿದರೆ ಹಲ್ಲುಮುಡಿ ಕಚ್ಚಿ ಹೊಡೆಯುವುದಕ್ಕೇ ಬರುತ್ತಿದ್ದ. ಈ ವಿಷಯಗಳಿಗೆ ಸಂಬಂಧಿಸಿದಂತೆ ಮಾತನಾಡದೇಇದ್ದು ಬಿಡಬೇಕೆಂದು ಪುಟ್ಟತಾಯಿ ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗುತ್ತಿರಲಿಲ್ಲ.

ಅವನು ಮನೆಗೆ ಬರುವುದು ವಿಪರೀತ ಹೊತ್ತುಮೀರಿ ಹೋಗಿದ್ದರೆ ಎಂಟು ದಿನ ಸುಮ್ಮನಿದ್ದರೂ ಒಂಭತ್ತನೆಯ ದಿನ ಮಾತಾಡಲೇಬೇಕಾಗುತ್ತಿತ್ತು. ಎರಡು ಸಂಸಾರದವರಿಗೂ ಒಂದೇ ತಲೆಬಾಗಿಲು. ಇವನು ಬರುವುದು ಮಧ್ಯರಾತ್ರಿ ಎಷ್ಟುಹೊತ್ತಿನಲ್ಲೋ. ಆ ಬಾಗಿಲು ತೆರೆದೇ ಇರಬೇಕು. ಆ ಮನೆಯವರಿಗೆ ಬಾಗಿಲು ತೆರದಿರುವಂತೆಯೇ ನಿದ್ದೆ ಹೋಗುವ ಅಭ್ಯಾಸವಿಲ್ಲದಿದ್ದುದರಿಂದ ನಿರಾಳವಿರುತ್ತಿರಲಿಲ್ಲ. ಬಾಗಿಲು ಹಚ್ಚಿಕೊಂಡು ಎಲ್ಲರೂ ಮಲಗಿಬಿಟ್ಟಿದ್ದರೆ ಪುಟ್ಟತಾಯಿಗೆ ಅವನು ಬಂದು ಕೂಗಿದಾಗ ಬೇಗ ಎಚ್ಚರವಾಗುತ್ತಿರಲಿಲ್ಲ. ಹೀಗಾದಾಗ ಪುಟ್ಟತಾಯಿಯ ಮನೆಯಲ್ಲಿ ಒಂದು ಸಣ್ಣ ಕದನವೇರ್ಪಡುತ್ತಿತ್ತು. ಬಾಗಿಲಮೇಲೆ ಮಾದೇವೂವಿನ ಕೋಪವಾದರೆ ಪುಟ್ಟತಾಯಿಗೆ ಅವನ ನಿಶಾಚರವೃತ್ತಿಯಮೇಲೆ ಕೋಪ ಬರುತ್ತಿತ್ತು. ಮಾತು ಎಲ್ಲೆ ಮೀರಿ ಹೊರಟುಹೋಗುತ್ತಿದ್ದವು.

ಪುಟ್ಟತಾಯಿ ಅಭಿವೃದ್ಧಿಗೊಳಿಸಿದ ಮಲ್ಲಿಗೆಯ ಗಿಡ ಮೊದಲನೇ ಬೀಡಿನಲ್ಲಿ ಒಂದೇಬಾರಿಗೆ ಸ್ವಲ್ಪಕಡಿಮೆ ಎರಡುಸೇರು ಮೊಗ್ಗನ್ನುಕೊಟ್ಟಿತ್ತು. ಸೇರಿಗೆ ಎಂಟಾಣೆಯಂತೆ ಲಕ್ಕಿ ಒಂದು ಸೇರನ್ನು ಕೊಂಡುಕೊಂಡಿದ್ದಳು. ಇನ್ನುಳಿದ ಅಷ್ಟು ಹೂವನ್ನು ಹೇಗೆ "ವಿಲೇವಾರಿ" ಮಾಡುವುದೆನ್ನುವುದೇ ಪುಟ್ಟತಾಯಿಗೆ ತಿಳಿಯದಾಯಿತು. ತಾನೊಂದಷ್ಟನ್ನು ಹೊಲಿದುಮುಡಿದುಕೊಂಡಳು. ಅನ್ಯಾಯವಾಗಿ ಒಣಗಿಹೋಗುತ್ತಿದ್ದ ಮಿಕ್ಕ ಹೂವನ್ನು ದೊಡ್ಡಕ್ಕನ ಮಗಳು ಚನ್ನ ಕೇಳಿದಮೇಲೆ ಆ ಮನೆಗೆ ಕೊಟ್ಟುಬಿಟ್ಟಳು. ವಾರಗಿತ್ತಿಯರಿಬ್ಬರೂ ಮುಡಿಯದೆ ಅದಷ್ಟು ಹೂವನ್ನು ಚೆನ್ನಳಿಗೇ ಮುಡಿಸಿಬಿಟ್ಟಿದ್ದರು.

ಚೆನ್ನಳ ತಲೆತುಂಬ ಇದ್ದ ತಮ್ಮ ಮನೆಯ ಹೂವನ್ನು ಕಂಡ ಮಾದೇವು ಬೆಂಕಿಯಾದನು. ಚೆನ್ನಳು ಮುಡಿದಿರುವಳೆಂದಲ್ಲ—ಅದನ್ನು ಯಾವ ಧೈರ್ಯದಮೇಲೆ ಹೆಂಡತಿ ಕೊಟ್ಟಳೆಂಬುದಕ್ಕಾಗಿ. ಮಾತು ಬೆಳೆದು ಪುಟ್ಟತಾಯಿಗೆ ಕಪಾಲದ ಮೇಲೊಂದು ಏಟೇ ಬಿದ್ದಿತು. "ನಾವಾಡದೇ ಹಂಗೆ-ನೀವು ಒಡದುಸಾಯ್ಸಿ ಗಂಟಾ ನಾನು ನನ್ನಿಷ್ಟ ಬಂದಂಗೇ ನಡೆ ಯದು" ಎಂದ ಪುಟ್ಟತಾಯಿನ ರೋಸಿಹೋಗಿ ಆಡಿದಮಾತೇ ಆ ಏಟಿಗೆ ಕಾರಣ. ಏಟುಬಿದ್ದ ಮೇಲೂ,

"ನೀವು ಒಡದಷ್ಟೂ ನಾನು ಭಂಡಿ. ಹೊಡೇರಿ" ಎಂದಳು. ಅವನು ಹೊಡೆದನು. ಹೊಡೆಯುತ್ತಲೇ ಹೇಳಿದನು. 'ಇನ್ನೊಂದ್ಸಿನ ನೀನೇ ಆ ಹೂ ಮುಟ್ಟದೇ ಇದ್ದಂಗೆ ಮಾಡಬಲ್ಲೆ'

"ಮಾಡಿ, ಕೈಕತ್ತರಿಸಿ ಹಾಕಿ. ನನ್ನ ಬುದ್ಧಿ ನಾನು ಬುಡಕ್ಕಿಲ್ಲ' ಎಂದಳವಳು.

"ಆ ಹಿತ್ತಲ್ನೇ ಮಾರಾಕ್ಬುಡ್ತೀನಿ"

"ಹೆಂಡ್ತೀನೂ ಮಾರ್‍ಕಳ್ಳಿ ನನ್ಮುಂದೆ ಯಾಕೆ ಹೇಳೀರಿ?"

"ನೀನೇನದಕ್ಕೂ ಸರಿಯೆ. ಹುಟ್ಟೀ ಅಂತಾದಲ್ವಾ?"

ಹೀಗೆ ಬೇಕಾದಷ್ಟಾಗಿ ಹೋಗಿಹೋಯಿತು. 'ಹುಟ್ಟೀ ಅಂತಾ ದಲ್ವಾ' ಎಂಬ ಮಾತು ಪುಟ್ಟತಾಯಿಯ ಎದೆಯಲ್ಲಿ ನೆಟ್ಟಿಕೊಂಡಿತು. ಜಗಳ ತೀರಿ ಪುನಃ ಎಷ್ಟೋ ದಿನಗಳು ಗಂಡಹೆಂಡಿರು ಚಕ್ಕಂದದಲ್ಲಿ ಕಾಲ ಕಳೆದುದುಂಟು. 'ಹುಟ್ಟೀ ಅಂತಾದಲ್ವಾ' ಮಾತ್ರ ಪುಟ್ಟತಾಯಿಯ ಎದೆಯನ್ನು ಬಿಟ್ಟು ಅಲುಗಾಡಲಿಲ್ಲ.

"ಆ ಹಿತ್ತಲ್ನೇ ಮಾರಾಕ್ಬುಡ್ತೀನಿ" ಎಂದಾಗ ಮಾದೇವು ಅದನ್ನ ಉದ್ದೇಶಪೂರ್ವಕ ಆಡಿದ್ದನೋ ಅಥವಾ ಇಲ್ಲವೋ. ಗಂಡಹೆಂಡಿರು ಸರಸ ವಾಗಿದ್ದಾಗ ಒಂದುದಿನ ಮಾದೇವು ಪುಟ್ಟತಾಯಿಯನ್ನು ಮುದ್ದಿಸಿ ಕೇಳಿದ.

"ನಿನಗೆ ಚಿನ್ನ ಬಣ್ಣ ಕಂಡರೆ ಆಸೆಯೇ ಇಲ್ಲವಲ್ಲಾ ಯಾಕಾ?"

"ಅದ್ಯಾಕಿಲ್ಲ ಎಲ್ಲಾ ಅದೆ. ಯಾರನ್ನ ಕೇಳ್ಲೀ ಅಂತ ಸುಮ್ನಿದೀನಿ ಅಷ್ಟೆ."

" ಯಾರನ್ನ ಅಂದ್ರೇನಮ್ಮಿ ಹೊಸಮಾತು "

" ಅಲ್ವಾ. ನಿಮ್ಮನ್ನ ಕೇಳಕ್ಕೆ ನನ್ನ ಅವ್ವ-ಅಪ್ಪ ನಿಮಗೇನಾದರೂ ಮಾಡ್ಸಿದ್ದರೆ ತಾನೆ! ಇನ್ನು ನಮ್ಮವ್ವ ಮಾತಾಯೀನ ಕೇಳಬೇಕಾದ್ದೇ ಇಲ್ಲ ಅವಳು ದೊಡ್ಡಸೀರೇ ತನ್ಕೊಡ್ತೀನಿ ಅಂತ ಹೇಳಿದಮೇಲೆ ಮೂರುಸತಿ ಗೌರೀಹಬ್ಬ ಬಂದೋಯ್ತು "

" ನಾನೊಂದಿನ ನಿನಗೆ ಕಾಸಿನಸರ ಮಾಡಿಸ್ಕೊಡ್ತೀನಿ ಅಂತೇಳಿದ್ದೆ ನೆಪ್ಪದಯಾ ? "

" ಅದೆ. ಹಿಂಗೆ ಹತ್ರ ಕೂತ್ಕಂಡು ಮಾತಾಡೋವಾಗ ಚಿನ್ನದ ಡಾಬಿನ ಮಾತೂ ಆಡದುಂಟು ನೀವು "

" ಈ ಹಂಗ್ಸೋ ಬುದ್ದಿ ಬುಡು ಮತ್ತೆ. ಪುಟ್ಟ, ನಿಜವಾಗ್ಲೂ ನಿನಗೆ ಕಾಸಿನಸರ ಮಾಡಿಸ್ತೀನಿ "

" ಹಂಗೊಂದ್ಸತಿ ಹೇಳದೇನೂ? ಮಾಡಿಸಿ ತಂದು ಕತ್ತಿಗೆ ಹಾಕಿದರಾಯಿತು."

" ಅದಕ್ಕೇ ದುಡ್ಡಿಗೆ ಒಂದಾಲೋಚನೆ ಮಾಡಿದೀನಿ"

"ಏನು?"

" ಪೈಪೋಟೀಮೇಲೆ ಈಗ ನಮ್ಮ ಹಿತ್ತಲಿಗೆ ಒಳ್ಳೇ ಘನವಾದ ಬೆಲೆ ಬಂದದೆ."

" ಹಿತ್ತಲಿಗೇ, ಅಯ್ಯೋ ಸಿವನೆ—ಮಾತಾಡ್ತಾ ಮಾತಾಡ್ತಾ ಅದನ್ನ ಮಾರಕ್ಕೇ ಮನಸು ಮಾಡ್ಬುಟ್ರಾ "

" ಹೂ—ನಮ್ಮ ಚಿಕ್ಕಲಿಂಗಪ್ಪಮಾವ ಬೇಕುಬೇಕೂಂತ ಅದರಬೆಲೆ ಹೆಚ್ಚಿಸ್ಬುಟ್ಟವರೆ. ಹಿತ್ಲು ಶಂಭುಗೌಡರ ಹಟ್ಟಿ ಮೊಗ್ಗಲ್ಲೇ ಇರದ್ರಿಂದ ಶಂಭುಗೌಡರೇ ತಕಳ್ಳಬೇಕಾಗಿ ಬಂದದೆ. ಎಷ್ಟು ಗೊತ್ತಾ ? ಯೋಳ್ನೂರು !!!"

" ದುಡ್ಡು ತಕಂಡು ಏನ್ಮಾಡೋದು ? ಜನ ಆಡ್ಕಳಕಿಲ್ವಾ. ಬೇಡಿ ಒಸಿ ಸರಿಯಾಗಿ ಯೋಚನೆಮಾಡಿ."

" ನಮಗೆ ಬೇರೇ ಒಂದು ಒಲಾನೂ ವಾತಾಡ್ತಾ ಅವರೆ ಚಿಕ್ಕಲಿಂಗಪ್ಪಮಾವ. ಅದನ್ನ ತಕಂಡಮೇಲೂ ನಿನ್ನ ಕಾಸಿನ ಸರಕ್ಕೆ ಬೇಕಾದಷ್ಟು ಳೀತದೆ."

" ನನಗೆ ಕಾಸಿನಸರ ಬ್ಯಾಡ"

" ನನಗೆ ಆ ಹೊಲ ಬೇಕು. ನಾನು ಗೌಡರಿಗೆ ಮಾತುಕೊಟ್ಟು ಬುಟ್ಟೇದೀನಿ''

" ನೀವಾ ಹಿತ್ತಲ್ನ ಕೊಟ್ಟುಬುಟ್ರೆ ನಾನೀಮನೇಲೇ ಇರಕ್ಕಿಲ್ಲ"

" ನೀನೆಲ್ಲಿಗೋದ್ರೂ ಸರಿಯೇ ಮಾತಾಗೋಗದೆ"

ಹಿತ್ತಲಿನ ಮಾರಾಟವಾಗಿಯೇ ಹೋಯಿತು. ಆದರೆ 'ಯೋಳ್ನೂರ' ಕ್ಕಲ್ಲ. ನಾಲ್ಕುನೂರು ರೂಪಾಯಿಗಳಿಗೆ. ಅದರಲ್ಲಿ ಸ್ವಲ್ಪ ಚಿಕ್ಕಲಿಂಗಪ್ಪ ನವರಿಗೆ ಕೊಟ್ಟಾಗಿತ್ತು. ಇನ್ನೊಂದಷ್ಟನ್ನು ಕೊಟ್ಟದ್ದವರಿಗೆ ಹಂಚಲಾ ಯಿತು. ಉಳಿದ ನೂರೈವತ್ತೂ ಚಿಲ್ಲರೆ ರೂಪಾಯಿಗಳಲ್ಲಿ ಇಪ್ಪತ್ತೈದು ಲಕ್ಷ್ಮೀಕಾಸುಗಳನ್ನು ಹುರಿಬಿಗಿಸಿ ತಂದು ಮಾದೇವೂ ಹೆಂಡತಿಯ ಮುಂದಿ ಟ್ಟನು. ಪುಟ್ಟತಾಯಿ ಅದನ್ನು ಕಡೆಗಣ್ಣಿನಲ್ಲೂ ನೋಡಲಿಲ್ಲ. ಗಂಡನ ಅನುನಯ, ಸಿಹಿಮಾತುಗಳಿಗೆ ಅವಳು ಜಗ್ಗಲಿಲ್ಲ. ಬಲವಂತ ಮಾಡಿ ಅದನ್ನವಳ ಕತ್ತಿಗೆ ಸೇರಿಸಿದ್ದರೆ ಅವಳು ಖಂಡಿತ ಅದನ್ನು ಕಿತ್ತು ಒಲೆಗೆ ಹಾಕುತ್ತಿದ್ದಳು. ಹೆಂಗಸಿಗೂ ಚಿನ್ನವನ್ನು ಕಂಡರೆ ಕೆಲವು ವೇಳೆ ಅಸಹ್ಯ ವಾಗುವುದೆಂಬುದು ಮಾದೇವೂಗೆ ಆಗಲೇ ತಿಳಿದುದು. ಅವನ ಮನಸ್ಸಿ ನಲ್ಲಿಯೂ ಹೆಂಡತಿಯ ರೊಚ್ಚಿನ ಬಗ್ಗೆ ಹೆದರಿಕೆಯಿದ್ದರೂ ಅದನ್ನು ತೋರ ಗೊಡಬಾರದೆಂದು ಮಾದೇವೂ ಆ ಕಾಸಿನ ಸರವನ್ನು ತೆಗೆದುಕೊಂಡು ಮನೆ ಯಿಂದಾಚೆಗೆ ಹೊರಟುಹೋದನು. ಆ ಸರ ಪುನಃ ಅವಳ ಕಣ್ಣಿಗೆ ಬೀಳಲಿಲ್ಲ.

ಪುಟ್ಟತಾಯಿಯು ಹಸುವನ್ನು ರಾತ್ರಿಯಹೊತ್ತು ಹಜಾರದಲ್ಲಿ ಕಟ್ಟಿ ಕೊಳ್ಳಬೇಕಾಯಿತು. ಸೌದೇ ಮುಳ್ಳು ಹುಲ್ಲುಗಳನ್ನು ಅಲ್ಲೇ ಗುಡ್ಡೆ ಹಾಕಿಕೊಳ್ಳಬೇಕಾಯಿತು. ನಯಗಾರೆ ಮಾಡಿದ್ದ ಹಜಾರದ ಸುತ್ತಲೂ ಇದ್ದ ಮೋಟುಗೋಡೆಯನ್ನು ಪೂರ್ತಿ ಎತ್ತರಿಸಿ ಅಲ್ಲಿ ರೇಷ್ಮೇಹುಳುಗಳನ್ನು ಸಾಕಬೇಕೆಂದಿದ್ದ ಪುಟ್ಟತಾಯಿಯ ಆಸೆ ಕೈಜಾರಿದ ಕನ್ನಡಿಯಾಯಿತು. ಗೌಡರು ಆ ಹಿತ್ತಲನ್ನು ತೆಗೆದುಕೊಂಡಿದ್ದದ್ದು ದನದಕೊಟ್ಟಿಗೆ ಮಾಡುವ ಸಲುವಾಗಿಯಾದುದರಿಂದ ಅಲ್ಲಿದ್ದ ಎಲ್ಲ ಗಿಡಗಳೂ ನಾಶವಾದವು. ಗೌಡ

ರಿಗೂ ಇಷ್ಟವಿಲ್ಲದಿದ್ದರೂ ಪುಟ್ಟತಾಯಿಯ ಮಲ್ಲಿಗೆಯಬಳ್ಳಿ ಕಣ್ಮರೆಯಾಗಲೇಬೇಕಾಯಿತು. ಅದರೆ ಅದರ ಕೆಲವು ಕಡ್ಡಿಗಳು ಹೋಗಿ ಗೌಡರ ಮನೆಯ ಹಿಂದೆ ಚಿಗುರಲು ಬಾಗಿ ನಿಂತವು.

ಒಬ್ಬರಿಗೂ ತಿಳಿಯದಂತೆ ಗುಟ್ಟಾಗಿ ಹಿತ್ತಿಲನ್ನುಮಾರಿ ಬಂದ ಕಿರಿಯ ಮಗನ ಈ ಮನೆ ಹಾಳುಬುದ್ಧಿಗಾಗಿ ಮುದುಕ ಮಲ್ಲಪ್ಪ ಹಾಡಿ, ಹಲುಬಿ, ಶಾಪಹಾಕಿ ಗೋಳಾಡಿದನು. ಮಾದೇವೂ ಅಪ್ಪನನ್ನು ಗುದ್ದಲು ಹೋಗಿದ್ದನು.

ಈ ಪ್ರಸಂಗವಾದಮೇಲೆ ಗಂಡಹೆಂಡಿರ ಮನಸ್ಸು ಕೆಟ್ಟೇಹೋಯಿತು. ಇದು ಬಾಳುವ ಮುಖವಲ್ಲವೆಂದು ತೀರ್ಮಾನಿಸಿದ್ದ ಪುಟ್ಟತಾಯಿಗೆ ಗಂಡನ ಮುಖ ಕಂಡರೆ ಹೇಸಿಗೆಯಾಗುತ್ತಿತ್ತು. ಹೆಣ್ಣಿಗೆ ಏಕೆ ಇಷ್ಟು ಯಜಮಾನತನವೆಂಬ ಧೋರಣೆಯಿಂದ ಮಾದೇವೂಗೆ ಹೆಂಡತಿಯನ್ನು ಕಂಡರೆ ಸಿಗಿದು ಹಾಕಿಬಿಡೋಣವೆನ್ನಿಸುತ್ತಿತ್ತು.

ಹೀಗೆ ಒಬ್ಬರಿಗೊಬ್ಬರು ಮಾತುಬಿಟ್ಟು ಕುಳಿತರೆ ಎಲ್ಲಕ್ಕೂ ಮೂಲ ಕಾರಣರಾದ ಚಿಕ್ಕಲಿಂಗಪ್ಪನವರು ಇನ್ನಷ್ಟು ಅನರ್ಥಕ್ಕೆ ಕಾರಣರಾದಾರೆಂದು ಪುಟ್ಟತಾಯಿಗೆ ಅವಳ ದೊಡ್ಡಕ್ಕ ತಡೆಯಲಾರದೆ ಒಂದುದಿನ ಎಚ್ಚರಿಸಿದಳು ಪುನಃ ಗಂಡನೊಡನೆ ಸ್ನೇಹಬೆಳೆಸಿ ಅವನಿಗೆ ತಿಳುವಳಿಕೆಯನ್ನು ಪ್ರೀತಿಯಲ್ಲಿ ಬೆರಸಿಕೊಡಬೇಕೆಂದು ಸೂಚಿಸಿದಳು. ಪುಟ್ಟತಾಯಿಗೆ ದೊಡ್ಡಕ್ಕನ ಮಾತುಗಳಲ್ಲಿ ಪ್ರಬಲವಾದ ನಂಬಿಕೆ ಮತ್ತು ಗೌರವ.

ಮಾದೇವೂಗೆ ಚೇಳುಕಡಿದಿದ್ದಾಗ ಒದಗಿದ ಅವಕಾಶವನ್ನು ಉಪಯೋಗಿಸಿಕೊಂಡು ಪುಟ್ಟತಾಯಿ ಪುನಃ ಗಂಡನ ಆಂತರ್ಯವನ್ನು ಹೊಕ್ಕಳು. ಬಹಳ ಎಚ್ಚರಿಕೆಯಿಂದ ಅವನ ಅಂತರಂಗವನ್ನು ಕೆದಕುತ್ತಿದ್ದಳು. ಮೆಲ್ಲಗೆ ಆಗಾಗ ಸೂಕ್ಷ್ಮವಾಗಿ ತಿಳಿಸುತ್ತಿದ್ದಳು.—

"ಪಟೇಲನ ಸವಾಸ ಚೆಂದಾಗಿಲ್ಲ"

"ಏ—ನನ್ನೆದುರಿಗೇ ಪಟೇಲ ಅನ್ಬೇಲ ಪಟೇಲಪ್ಪಜೀ ಅನ್ನು"

"ನಾ ಅನ್ನಕ್ಕಿಲ್ಲ. ಆ ಮನೆಮುರುಕ, ನಮ್ಮಪ್ಪ ಯಾಕಾದಾನು ?"

"ಅಡನ್ನ ನಿಮ್ಮವ್ವೇನ ಕೇಳು"

" ಹುಟ್ಟೀ ಅಂತಾದಲ್ವಾ " "ಅದನ್ನ ನಿಮ್ಮವ್ವೇನ ಕೇಳು'' ಎರಡು ಮಾತುಗಳೂ ಗರಗಸದಂತೆ ಹೋಗುತ್ತಾ ಬರುತ್ತಾ ಪುಟ್ಟತಾಯಿಯನ್ನು ಕೊರೆಯಲಾರಂಭಿಸಿದವು.



ಬುದ್ಧಿಮೇಷ್ಟರಿಗೆ ಎಲ್ಲಿಗೋ ವರ್ಗವಾಗಿಹೋಗಿತ್ತು. ಚಿದಂಬರ, ಮೈಸೂರಿನಲ್ಲಿ ಹನ್ನೆರಡು ರೂಪಾಯಿನ ಪರೀಕ್ಷೆಗೆ ಆ ಬಾರಿ ಕಟ್ಟಿದ್ದ. ಹುಚ್ಚ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿಯೇಬಿಟ್ಟಿದ್ದ. ಅವನಿಗೆ ಕೇವಲ ಹದಿನಾಲ್ಕು ವರ್ಷಗಳಾಗಿದ್ದರೂ ಹುಚ್ಚನ ಅಪ್ಪ ಅವನ ವಿದ್ಯಾಭ್ಯಾಸವನ್ನು ಸಾಕುಮಾಡಿ,ಅವನಿಗೆ ಮೇಷ್ಟುಕೆಲಸವೊಂದನ್ನುಸಂಪಾದಿಸುವುದರಲ್ಲಿ ತೊಡಗಿದ್ದನು. ಇನ್ನು ಯಾರಿಗೂ ಮಲ್ಲೇಶನ ವಿಷಯದಲ್ಲಿ ಆಸಕ್ತಿ ಇರಲಿಲ್ಲ. ತಮ್ಮ ತಾಯಿಯ ಬಳಿಗೆ ಹೋಗಿ ಚಾಡಿ ಹೇಳುವವರು ಯಾರೂ ಇಲ್ಲವೆಂಬ ಧೈರ್ಯ ಅವನಲ್ಲಿ ಗಟ್ಟಿಯಾದ ಮೇಲೆ ಮುಂದಿನ ವರ್ಷ ತನಗೂ ಪಾಸಾಯಿತೆಂದು ತಾಯಕ್ಕನಿಗೆ ಹೇಳಿಯೇಬಿಟ್ಟನು. ಯಾರಿಗೆ ಗೊತ್ತು ? ಅದು ಸುಳ್ಳೆಂಬ ಸೂಕ್ಷ್ಮ ಸ್ವಲ್ಪವಾದರೂ ತಾಯಕ್ಕನಿಗೆ ತಿಳಿದಿದ್ದರೆ ಅವಳು ಸ್ಕೂಲಿಗೇಹೋಗಿ ವಿಚಾರಿಸುತ್ತಿದ್ದಳೇನೋ ? ಹೇಳುವವರಿಲ್ಲ. ಅವಳಿಗೆ ಅದರಬಗ್ಗೆ ತಿಳುವಳಿಕೆಯಿಲ್ಲ. ಆ ಸಮಯದಲ್ಲಿ ಹುಚ್ಚನೂ ಊರಿನಲ್ಲಿರಲಿಲ್ಲ.

ತಾಯಕ್ಕ ಮಲ್ಲೇಶನನ್ನು ಮುಂದಕ್ಕೆ ಓದಿಸುವುದೋ, ಅಲ್ಲಿಗೇ ಸಾಕು ಮಾಡುವುದೋ ಎಂದು ಒಂದು ತಿಂಗಳು ಸರಿಯಾಗಿ ಆಲೋಚಿಸಿದಳು. ಚಿದಂಬರನಮೇಲೆ ಅವಳಿಗೇನೂ ಪೈಪೋಟಿ ಇಲ್ಲದಿದ್ದರೂ ವಿದ್ಯಾಭ್ಯಾಸವನ್ನು ನಿಲ್ಲಿಸಿಬಿಟ್ಟಿದ್ದ ಹುಚ್ಚನಿಗಿಂತ ತನ್ನ ಮಗ ಮುಂದುವರಿದರೆ ಊರಿಗೇ ದೊಡ್ಡ ವಿದ್ಯಾವಂತನಾಗುವನೆಂದುಕೊಂಡಳು. ಚಿದಂಬರನ ತಂದೆ ಕಿರೀಕಾಟಿಯವರೇ ಏನಲ್ಲ. ಅವರು ಸರ್ಕಾರೀ ಸಂಬಳದ ಉಪಾಧ್ಯಾಯರು. ಹುಚ್ಚನನ್ನು ಬಿಟ್ಟರೆ ಮಲ್ಲೇಶನೊಬ್ಬನೇ ಕಿರೀಕಾಟಿಯಲ್ಲೆಲ್ಲಾ ಐದು ರೂಪಾಯಿನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದವನು.

ತಾಯಕ್ಕನ ಮಂತ್ರಾಲೋಚನೆಗೂ ಯಾರೂ ಇರಲಿಲ್ಲ. ಬಸವಣ್ಣನ ಮೇಲೆ ಪುಟ್ಟತಾಯಿಯ ಮದುವೆಯ ಲಾಗಾಯ್ತು ದ್ವೇಷವೇ ಬೆಳೆದು ಬಂದಿತ್ತು. ಕಾಳಕ್ಕನಿಗಿಂತ ಈ ವಿಷಯದಲ್ಲಿ ತಾನೇ ಎಷ್ಟೋ ತಿಳಿದವಳೆಂಬ

ಭಾವನೆ ತಾಯಕ್ಕನದು. ಕಿರೀಕಾಟಿಯ ಮೇಷ್ಟ್ರನ್ನು ಕೇಳೋಣವೆಂದರೆ ಅವರು ತಮ್ಮ ಮಗನ ಮಾತನ್ನು ಕೇಳಿಕೊಂಡೋ ಏನೋ ತಾಯಕ್ಕನ ಹತ್ತಿರ ಮಾತನಾಡುವಾಗ ಮಲ್ಲೇಶನ ಸುದ್ದಿಯನ್ನೇ ಎತ್ತುತ್ತಿರಲಿಲ್ಲ. ಜವನಪ್ಪನವರನ್ನು ಕೇಳಿದರೆ ಸರಿಯಾದ ನಿರ್ಧಾರ ಸಿಕ್ಕದೇಹೋಗಬಹುದು. ಏಕೆಂದರೆ ಅವನು ಬುದ್ದಿಮೇಷ್ಟ್ರ ಪರಿಚಿತ. ಅವರ ಮನೆಯಲ್ಲಿ ರಂಪ ಮಾಡಿದ ಹುಡುಗನೆಂದು ಮಲ್ಲೇಶನ ವಿದ್ಯಾಭ್ಯಾಸವನ್ನೇ ಉಪೇಕ್ಷಿಸ ಬಹುದು. ಅಳಿಯ—ಅವನಿಗೇ ಇನ್ನೊಬ್ಬರಿಂದ ವಿವೇಕ ಹೇಳಿಸಬೇಕಾ ಗಿತ್ತು. ಇನ್ನುಳಿದವನೆಂದರೆ ಮಲ್ಲೇಶನಷ್ಟೇ ವಿದ್ಯಾವಂತನಾದ ಹುಚ್ಚನ ತಂದೆ ಕೊದಲಯ್ಯ. ತಾಯಕ್ಕ ಅವನ ಬಳಿಗೆ ಹೋಗಿ ಕೇಳಿದಳು. ಅವನು ಸಾರ್ವಜನಿಕವಾಗಿ ತಾನು ಹೇಳಬೇಕೆಂದಿದ್ದ ಅಭಿಪ್ರಾಯವನ್ನೇ ತಿಳಿಸಿದನು. “ನಮ್ಮಳ್ಳಿಮುಕ್ಕರಿಗ್ಯಾಕ ಐಸ್ಕೂಲು ಕಾಲೇಜು? ಐದು ರೂಪಾಯಿನ ಪರೀಕ್ಷೆಯೇ ವಾಸ್ತು. ಅದರಲ್ಲೇ ಅತ್ತಾಗೆ ಇಂಗ್ಲೀಸ್ ಯವಾರಗಳನ್ನೂ ನೋಡ್ಕೊಂಡು ಇತ್ತಾಗೆ ಯವಸಾಯಾನೂ ನೋಡ್ಕೊ ಳಕ್ಕೆ ಐದು ರೂಪಾಯಿನ ಪರೀಕ್ಸೆಯೇ ಸಾಕು. ಹೆಚ್ಚಾದರೆ ಅವರು ಅಳ್ಳೀನೇ ಮರತುಬುಡ್ತರೆ” ಎಂದನು. ತಾಯಕ್ಕನಿಗೆ ಅದೂ ನರಿಬಾಲದ ಕತೆ ಎನ್ನಿಸಿತು. ತನ್ನ ಮಗನನ್ನು ಮುಂದಕ್ಕೆ ಓದಿಸದಿದ್ದುದರಿಂದ ಮಲ್ಲೇಶ ನಿಗೂ ಬೇಡವೆನ್ನುತ್ತಿದ್ದಾನೆ ಕೊದಲಯ್ಯ ಎಂದುಕೊಂಡು ಬಂದಳು.

ಮಗನನ್ನೇ ಕೂಡಿಸಿಕೊಂಡು ಕೇಳಿದಳು. ಅವನು ಮೈಸೂರಿಗೆ ಹೋಗುತ್ತೇನೆಂದೂ, ಕಷ್ಟಪಟ್ಟು ಓದುತ್ತೇನೆಂದೂ ಭರವಸೆ ಕೊಟ್ಟನು. ಮಗನಿಗಿಂತ ಹೆಂಗಸಿಗೆ ಹೆಚ್ಚು ಯಾರೆಂದು ತಾಯಕ್ಕ ಅವನ ಇಷ್ಟಕ್ಕೇ ಹೆಬ್ಬೆಟ್ಟೊತ್ತಿಬಿಟ್ಟಳು. ಆ ಸಮಯಕ್ಕೆ ಸರಿಯಾಗಿ ಲಕ್ಕೀಹೊಲದಲ್ಲಾದ ಒಂದೂವರೆ ಪಲ್ಲಾ ಹುರುಳಿಯನ್ನು ಮಾರಿದ ಇಪ್ಪತ್ತೇಳು ರೂಪಾಯಿಗಳೂ ಬಂದಿದ್ದವು. ಮೈಸೂರಿನಲ್ಲಿ ತನ್ನ ಸ್ನೇಹಿತನೊಬ್ಬನು 'ಹಾಸ್ಟಲಿ'ನಲ್ಲಿರುವ ನೆಂದೂ ಅವನು ತಮ್ಮ ಎಲ್ಲಾ ಕೆಲಸಗಳನ್ನೂ ಮಾಡಿಕೊಡುವನೆಂದೂ ಮಲ್ಲೇಶ ತಾಯಿಗೆ ನಂಬಿಕೆ ಕೊಟ್ಟನು. ಮಾರನೆಯ ದಿನವೇ ಸ್ಕೂಲಿನಿಂದ ತನ್ನ ಸರ್ಟಿಫಿಕೇಟನ್ನೂ ತಂದುಬಿಟ್ಟನು.

ಬುಧುವಾರದ ದಿವಸ ಟಿ. ನರಶೀಪುರದ ಮಾರ್ಗವಾಗಿ ಮೈಸೂರಿಗೆ ತಾಯಿಮಕ್ಕಳಿಬ್ಬರೂ ಹೊರಡಲು ಸಿದ್ಧವಾದರು. ತಾಯಕ್ಕ ಮೈಸೂರನ್ನು ಕಂಡವಳೇ ಅಲ್ಲ. ಮಗನಿಗಾಗಿ ತಾನು ಮಾಡಲಾಗದ ಸಾಹಸವನ್ನೆಲ್ಲಾ ಮಾಡುತ್ತಿದ್ದೇನೆಂಬ ತೃಪ್ತಿ ಅವಳಿಗೆ ಧೈರ್ಯ ಕೊಡುತ್ತಿತ್ತು. ಮಲ್ಲೇಶ ಎಲ್ಲಿಗೆ ಕರೆದರೆ ಅಲ್ಲಿಗೆ ಹೋಗಿ ಯಾರನ್ನು ಬೇಕಾದರೂ ಮಾತನಾಡಿಸಿ ಅವನನ್ನು 'ದೊಡ್ಡ ಸ್ಕೂಲಿಗೆ' ಸೇರಿಸಿ ಬರುತ್ತೇನೆಂಬ ಛಲ ತಂದುಕೊಂಡಳು. ಕಾಳಕ್ಕ ಒಬ್ಬಳೊಡನೆ ಎಲ್ಲವನ್ನೂ ಹೇಳಿಕೊಂಡು ಇನ್ನಾರಿಗೂ ಹೇಳಬಾರದೆಂದು ಕೇಳಿಕೊಂಡು ಹೊರಟಿದ್ದಳು. ಪಿಶಾಚಿಗಳಿಬ್ಬರಲ್ಲೈಕಿ ಯಾರಾದರೊಬ್ಬರು ಬೆನ್ನುಹತ್ತಬಹುದೆಂಬ ಭೀತಿಯಿಂದ ಅವಳು ಹಾಗೆ ತಮ್ಮ ಪ್ರಯಾಣವನ್ನು ಗುಟ್ಟುಮಾಡಿದುದು.

ತೆಂಕಳ್ಳಿಯ ಹತ್ತಿರ ನರಶೀಪುರದ ಕಡೆಗೆ ಹೋಗುವ ಬಸ್ಸನ್ನು ಹಿಡಿದು ಹೋಗಬೇಕಾಗಿತ್ತು. ರಾತ್ರಿಯೇ ಸಜ್ಜಾಗಿದ್ದು ಹೊತ್ತಿಗೆಮುಂಚೆ ಇಬ್ಬರೂ ಹೊರಟರು. ತೆಂಕಳ್ಳಿಗೆ ಹೋಗಲು ಆರು ಮೈಲಿ ನಡೆಯಬೇಕಾಗಿತ್ತು. ಮಲ್ಲೇಶನಿಗೆ ಪೂರ್ಣ ಉತ್ಸಾಹವಿದ್ದುದರಿಂದ ಮುಂದೆಮುಂದೆ ಹೊರಟನು. ಕಣ್ಣುಕಟ್ಟಿದವಳಂತೆ ಮುಂದಿನ ಸಂದರ್ಭಗಳೊಂದನ್ನೂ ಊಹಿಸಲಾರದೆ ತಾಯಕ್ಕ ಮಗನನ್ನು ಹಿಂಬಾಲಿಸಿದಳು.

ತೆಂಕಳ್ಳಿಯ ಬೂರುಗದಮರದ ಕಟ್ಟೆ ಸಿಕ್ಕಿತು. ಬಸ್ಸಿಗೆ ಕಾಯುವವರ ಜಾಗ ಅದೇ. ತೆಂಕಳ್ಳಿಯ ಸುತ್ತಮುತ್ತ 'ತಾಳೆಯಗುತ್ತಿ'ಗಳು ಹೇರಳ. ಹುಡುಗರು ತಾಳೆಯಹೂವಿನ 'ಮೋತೆ'ಗಳನ್ನು ಕಿತ್ತುತಂದು ಬಸ್ಸಿನ ಪ್ರಯಾಣಿಕರಿಗೆ ಮಾರುವುದೊಂದು ಅಲ್ಲಿಯ ಮಾಮೂಲು. ತಾಯಕ್ಕ ಮಲ್ಲೇಶರೊಡನೆ, ತಾಳೆಯಹೂವಿನವ್ಯಾಪಾರಿಗಳಾದ ನಾಲ್ಕಾರು ಹುಡುಗರೂ ಬೂರುಗದ ಕಟ್ಟೆಯ ಬಳಿ ಸೇರಿದ್ದರು. ಅದರಲ್ಲಿ ಇಬ್ಬರು ಹುಡುಗಿಯರು. ಅವರ ಬಳಿ ತಾಳೆಯಹೂವಿರಲಿಲ್ಲ. ಬಸ್ಸು ಬರುವವರೆಗೂ ಮಲ್ಲೇಶನಿಗೆ ಅವರಿಬ್ಬರ ಪೈಕಿ ಒಬ್ಬಳ ಪೂರ್ವಪರಿಚಯವನ್ನು ಪತ್ತೆಮಾಡುವುದರಲ್ಲೇ ಹೊತ್ತುಹೋಗುತ್ತಿತ್ತು. ಎಲ್ಲಿ ನೋಡಿದ ಮುಖವಿದು ಎಂದು ಎಷ್ಟು ತಲೆ ಕುಲುಕಿನೋಡಿದರೂ ಹೊಳೆಯಲಿಲ್ಲ. ಬಸ್ಸೂ

ಬಂದಿತು. ತಾಯಕ್ಕ ಗಾಬರಿಯಲ್ಲಿ ಮಲ್ಲೇಶನನ್ನು ಹತ್ತಿಸಿ ತಾನೂ ಹತ್ತಿ ಕುಳಿತಳು. ಪ್ರಯಾಣಿಕರಲ್ಲಿ ಒಬ್ಬಿಬ್ಬರು ತಾಳೇಹೂವಿನ ವ್ಯಾಪಾರದಲ್ಲಿ ತೊಡಗಿದ್ದರು. ಆ ಹುಡುಗಿಯೂ ಮತ್ತೊಬ್ಬನ ಪರವಾಗಿ ವ್ಯಾಪಾರಕ್ಕಾರಂಭಿಸಿತು. ಆಗ ತಾಯಕ್ಕನೇ ಅವಳನ್ನು ಮಾತನಾಡಿಸಿದಳು. " ನೀನೂ ತಾಳೇಊವಿನ ಯಾಪಾರಮಾಡೀಯಾ ಗಂಡಪ್ಪೈಕಳ ಜೊತೇಲಿ ಸೇರ್ಕಂಡು? ನಿಮ್ಮಪ್ಪನಿಗೆ ಹೇಳ್ತೀನಿ ತಾಳು " ಎಂದ ತಾಯಕ್ಕನನ್ನು ಕೇಳಿ ವಿಚಾರಿಸಿಕೊಳ್ಳುವುದೆಂದುಕೊಂಡು ಮಲ್ಲೇಶ ಸುಮ್ಮನಾದನು. ಆಗಲೇ ವಿಚಾರಿಸುವುದಕ್ಕೆ ತಾಯಕ್ಕ ಐದಾರು ಜನಗಳಿಂದ ಆಚೆ ಕುಳಿತಿದ್ದಳು. ಬಸ್ಸು ಹೊರಟ ಸ್ವಲ್ಪಹೊತ್ತಿನಮೇಲೆ ಮೈಸೂರಿನ ಯೋಚನೆ ಅವನ ಮಿಕ್ಕ ಆಲೋಚನೆಗಳನ್ನೆಲ್ಲಾ ಹೊಡೆದು ಆಚೆಗೆ ತಳ್ಳಿಬಿಟ್ಟಿತು.

ಮೈಸೂರಿನ ಶಿವರಾಮಪೇಟೆಯ ದೇವಸ್ಥಾನವೊಂದರ ಹಿಂದಲ ರಸ್ತೆಯಲ್ಲಿ ಮಲ್ಲೇಶನ ಸ್ನೇಹಿತ ರೂಮು ಮಾಡಿಕೊಂಡು ಓದುತ್ತಿದ್ದುದು. ಅದರ ವಿಳಾಸವನ್ನು ಮಲ್ಲೇಶ ತಾಯಿಗೆ ಹತ್ತು ಬಾರಿ ಹೇಳಿ ಮನನ ಮಾಡಿಸಿದ್ದ. ಅವನನ್ನು ಕಂಡರೆ ಹಾಸ್ಟಲಿಗೆ ಸೇರುವುದು ಮುಂತಾದುವುಗಳಿಗೆಲ್ಲ ಸಹಾಯವಾಗುತ್ತದೆ ಎಂದಿದ್ದನು. ಟಿ. ನರಶೀಪುರದ ಬಸ್ಸು ಸ್ಟಾಂಡಿನಲ್ಲಿ ಅರ್ಧಗಂಟೆ ಕಾಲಕಳೆಯಬೇಕಾಗಿದ್ದಾಗ ತಾಯಕ್ಕ ಬಲು ಯೋಚನೆ ಮಾಡಿದ್ದಳು. ಮಲ್ಲೇಶನ ಜೊತೆಯ ಹುಡುಗ ಎಂದರೆ ಹೆಚ್ಚು ಕಡಿಮೆ ಮಲ್ಲೇಶನ ವಯಸ್ಸಿನ ಹುಡುಗನನ್ನೇ ನಂಬಿಕೊಂಡು ಹೇಗೆ ಹೋಗುವುದು ? ರಾತ್ರಿ ಅಲ್ಲೆಲ್ಲಿ ತಂಗುವುದು ? ಇನ್ಯಾರಾದರೂ ಗುರುತಿನವರೊಬ್ಬರನ್ನು ಮೈಸೂರಿನಲ್ಲಿ ಸಂಪಾದಿಸಿಕೊಳ್ಳದೇ ಹೀಗೆ ಹೊರಟದ್ದು ಬಹಳ ತಪ್ಪಾಯಿತೆಂದು ಬಲು ಪೇಚಾಡಿಕೊಂಡಳು.

ಅವರು ಕುಳಿತ ಬಸ್ಸಿಗೇ ಟಿ ನರಶೀಪುರದಲ್ಲಿ ಹತ್ತಿದ ಕೆಲವು ಮಂದಿಯ ಪೈಕಿ ತಾಯಕ್ಕನಿಗೆ ಒಬ್ಬರ ಗುರುತುಹತ್ತಿತು. ಅವಳಿಗೆ ಅಡಗಿ ಹೋಗಿದ್ದ ಧೈರ್ಯ ಮೆಲ್ಲನೆ ಪುಟಗೊಂಡಂತಾಯಿತು. ಆತ ಕೆಂಪದೇವಿಯ ಗಂಡ. ಆತ ಕಿರೀಕಾಟಿಯ ತನ್ನತ್ತೆಯ ಮನೆಗೆ ಬರುತ್ತಿದ್ದಾಗ ಅವಳು ನೋಡಿದ್ದುದು. ಬಹಳ ಹಿಂದಿನ ಮಾತು. ಆತನೊಡನೆ ತಾಯಕ್ಕ

ಮಾತನಾಡಿದುದಿಲ್ಲ. ಆದುದರಿಂದ ಈಗ ಒಂದೇಬಾರಿಗೆ ಹೇಗೆತಾನೇ ಮಾತನಾಡಿಸುವುದೆಂಬ ಸಂಕೋಚ ಬಂದು ಅವಳನ್ನು ಹಿಂಸಿಸಿತು. ಮಲ್ಲೇಶ ನಿಗೆ ಅವನನ್ನು ತೋರಿಸಿದಳು. ಅವನು "ಯಾರೂ ಯಾಕೆ ಬಾವ್ಸ, ನನ್ನ ಸ್ನೇಹಿತ ಸದಾಶಿವು ಎಲ್ಲಾ ಮಾಡ್ಕೊಡ್ತಾನೆ ಬಾ" ಎಂದು ಅವಳ ಬಾಯಿ ಮುಚ್ಚಿಬಿಟ್ಟ

ಮೈಸೂರು ದೊಡ್ಡಗಡಿಯಾರದ ಹತ್ತಿರ ಬಸ್ಸು ಬಂದು ನಿಂತಿತು. ಹನ್ನೆರಡು ಗಂಟೆಯೂ ಹೊಡೆಯಿತು. ಬಸ್ಸಿನಿಂದ ಇಳಿದು ಹೊರಟರು. ಆತನೂ ಹೊರಟುಹೋದನು. ಆತನ ಹಿಂದೆಯೇ ಹೋದರೆ ಅವನ ಮನೆ ಸಿಕ್ಕಿ ಕೆಂಪದೇವಿ ಸಿಕ್ಕುವಳೆಂಬ ಯೋಚನೆ ಅವನುಕಣ್ಮರೆಯಾಗುವವರೆಗೂ ಅವಳನ್ನು ಕಿತ್ತು ತಿಂದಿತು. ಮಲ್ಲೇಶ ಅವಳನ್ನು ಬಿಡದೇ ಶಿವರಾಮ ಪೇಟೆಯ ಕಡೆಗೆ ಎಳೆದುಕೊಂಡೇ ಹೊರಟ. ಅಂದು ಬುಧವಾರ. ಅಷ್ಟು ಹೊತ್ತಿನಲ್ಲಿ ಅವನಿರಲಾರನೆಂಬ ಊಹೆಯೂ ಇಲ್ಲದೇ ಅವರಿಬ್ಬರೂ ಅವನ ಬೀಗ ಹಾಕಿದ ರೂಮನ್ನು ಪತ್ತೆಮಾಡಿದರು. ಬಾಗಿಲ ಮುಂದಿನ ಕಲ್ಲಿನ ಮೇಲೆಯೇ ಬಹಳಹೊತ್ತು ಕುಳಿತು ವಿಶ್ರಾಂತಿ ಪಡೆದರು.

ಕೆಂಪದೇವಿಯ ಗಂಡನ ಹಿಂದೆ ಹೋಗಿ ಮನೆಯನ್ನು ಪತ್ತೆಮಾಡಿ ಕೊಳ್ಳಬೇಕಾಗಿತ್ತೆಂದು ತಾಯಕ್ಕ ಹಲುಬಿದಳು. ಮಲ್ಲೇಶ ಇನ್ನೇನು ಸದಾ ಬಂದ ಎನ್ನುತ್ತಲೇ ಇದ್ದನು. ನಾಲ್ಕೂವರೆ ಗಂಟೆಯ ವೇಳೆಗೆ ಸದಾಶಿವು ಶಿವು ಬಂದ. ಅವನನ್ನು ಮಲ್ಲೇಶ ಗುರುತಿಸಿದಕೂಡಲೇ ತಾಯಕ್ಕನ ಊಹೆ ಯೆಲ್ಲ, ತಲೆಕೆಳಕಾಯಿತು. ಸದಾಶಿವೂಗೆ ಸುಮಾರು ಇಪ್ಪತ್ತೆರಡು ವರ್ಷವಿದ್ದಿರಬಹುದು. ಮುಳ್ಳುಮುಖದ ಎತ್ತರವಾದ ಹುಡುಗ. ಅವನು ಬಹಳ ವರ್ಷಗಳಿಂದ ಐದು ರೂಪಾಯಿನ ಪರೀಕ್ಷೆಯಲ್ಲಿ ಕೊಳೆಯುತ್ತಿರುವ ನೆಂಬುದು ಅನಂತರ ತಿಳಿದವಿಷಯ. ಅವನು ತಾಯಕ್ಕನೊಡನೆ ಮಾತಾ ನಾಡುವಾಗಲೂ ಸಿಗರೇಟು ಸೇದುವುದನ್ನು ಬಿಡಲಿಲ್ಲ.

ಅವನು ಮಲ್ಲೇಶನನ್ನು ಕಂಡೊಡನೆಯೇ ಹಲ್ಲು ಬಿಟ್ಟು ನಕ್ಕನು. ತಾಯಕ್ಕನಿಗೆ ಅರ್ಥವಾಗಬಾರದೆಂದು ಅವರಿಬ್ಬರೂ ನಾಲ್ಕಾರು ಮಾತು ಗಳನ್ನು "ಕೋಸ್‌ಪಿಸ್" ಎಂದುಕೊಂಡರು. ಅನಂತರ ತಾಯಕ್ಕ

ಸದಾಶಿವನೊಡನೆ ಮೃದುವಾಗಿ ಮಾತನಾಡಿ ಮಲ್ಲೇಶನ ಯೋಗಕ್ಷೇಮವನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡಳು. ಅವನು ತಾಯಕ್ಕನೊಡನೆಯೂ ನಗುನಗುತ್ತಲೇ ಮಾತನಾಡಿ "ಅದ್ಕೇನಂತೆ ಈಗ್ಲೇ ಓಗಿ ಇಸ್ಕೂಲಿಗೆ ಸೇರಿಸ್ಬುಡವೆ ಬೇಕಾದರೆ, ಆಶ್ಟಲ್‌ಗೆ ಇನ್ನೊಂದು ಸ್ವಲ್ಪ ದಿನವಾದಮೇಲೆ ಸೇರಸ್ಬೇಕಾಯ್ತುದೆ. ಅಲ್ಲೀ ವರ್‍ಗೆ ಮಲ್ಲೇಸ, ನನ್ರೂಮ್ನಲ್ಲೇ ಇರತನೆ" ಎಂದವಳಿಗೆ ಧೈರ್ಯ ಹೇಳಿದನು.

ಅವನು ಹೇಳಿದಂತೆ ಮಲ್ಲೇಶನನ್ನು ಆ ದಿನವೇ ಸ್ಕೂಲಿಗೆ ಸೇರಿಸುವುದಾಗಲಿಲ್ಲ. ಸದಾಶಿವ ರೂಮಿಗೆ ಬಂದು, ಪಕ್ಕದ ಮನೆಯೊಳಕ್ಕೆ ಹೋಗಿ ಮುಖ ತೊಳೆದುಕೊಂಡುಬಂದು ಶೃಂಗಾರವಾಗುವುದರಲ್ಲಿ ಐದು ಘಂಟೆಯಾಗಿ ಹೋಗಿತ್ತು. ಮಲ್ಲೇಶನೇ ನಾಳೆ ಹೋಗುವುದೆಂದು ತಾಯಕ್ಕನಿಗೆ ಹೇಳಿಬಿಟ್ಟನು. ತಾಯಕ್ಕ ಸದಾಶಿವನ ರೂಮಿನೊಳಗೆ ಇಣಕಿನೋಡಿದಳು. ರೂಮಿನ ತುಂಬಾ ಬೀಡಿಯ ಮೋಟುಗಳು. ಎರಡು ಮೂರು ಜೊತೆ ಎಕ್ಕಡಗಳು ಒಂದು ಜೊಳೆ 'ಬೂಡ್ಸು' ಅವಳಿಗೆ ರಾತ್ರಿಯನ್ನು ನೆನೆಸಿಕೊಂಡು ಬಲು ಪೇಚಾಟವಾಯಿತು. ಈ ರೂಮಿನಲ್ಲಿ ಈ ಬೀಡಿಯ ಹಾವಳಿಯ ಮಧ್ಯೆ ರಾತ್ರಿಯನ್ನು ಕಳೆಯುವುದು ತನ್ನಿಂದ ಆಗುವುದಿಲ್ಲವೆಂದುಕೊಂಡಳು. ಸದಾಶಿವನ ಕೈಯಿನ ಸಿಗರೇಟು, ಪದೇ ಪದೇ ಕಾಣುತ್ತಿದ್ದ ಅವನ ಹಲ್ಲುಗಳು ಅವಳನ್ನು ಬಲು ಬೇಸರಗೊಳಿಸಿತು.

ಸುಮಾರು ಒಂಭತ್ತು ವರ್ಷಗಳ ಹಿಂದೆ ಕೆಂಪದೇವಿ ತಾನು ದೀವಟಿಗೆ ಬೀದಿಯಲ್ಲಿ ಇರುವುದಾಗಿ ಹೇಳಿದ್ದಳು, ಈ ಸದಾಶಿವನ ಮುಖವನ್ನು ನೋಡಲಾರದೆ ತಾಯಕ್ಕ ದೀವಟಿಗೆ ಬೀದಿಯಲ್ಲಿ ತನಗೆ ಬೇಕಾದವರೊಬ್ಬರಿರುವರೆಂದೂ, ಅವರ ಮನೆಯಲ್ಲೇ ಅಂದಿನ ರಾತ್ರಿಯನ್ನು ಕಳೆದು ಮಾರನೆಯ ದಿನ ಬೆಳಿಗ್ಗೆ ಅವರನ್ನು ಬಂದು ಕಾಣುವುದಾಗಿಯೂ ಹೇಳಿ ತಾಯಕ್ಕ ಹೊರಟೇ ಬಿಟ್ಟಳು. ಸ್ನೇಹಿತರಿಬ್ಬರಿಗೂ ಪರಮ ಸಂತೋಷವಾಯಿತು. ಇಪ್ಪತ್ತೆರಡು ರೂಪಾಯಿಗಳನ್ನೂ ಒಂದು ಬಟ್ಟೆಗೆ ಕಟ್ಟಿ ಅದನ್ನು ಮಲ್ಲೇಶನ ಚಡ್ಡಿಯ ಜೋಬಿನಲ್ಲಿ ಇರಿಸಲಾಗಿತ್ತು. ತಾಯಕ್ಕ ಹೋಗುವಾಗ ದುಡ್ಡಿನ ವಿಷಯ ಮಾತನಾಡಲೇ ಇಲ್ಲ. ಅದೇ ಅವರ ಸಂತೋಷಕ್ಕೆ ಕಾರಣ.

ದೀವಟಿಗೆ ಬೀದಿಯೆಂದರೆ ಒಂದು ದೊಡ್ಡ ಬೀದಿ. ಅದಕ್ಕೆ ಎರಡೂ ಪಕ್ಕದಲ್ಲಿ ಸುಮಾರು ಹತ್ತುಹನ್ನೆರಡು ಅಡ್ಡದಾರಿಗಳಿವೆ. ಅವುಗಳಲ್ಲಿ ಗಲ್ಲಿಗಳಿವೆ. ಗಲ್ಲಿಗಳಲ್ಲಿ ವಠಾರಗಳಿವೆ. ಅಲ್ಲಿಯವರೆಲ್ಲ "ನೀವೆಲ್ಲಿದೀರಿ ?" ಎಂಬ ಪ್ರಶ್ನೆಗೆ "ದೀವಟಿಗೆ ಬೀದೀಲಿ" ಎಂದುಬಿಡುತ್ತಾರೆ. ಅವರನ್ನು ಹುಡುಕುವುದು ಮೈಸೂರಿನವರಿಗೇ ದುಸ್ಸಾಧ್ಯ. ಅಂತಹುದರಲ್ಲಿ ಮೊದಲನೇ ಬಾರಿಗೆ ಮೈಸೂರಿಗೆ ಬಂದಿರುವ ತಾಯಕ್ಕನ ಗತಿಯೇನು ? ಸದಾಶಿವನ ರೂಮಿನಲ್ಲಿರುವುದಕ್ಕಿಂತ ಯಾವುದಾದರೂ ಬೀದಿಯ ಜಗುಲಿಯಮೇಲೆ ರಾತ್ರಿಯನ್ನು ಕಳೆಯುವುದೊಳ್ಳೆಯದೆಂದು ಹೊರಟುಬಂದ ತಾಯಕ್ಕ ಬಲು ಸುತ್ತಿದಳು. ದೀವಟಿಗೆ ಬೀದಿಯೇನೋ ಸುಲಭವಾಗಿ ಸಿಕ್ಕಿತು. ಹೊತ್ತು ಬೀಳುವುದಕ್ಕಿಂತ ಮುಂಚಿತವಾಗಿಯೇ ಅಲ್ಲಿಗೆ ಬಂದು ಕೆಂಪದೇವಿಯ ಮನೆಯನ್ನು ಹುಡುಕತೊಡಗಿದಳು. ಎಂಟು ಒಂಭತ್ತು ಗಂಟೆಯಾದರೂ ಪತ್ತೆಮಾಡಲಾಗಲಿಲ್ಲ.

"ಕಿರೀಕಾಟೇ ಹೆಣ್ಣು—ಕೆಂಪದೇವವ್ವ ಅಂತ—ಅವಳ ಮನೆ ಗೊತ್ತಪ್ಪ ?" ಎಂಬುದೇ ತಾಯಕ್ಕನ ಮಂತ್ರವಾಯಿತು. ಹಳ್ಳಿಯವರಂತೆ ತೋರಿದ ಗಂಡಸು ಹೆಂಗಸನ್ನೆಲ್ಲಾ ವಿಚಾರಿಸಿ ವಿಫಲಳಾದಳು. ಕೈಕಾಲುಗಳು ನಿಂತುಹೋದವು. 'ಪುರಿ'ಯೇ ಆಹಾರವಾಯಿತು. ಹತ್ತು ಗಂಟೆಯಾದಮೇಲೆ ಒಬ್ಬಳೇ ಬೀದಿಬೀದಿ ಸುತ್ತುವುದು ಅವಳಿಗೇ ಅವಮಾನವಾಗಿ ಕಂಡುಬಂದಿತು. ಬೀದಿ ನಲ್ಲಿಯೊಂದರಲ್ಲಿ ಹೊಟ್ಟೆತುಂಬಾ ನೀರು ಕುಡಿದು ಅದರ ಬಳಿಯಲ್ಲೇ ಇದ್ದ ಬೀಗ ಹಾಕಿದ ಮನೆಯೊಂದರ ಜಗುಲಿಯ ಮೇಲೇರಿ ಮೂಲೆಯಲ್ಲಿ ಕುಳಿತಳು. ಬಹಳಹೊತ್ತಿನತನಕ ಕುಳಿತೇ ಇದ್ದಳು. ಬೀದಿಗಳೆಲ್ಲ ನಿರ್ಜನವಾಯಿತು. ಹಾಗೆಯೇ ಮೈಚಾಚಿದಳು. ಸ್ವಲ್ಪ ಹೊತ್ತಿನಲ್ಲೇ ಒಂದು ಸಂಸಾರವೇ ಆ ಜಗುಲಿಗೆ ಬಂದು ಸೇರಿಕೊಂಡಿತು. ಅವರೆಲ್ಲ ಬೀದಿ ಗುಡಿಸುವವರು. ಅವರ ಸುತ್ತಿನ ವಾತಾವರಣದಲ್ಲೆಲ್ಲಾ ಹೆಂಡದ ವಾಸನೆ ತುಂಬಿಕೊಂಡಿತು. ಅರ್ಥವಾಗದ ಮಾತಿನಲ್ಲಿ ಅವರ ಸರಸ, ಜಗಳ, ರಂಪ! ತಾಯಕ್ಕ ಅಲ್ಲಿಂದ ಕದಲಲಾರದೆ, ಇರಲಾರದೇ ತೊಳಲಾಡಿದಳು.

ಆದಿನದ ರಾತ್ರಿಯನ್ನು ಅವಳ ಅಲ್ಲಿ ಕಳೆದದ್ದು ನರಕದಲ್ಲಿ ನಾಲ್ಕು ಜನ್ಮ ಕಳೆದಂತಾಯಿತು. ಏಕೋ ಅವಳು ತನ್ನ ಪರಿಸ್ಥಿತಿಗೆ ತಾನೇ ಅ ಬೇಕೆಂದೆನಿಸಿ ಧಾರಾಳವಾಗಿ ಅತ್ತಳು. ಮಾನಂದವಾಡಿ ಚೌಕದ ಕಡೆ ಯಿಂದ ಕೋಳಿಗಳು ಕೂಗುವ ಶಬ್ದವಾದೊಡನೆಯೇ ಎದ್ದು ಕುಳಿತಳು. ಜೊತೆಯ ಸಂಸಾರವೆಲ್ಲಾ ಸ್ವಲ್ಪ ಹೊತ್ತಿನಲ್ಲಿಯೇ ಹೊರಟುಹೋಯಿತು. ಮರುಕ್ಷಣವೇ ಇನ್ನೊಂದು ಸಮೂಹ ಬಂತು. ಆದರೆ ಅದು ಬೀದಿಯ ನಲ್ಲಿಯಕಡೆಗೆ ಬಂದದ್ದು.

ಬೀದಿಯ ನಲ್ಲಿಯು ಬಿಡುವಾಗಲು ತಾಯಕ್ಕ ಆರೂವರೆಯವರೆಗೆ ಕಾಯಬೇಕಾಯಿತು. ಕಾದದ್ದು ಒಳ್ಳೆಯದೇ ಆಯಿತು. ನೀರಿಗೆ ಕೆಂಪ ದೇವಿ ಒಂದು ಸೀಮೇಎಣ್ಣೆ ಡಬ್ಬ, ಒಂದು ದೊಡ್ಡ ತಪ್ಪಲೆ ಹಿಡಿದುಬಂದಳು. ತಾಯಕ್ಕ ಜಗುಲಿಯಿಂದ ಧುಮಿಕಿಬಂದು ಅವಳನ್ನು ಮಾತನಾಡಿಸಿದಳು. ಕೆಂಪದೇವಿ ಕಿವಿಗಳವರೆಗೂ ಬಾಯಿಬಿಟ್ಟು ಹಿಗ್ಗಿ ತಾಯಕ್ಕನ ಕುಶಲವನ್ನು ವಿಚಾರಿಸಿ, ನೀರು ತುಂಬಿದಮೇಲೆ ತಮ್ಮ ಮನೆಗೆ ಕರೆದೊಯ್ದಳು.

ಕೆಂಪದೇವಿಯ ಸಂಸಾರ ಅತಿಪುಟ್ಟ ಮನೆಯೊಂದರಲ್ಲಿ ನಡೆಯು ತ್ತಿತ್ತು. ತಾಯಕ್ಕ ಮನೆಯೊಳಕ್ಕೆ ಹೋಗಲು ಕೆಂಪದೇವಿಯ ಯಜಮಾನ ಕೆಂಪಣ್ಣ ಹೊರಕ್ಕೆ ಬರಬೇಕಾಯಿತು. ತಾಯಕ್ಕನಿಗೆ ಸ್ನಾನಮಾಡಿ ಶಿವ ಪೂಜೆ ಮಾಡಬೇಕೆಂದಿದ್ದ ಬಯಕೆ ಆ ಮನೆಯನ್ನು ನೋಡಿ ತಪ್ಪಿ ಹೋಯಿತು. ಕೆಂಪದೇವಿ ಎಷ್ಟೆಷ್ಟೋಬಗೆಯಲ್ಲಿ ಬೇಡಿಕೊಂಡರೂ ತಾಯಕ್ಕ ಅವಳ ಯಾವ ಆತಿಥ್ಯವನ್ನೂ ಸ್ವೀಕರಿಸಲಾಗಲಿಲ್ಲ.

ಕೆಂಪಣ್ಣನೂ ತಾಯಕ್ಕನಯೋಗಕ್ಷೇಮಗಳನ್ನೆಲ್ಲಾ ತಿಳಿದುಕೊಂಡನು. ಬಸ್ಸಿನಲ್ಲೇ ಮಾತನಾಡಿಸಿದ್ದರೆ ಅವಳಿಗೆ ಇಷ್ಟು ಕಷ್ಟವಾಗುತ್ತಿರಲಿಲ್ಲವೆಂದು ಉಪಚಾರ ಹೇಳಿದನು. ಮಲ್ಲೇಶನನ್ನು ತೋರಿಸಿಕೊಟ್ಟರೆ ಅವನನ್ನು ಆಗಾಗ್ಗೆ ವಿಚಾರಿಸಿಕೊಳ್ಳುವುದಾಗಿ ಭರವಸೆ ಕೊಟ್ಟನು. ಅಷ್ಟರಿಂದಲೇ ತಾಯಕ್ಕನಿಗೆ ಅಷ್ಟೈಶ್ವರ್ಯ ಸಿಕ್ಕಿದಂತಾಯಿತು. ಅವಳು ಆ ದಂಪತಿ ಗಳಿಬ್ಬರಿಗೂ ಒಳ್ಳೆಯದನ್ನು ಕೋರಿ ಇನ್ನೊಂದು ಬಾರಿ ಬಂದಾಗ ಅಲ್ಲಿಗೇ ಬರುವೆನೆಂದು ಹೇಳಿ ಹೊರಟಳು. ಪುನಃ ಶಿವರಾಮಪೇಟೆಯಲ್ಲಿದೆಯೆಂದು

ವಿಚಾರಿಸಿಕೊಂಡು ಬಂದು ಒಂಭತ್ತೂವರೆಯ ಹೊತ್ತಿಗೆ ಸದಾಶಿವನ ರೂಮಿಗೆ ತಲುಪಿದಳು. ಅವರಿಬ್ಬರೂ ಇನ್ನೂ ಎದ್ದೇ ಇರಲಿಲ್ಲ.

ಅವರಿಬ್ಬರನ್ನೂ ಆತುರಪಡಿಸಿ ಸ್ಕೂಲಿಗೆ ಹೊರಡಿಸುವುದರಲ್ಲಿ ಸ್ಕೂಲಿನ ಹೊತ್ತು ಸರಿಯಾಗಿ ಬಂದಿತು. ಕುತೂಹಲದಿಂದ ತಾನೂ ಅವರೊಡನೆ ಹೊರಟಳು. ದೊಡ್ಡ ಸ್ಕೂಲು ಹೇಗಿದೆಯೆಂಬುದನ್ನು ದೂರದಿಂದಲಾದರೂ ನೋಡುವ ಆಸೆಯಿತ್ತವಳಿಗೆ. ಅವಳ ಆಸೆಗೆ ತಕ್ಕಂತೆ ಸದಾಶಿವ, ಮಲ್ಲೇಶನನ್ನು ಕರೆದುಕೊಂಡು ಹೋದುದೂ ಮರಿಮಲ್ಲಪ್ಪಾ ಸ್ಕೂಲಿಗೆ. ತಾಯಕ್ಕ ಗೇಟಿಸಿಂದ ಹೊರಗೇ ನಿಂತಳು. ಅವರಿಬ್ಬರೇ ಒಳಕ್ಕೆ ಹೋದರು. ತಾಯಕ್ಕ ನೋಡುತ್ತಲೇ ನಿಂತಿದ್ದಳು ಅರಮನೆಯಂತೆ ಎದೆ ಎತ್ತಿ ನಿಂತಿದ್ದ ದೊಡ್ಡ ಕಟ್ಟಡ. ಹಳೆಯ ಪದ್ಧತಿಯಂತೆ ಕಟ್ಟಿದ್ದುದರಿಂದ ಹೊರಹೊಮ್ಮುತ್ತಿದ್ದ ಒಂದು ವಿಶೇಷ ಭವ್ಯತೆ, ಕಟ್ಟಡದ ಸುತ್ತಲೂ ಸೊಳ್ಳೆಗಳಂತೆ ಕಾಣುತ್ತ ತುಂಬಿಕೊಂಡಿದ್ದ ವಿದ್ಯಾರ್ಥಿಗಳು. ಇವುಗಳನ್ನು ನೋಡುತ್ತ ತಾಯಕ್ಕನಿಗೆ ತನ್ನ ಹಿಂದಿನ ರಾತ್ರಿಯ ಕಷ್ಟವೆಲ್ಲ ಮರೆತುಹೋಯಿತು. ತನ್ನ ಮಗನು ಇಂತಹ ಸ್ಕೂಲಿನಲ್ಲಿ ಓದಿದಮೇಲೆ ಖಂಡಿತ ದೊಡ್ಡಮನುಷ್ಯನಾಗುವನೆಂದು ಧೃಡಪಡಿಸಿಕೊಂಡಳು. ಆ ಗುಂಪಿನಲ್ಲಿಯೂ ಸದಾಶಿವ, ಮಲ್ಲೇಶರನ್ನು ಕಣ್ಮರೆಯಾಗುವವರೆಗೂ ಗಮನಿಸುತ್ತಿದ್ದಳು. ಮಲ್ಲೇಶ ಕಟ್ಟಡವನ್ನು ಪ್ರವೇಶಿಸಿ ಕಣ್ಮರೆಯಾಗುವುದಕ್ಕೆ ಮೊದಲು ಹತ್ತಬೇಕಾಗಿದ್ದ ಹತ್ತುಹದಿನೈದು ಹಂತಗಳನ್ನು ಒಂದೊಂದಾಗಿ ಹತ್ತುತ್ತಿದ್ದುದು ತಾಯಕ್ಕನಿಗೆ ತನ್ನ ಮಗ ಸಿಂಹಾಸನವನ್ನು ಹತ್ತುತ್ತಿರುವಂತೆ ತೋರಿ ಅವಳ ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡಿತು.

ಮರಿಮಲ್ಲಪ್ಪನವರ ಸ್ಕೂಲೆಂದರೆ ಮಾಧ್ಯಮಿಕ ಮತ್ತು ಪ್ರೌಢ, ಎರಡೂ ಶಾಲೆಗಳಿರುವ ಕಟ್ಟಡ. ಸದಾಶಿವ, ಮಲ್ಲೇಶನನ್ನು ಕರೆದುಕೊಂಡು ಹೋಗಿ ಮಾಧ್ಯಮಿಕ ನಾಲ್ಕನೆಯ ತರಗತಿಗೆ ಸೇರಿಸಿದನು. ಮಲ್ಲೇಶ ತನಗೆ ಪಾಸಾಗಿರುವುದೆಂದು ಸುಳ್ಳು ಹೇಳಿಗುದನ್ನು ಇಲ್ಲಿಯವರೆಗೂ ಕಾಪಾಡಿಕೊಂಡು ಬಂದಿದ್ದನು. ಗುಟ್ಟು ರಟ್ಟಾಗುವುದಕ್ಕಿಂತ ಮುಂಚೆ ಮೈಸೂರಿಗೆ ಬಂದು ಸೇರಿಕೊಂಡುಬಿಡಬೇಕೆಂದಿದ್ದ ಅವನ ಹಂಚಿಕೆ ನೆರವೇರಿ ಅವನು

ಬಹಳ ಗೆಲುವಾಗಿದ್ದನು. ಅವನು ಸ್ಕೂಲಿಗೆ ಸೇರಿದ ಸಂಗತಿಯನ್ನು ತಿಳಿಸಬೇಕೆಂದು ತಾನೂ ತರಗತಿಗೆ ಹೋಗದೇ ಸದಾಶಿವ, ಮಲ್ಲೇಶನನ್ನು ಕರೆದುಕೊಂಡು ಹಿಂದಿರುಗಿ ತಾಯಕ್ಕನ ಬಳಿಗೆ ಬಂದನು. ಒಳಗೆ ಆದ ಮಹಾಕಾರ್ಯವನ್ನು ಬಣ್ಣಿಸಿದನು. 'ಉಫ್' ಎಂದು ಬೆವರೊರಿಸಿಕೊಂಡನು. ತಾಯಕ್ಕ ಸದಾಶಿವನ ಉಪಕಾರಕ್ಕೆ ತಕ್ಕ ನಾಲ್ಕು ಉಪಚಾರದ ಮಾತುಗಳನ್ನಾಡುವುದನ್ನೂ ಮರೆತು ಮಗನನ್ನೇ ನೋಡುತ್ತಿದ್ದಳು.

ಈ ದಿಗ್ವಿಜಯದ ಸಂತೋಷಾರ್ಥವಾಗಿ ಅವರಿಬ್ಬರೂ ಹೊಟೇಲಿಗೆ ಹೋಗಬೇಕೆಂದು ಏರ್ಪಾಡುಮಾಡಿಕೊಂಡರು ತಾಯಕ್ಕನನ್ನು ಕರೆದರು. ಅವಳು ಸ್ನಾನಮಾಡಿ ಶಿವಪೂಜೆ ಮಾಡುವವರೆಗೂ ಒಂದು ತೊಟ್ಟು ನೀರನ್ನೂ ಕುಡಿಯುವುದಿಲ್ಲವೆಂದಳು. ಅವಳನ್ನು ಬಿಟ್ಟು ಅವರಿಬ್ಬರೂ ಹೋಗಿ ತುಂಬಿಕೊಂಡುಬಂದರು. ತಾಯಕ್ಕ ತನ್ನನ್ನು ಬಸ್ಸಿನವರೆಗೆ ಕಳಿಸಿಕೊಡಲು ಬಾರೆಂದು ಮಗನನ್ನು ಕರೆದುಕೊಂಡು ಹೊರಟಳು. ಸದಾಶಿವ ತನ್ನ ತರಗತಿಗೆ ಹೋದನು

ತಾಯಕ್ಕ ಮಗನನ್ನು ಕರೆದುಕೊಂಡು ನೇರವಾಗಿ ಕೆಂಪದೇವಿಯ ಮನೆಗೆ ಹೋದಳು. ಕೆಂಪಣ್ಣ ಮೊದಲೇ ಊಹಿಸಿದ್ದಂತೆ ಮನೆಯಲ್ಲಿರಲಿಲ್ಲ. ಕೆಂಪದೇವಿಯ ಮನೆಯನ್ನು ಮಲ್ಲೇಶ ನೋಡಿಕೊಂಡ ಹಾಗಾಗಲಿ ಎಂದೂ, ಕೆಂಪದೇವಿಗೆ ಮಲ್ಲೇಶನ ರೂಪ ಮರೆತುಹೋಗಿದ್ದರೆ ನೋಡಿಕೊಳ್ಳಲಿ ಎಂದೂ ತಾಯಕ್ಕ ದೀವಟಗೆ ಬೀದಿಗೆ ಪುನಃ ಬಂದದ್ದು. ಕೆಂಪದೇವಿಯ ಮನೆಯ ಪೋಸ್ಟ್ ಅಡ್ರೆಸ್ಸನ್ನು ಅವಳ ಕೈಲಿ ಹೇಳಿಸಿ ಮಗನ ಕೈಯಿಂದ ಬರೆಸಿಕೊಂಡು ಸೆರಗಿಗೆ ಗಂಟುಹಾಕಿಕೊಂಡಳು.

ತಾಯಕ್ಕನಿಗೆ ರಾತ್ರಿಯೂಟವಾದರೂ ಸಿಕ್ಕಲೆಂದೇ ದೇವರು ಬಸ್ಸನು ಇನ್ನೂ ಮೈಸೂರಿನಲ್ಲಿ ಬಿಟ್ಟಿದ್ದದ್ದು ಎನ್ನಿಸುವ ಹಾಗೆ ತಾಯಕ್ಕ ಬಸ್ಸನ್ನು ಹತ್ತಿದ ತಕ್ಷಣ ಕಂಡಕ್ಟರ್ 'ರೈಟ್' ಎಂದನು. ತೆಂಕಳ್ಳಿಯಿಂದ ಕಿರೀಕಾಟೆಯವರೆಗೂ ಅವಳು ಹೇಗೆ ನಡೆದಳೋ ಅವಳಿಗೇ ತಿಳಿಯದು. ಬಾಯಿಯ ದ್ರವವೆಲ್ಲ ಆರಿಹೋಗಿತ್ತು. ತಲೆ ಸಿಡಿದುಹೋಗುತ್ತಿತ್ತು. ನಡುವು ಹೊಡೆದುಕೊಳ್ಳುತ್ತಿತ್ತು. ಕಾಲೆಳೆದು ಎಳೆದು ಕಾಲೆಲ್ಲಾ ಧೂಳು

ತುಂಬಿಕೊಂಡಿತ್ತು. ಸೊಂಟದಮೇಲಿದ್ದ ಎಡಗೈ ತೆಗೆದರೆಲ್ಲಿ ಬಿದ್ದೇಹೋಗುವುದೋ ಎನ್ನಿಸಿತ್ತು. ರಾತ್ರಿ ಎಂಟುಗಂಟೆಯವೇಳೆಗೆ ಕಿರೀಕಾಟಿಯು ಸ್ಕೂಲುಮನೆಯು ಸಿಕ್ಕಿತು. ಅಳಿದುಳಿದ ವೈಯಕಸುವನ್ನೆಲ್ಲಾ ಕಾಲುಗಳಿಗೆ ಕಳಿಸಿ ಕಾಳಕ್ಕನ ಮನೆಯವರೆಗೆ ಸಾಗಿದಳು. ಕಾಳಕ್ಕನನ್ನು ಕೂಗಿ ಬೀದಿಯ ಬಾಗಿಲಿಗೇ ಕರೆದು ಜಗುಲಿಯಮೇಲೆ ಹಾಯಾಗಿ ಮೈನೀಡಿಬಿಟ್ಟಳು. ತಾಯಕ್ಕನಿಗೆ ಆ ರಾತ್ರಿ ಆದ ಸ್ನಾನ, ಪೂಜೆ, ಊಟ, ನಿದ್ದೆಗಳ ವಿವರವನ್ನು ಕಾಳಕ್ಕ ಮಾರನೆಯ ದಿನ ಅವಳಿಗೇ ಹೇಳಬೇಕಾಯಿತು,

ಮಗ ಮೈಸೂರಿನಲ್ಲಿ ಓದತೊಡಗಿದ್ದನು. ಇನ್ನೆರಡೇ ವರ್ಷಕ್ಕೆ ಹನ್ನೆರಡು ರೂಪಾಯಿನ ಪರೀಕ್ಷೆ. ಅದಾದ ನಾಲ್ಕು ವರ್ಷಕ್ಕೆ 'ಬೀಯೆ' ಬಂದದ್ದೆಲ್ಲ ಬರಲಿ. ಒಡೆಯನ ಹೊಲ ಮಾರಿಹೋಗಲಿ ಮಲ್ಲೇಶ 'ಬೀಯೆ' ಮಾಡಲೇಬೇಕು. ಅದರಿಂದ ಇನ್ನಾರುವರ್ಷ ಒಪ್ಪತ್ತು ಊಟಮಾಡಿದರೂ ಸರಿಯೆ. ಹೀಗೆ ಮನಸ್ಸುಮಾಡಿ ತಾಯಕ್ಕ ಆ ಶುಕ್ರವಾರದಿಂದಲೇ ಒಪ್ಪೊತ್ತಿಗೆ ಪ್ರಾರಂಭಿಸಿದಳು.

ಅದೇ ಶುಕ್ರವಾರ ಮೈಸೂರಿನಲ್ಲಿ ಸದಾಶಿವ ಮಲ್ಲೇಶರಿಗೆ ಮೂರು ಹೊತ್ತು ಊಟ ಎರಡು ಹೊತ್ತು ತಿಂಡಿ, ಒಂದು ಸಿನಿಮಾ ಆಯಿತು. ಆ ಸಿನಿಮಾದಲ್ಲಿಯೇ ಮಲ್ಲೇಶ ಮೊಟ್ಟಮೊದಲನೆಯ ಸಿಗರೇಟು ಹತ್ತಿಸಿದುದು. ಆದರೂ ಹೊಗೆಯನ್ನು ಗಂಟಲಿನಿಂದ ಒಳಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಒಂದು ಬಾರಿ ಹೊಗೆ ತನ್ನಷ್ಟಕ್ಕೆ ತಾನೇ ಒಳಕ್ಕೆ ನುಗ್ಗಿದಾಗ ಮಲ್ಲೇಶ ವಿಪರೀತವಾಗಿ ಕೆಮ್ಮಿದನು. ಆರ್ಧಕ್ಕೆ ಆ ಸಿಗರೇಟನ್ನು ಎಸೆದುಬಿಟ್ಟನು. ಇನ್ನು ಪುನಃ ಅವನು ಸಿಗರೇಟು ಹೊತ್ತಿಸಿದ್ದು ಮೂರುದಿನಗಳ ಅನಂತರವೇ. ಅದೂ ಸದಾಶಿವನ ಸ್ನೇಹಿತ ವಿಠಲನ ಬಲವಂತಕ್ಕೆ. ಆ ದಿವಸವೂ ಹೊಗೆ ಗಂಟಲೊಳಗೆ ಇಳಿಯಿತು. ಕೆಮ್ಮಲೂ ಬಹಳವಾಗಿ ಬಂತು. ಅದರೆ ಆ ಶುಕ್ರವಾರದ ದಿನದಷ್ಟಲ್ಲ.

ತಾಯಕ್ಕ ಮೈಸೂರಿನಿಂದ ಹೊರಡುವಾಗ ಎರಡುರೂಪಾಯಿಗಳನ್ನು ತೆಗೆದುಕೊಂಡು ಮಿಕ್ಕ ಇಪ್ಪತ್ತು ರೂಪಾಯಿಗಳನ್ನು ಮಲ್ಲೇಶನಿಗೆ ಬಿಟ್ಟು ಹೋಗಿದ್ದಳು. ಸ್ಕೂಲಿಗೆ ಸೇರಲು ಎರಡೂಕಾಲು ರೂಪಾಯಿ ಮಾತ್ರ

ಆಗಿತ್ತು. ಅದಕ್ಕೆ ಅವರು ತಾಯಕ್ಕನಿಗೆ ಕೊಟ್ಟ ಲೆಕ್ಕ ಎಂಟು ರೂಪಾಯಿ ಇನ್ನು ಹನ್ನೆರಡು ರೂಪಾಯಿನಲೆಕ್ಕ ತೋರಿಸುವುದು ಯಾವ ಮಹಾದೊಡ ವಿಷಯ. ಪುಸ್ತಕಗಳಿಗೆ ಹನ್ನೆರಡು ಸಾಕೆನ್ನುವ ಹಾಗಿರಲಿಲ್ಲ. ಲೆಕ್ಕ ವೆಷ್ಟುಬೇಗ ತಯಾರಾಯಿತೋ ದುಡ್ಡೂ ಅಷ್ಟೇ ಬೇಗ ತೀರಿಹೋಯಿತು. ಊರಿಗೆ ಕಾಗದ ಬರೆಯಲು ಒಂದೂವರಾಣೆ ಉಳಿದದ್ದೇ ಹೆಚ್ಚು.

ಸದಾಶಿವ, ಮಲ್ಲೇಶನನ್ನು "ಆಷ್ಟಲ್ಲಿ"ಗೆ ಸೇರಿಸಲು ಪ್ರಯತ್ನವ ನ್ನೇನೋ ಪಟ್ಟನು. ಆದರೆ ಅವನು ಯಾವ ದೊಡ್ಡಮನುಷ್ಯ? ಅದು ನಡೆಯಲಿಲ್ಲ. ಸದಾಶಿವ ಊಟಮಾಡುವ ಶಿವರಾಮಪೇಟೆಯ ಹೋಟಲಿ ನಲ್ಲೇ ಮಲ್ಲೇಶನಿಗೂ ಊಟಕ್ಕೆ ಗೊತ್ತುಮಾಡಲಾಯಿತು. ಮಲ್ಲೇಶ ಸದಾಶಿವನ ರೂಮಿನಲ್ಲೇ ಇರುವುದೆಂದೂ ಏರ್ಪಾಡಾಯಿತು. ಸ್ನಾನವೂ ಹೋಟಲಿನಲ್ಲಿಯೇ. ಬೆಳಿಗ್ಗೆಯ ಹೊತ್ತಿನ ತಿಂಡಿ ಬೇರೆ. ಒಟ್ಟು ತಿಂಗಳಿಗೆ ಹನ್ನೆರಡು ರೂಪಾಯಿಯೆಂದು ನಿಗದಿಯಾಯಿತು. ಹೋಟಲಿನ ಮಾಲೀ ಕಳಾದ ಸಿದ್ದವೀರಮ್ಮ, ಗುಜ್ಜಗೆರೆಯ ಬಟ್ಟಮ್ಮನ ಜಾತಿಯವಳೇ. ಅವ ಳಿಗೆ ತನ್ನ ಹೋಟಲ ಬಾಕಿಯನ್ನು ತನ್ನ ಹೊಲಸುನಾಲಿಗೆಯ ಸಹಾಯ ದಿಂದ ವಸೂಲು ಮಾಡಿಕೊಳ್ಳುತ್ತೇನೆಂಬ ಧೈರ್ಯ ಚೆನ್ನಾಗಿತ್ತು. ಅಂತೆಯೇ ಮಲ್ಲೇಶನಿಗೂ ತನ್ನ ತಾಯಿಂದ ತನಗೆ ಬೇಕಾಗಬಹುದಾದಷ್ಟು ಹಣ ವನ್ನು ತರಿಸಿಕೊಳ್ಳುತ್ತೇನೆಂಬ ನಂಬಿಕೆಯಿತ್ತು.

ನಾಲ್ಕು ದಿನಕ್ಕೆ ಅರ್ಧಸೇರು ಜೋಳದಂತೆ ವರ್ಷಕ್ಕೆ ಸುಮಾರು ಅರ ವತ್ತು ಸೇರು-ಬೇಡ ಒಂದು ಪಲ್ಲ ಜೋಳವಾದರೆ ತಾಯಕ್ಕನಿಗೆ ಬೇಕು ಬೇಕಾದಷ್ಟಾಗುತ್ತಿತ್ತು. ಇನ್ನುಳಿದ ಖರ್ಚಿಗೆ ವರ್ಷಕ್ಕೆ ನಲವತ್ತುರೂಪಾ ಯಿಗಳೆಂದು ಲೆಕ್ಕ ಹಾಕಿದ್ದಳು. ಇವೆರಡೂ ಅವಳ ಸ್ವಂತ ಖರ್ಚುಗಳು. ಕಂದಾಯ, ಆರಂಭದಕೂಲಿ, ಸಾಲದಬಡ್ಡಿ ಮೂರನ್ನೂ ಕಳೆದು ಉಳಿ ಯುವ ಸುಮಾರು ಇನ್ನೂರು ರೂಪಾಯಿಗಳನ್ನು ಮಗನಿಗೆ ಕಳುಹಿಸುವು ದೆಂದು ಮನಸ್ಸು ಮಾಡಿದ್ದಳು. ಆದರೆ ಮಲ್ಲೇಶ ಕೇಳುತ್ತಿದ್ದುದು ತಿಂಗ ಳಿಗೆ ಇಪ್ಪತ್ತೈದುರೂಪಾಯಿಗಳನ್ನು. ಮಲ್ಲೇಶ ಹಾಸ್ಟಲಿಗೆ ಸೇರಲೇಇಲ್ಲ. ಹೋಟಲಿನ ಊಟಕ್ಕೆ ಅವಕಾಶ ಕೊಟ್ಟು ವಿದ್ಯಾಭ್ಯಾಸಮಾಡಿಸುವ ಕಷ್ಟ

ತಾಯಕ್ಕನಿಗೆ ತಿಳಿಯದು. ಮಲ್ಲೇಶನೂ ಆ ಇಪ್ಪತ್ತೈದು ರೂಪಾಯಿಗಳನ್ನು ಒಟ್ಟಿಗೆ ಕೇಳುತ್ತಿರಲಿಲ್ಲ. ಹತ್ತು, ಆರು, ಮೂರಾಗಿ ತೆಗೆದುಕೊಳ್ಳುತ್ತಿದ್ದನು. ತಾಯಕ್ಕ ಕೆಂಪದೇವಿಯ ಗಂಡ ಕೆಂಪಣ್ಣನಿಗೆ ಒಂದು ಕಾಗದ ಬರೆದು, ಮೈಸೂರು ಹೋಟಲಿನ ಊಟಕ್ಕೆ ಎಷ್ಟಾಗುವುದೆಂಬ ಸಮಾಚಾರವನ್ನು ಕೇಳಿದ್ದಳು. ಅವನು ದೊಡ್ಡದೊಂದು ಹೋಟಲಿನಲ್ಲಿ ವಿಚಾರಿಸಿ ಮೂವತ್ತು ಎಂದು ಬರಸಿದ್ದನು. ಮಲ್ಲೇಶನು ಕೆಂಪಣ್ಣನ ಮನೆಯಲ್ಲಿ ಇದ್ದುಕೊಂಡು ಓದಲು ಸಾಧ್ಯವೇ ಎಂದು ಕೆಂಪಣ್ಣನನ್ನೂ, ಮಲ್ಲೇಶನನ್ನೂ ಕೇಳಿದ್ದಳು. ಕೆಂಪಣ್ಣನಿಗೆ ಮಲ್ಲೇಶನ ನಡವಳಿಕೆ ಮತ್ತು ಸ್ನೇಹಿತರ ವಿಷಯದಲ್ಲಿ ಬೇಸರ ಬಂದಿತ್ತು. ಆದರೂ ತಾಯಕ್ಕನಿಗೆ "ಆಗಲಿ" ಎಂದುತ್ತರ ಬರೆಸಿದ್ದನು. ಆದರೆ ಮಲ್ಲೇಶ ಮೊಳದುದ್ದ ಕಾಗದ ಬರೆದು ಅಲ್ಲಿ ಅನುಕೂಲವಿಲ್ಲವೆಂದು ಎಗರಾಡಿದ್ದನು.

ತಾಯಕ್ಕ ಏನು ಮಾಡಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿಯೇ ಮಲ್ಲೇಶ ಊರಿಗೆಬಂದು, ತಾಯಿ ತನ್ನ ಇಷ್ಟಪ್ರಕಾರ ತಿಂಗಳಿಗೆ ಇಪ್ಪತ್ತೈದು ರೂಪಾಯಿಗಳನ್ನು ಕಳಿಸದಿದ್ದರೆ ತಾನು ಓದುವುದನ್ನು ನಿಲ್ಲಿಸಿಬಿಡುತ್ತೇನೆಂದೂ, ಇನ್ನೊಬ್ಬರ ಮನೆಯಲ್ಲಿ ತಾನಿದ್ದುಕೊಂಡು ಓದಲು ಆಗುವುದಿಲ್ಲವೆಂದೂ ಕಡ್ಡಾಯವಾಗಿ ಹೇಳಿಬಿಟ್ಟನು. ತಾಯಕ್ಕನು ಮನೆಯ ಹೀನಸ್ಥಿತಿಯನ್ನು ಎಷ್ಟು ವಿಧವಾಗಿ ವರ್ಣಿಸಿದರೂ ಅವನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಆಗ ಸ್ಕೂಲಿಗೆ ರಜಬಂದುಬಿಟ್ಟಿದ್ದರೂ ಸಹ ಮೈಸೂರಿಗೆ ಹೊರಟುನಿಂತನು. ಪರೀಕ್ಷೆ ಇನ್ನೂ ಮುಂದೆ ಇದ್ದರೂ ಆಗಿಹೋಯಿತೆಂದೂ "ಪಾಸೂ–ಫೇಲೂ" ಇನ್ನೊಂದೆರಡು ದಿವಸಗಳಲ್ಲಿ ತಿಳಿಯುವುದೆಂದೂ ಹೇಳಿ ಪ್ರಯಾಣದ ಸಡಗರದಲ್ಲಿ ತೊಡಗಿದನು. ತಾಯಕ್ಕ ಇಷ್ಟಾದರೂ ಇನ್ನೂ ಮಗನಮೇಲಿನ ನಂಬಿಕೆ ಹೋಗಿರಲಿಲ್ಲವಾದ್ದರಿಂದ, ಅದನ್ನೆಲ್ಲಾ ವಿಚಾರಿಸಲು ಪ್ರಯತ್ನಪಡಲೇ ಇಲ್ಲ. ಬದಲಾಗಿ ಎಮ್ಮೆಯನ್ನು ಮಾರಿ ಕೊನೆಯದಾಗಿ ಉಳಿದಿದ್ದ ಹತ್ತು ರೂಪಾಯಿಗಳನ್ನು ಮಗನ ಕೈಯಲ್ಲಿ ಹಾಕಿದಳು. ಮಲ್ಲೇಶ ಎಷ್ಟು ಹೊತ್ತಿಗೆ ಬಸ್ಸನ್ನು ಹತ್ತಿ ಕುಳಿತು ಒಂದು ಸಿಗರೇಟು ಹಚ್ಚುವೆನೋ ಎಂಬ ತವಕದಲ್ಲಿದ್ದುದರಿಂದ, ಅವನಿಗೆ ಎಮ್ಮೆ ಇಲ್ಲವಾದ

ಸಂಕಟವಾಗಲಿ, ಸಾಲವು ದಿನೇ ದಿನೇ ಅಭಿವೃದ್ಧಿಯಾಗುತ್ತಿರುವುದೇ ಆಗಲಿ ಲಕ್ಷ್ಯಕ್ಕೇ ಬರಲಿಲ್ಲ. ಮೊದಲು ತಾಯಿಯಿಂದ ಕಣ್ಮರೆಯಾದರೆ ಸಾಕೆಂದು ಎಲ್ಲಕ್ಕೂ ' ಹ್ಞು ' ಎಂದು ಹೊರಟುಹೋದನು.

ತೆಂಕಳ್ಳಿಯ ಬೂರುಗದ ಕಟ್ಟೆ ಸಿಕ್ಕುವವರೆಗೂ ಮಲ್ಲೇಶ ಬಿಗಿಹಿಡಿದಿದ್ದನು. ಕಟ್ಟೆಯಮೇಲೆ ಕುಳಿತ ತಕ್ಷಣ ಒಂದು ಸಿಗರೇಟನ್ನು ಹಚ್ಚಿ ಹೀರಿದನು. ಕಣ್ಣು ಮೂಗು ಬಾಯಿ ಕಿವಿಗಳಲ್ಲೆಲ್ಲಾ ಹೊರಡಿಸುವವನಂತೆ ದಟ್ಟವಾಗಿ ಹೊಗೆಬಿಟ್ಟನು. ಮೂರುದಿನಗಳವರೆಗೆ ತಡೆದಿದ್ದುದು ಜೀವವೇ ಅವನಲ್ಲಿಲ್ಲದೇ ಹೊರಟುಹೋಗಿದ್ದಂತಿತ್ತು. ಹತ್ತಾರುಬಾರಿ ಎದೆತುಂಬ ಬಿಸಿಹೊಗೆಯನ್ನು ತುಂಬಿ ಹೊರಬಿಟ್ಟಮೇಲೆ ಮನಸ್ಸು ಸ್ವಲ್ಪ ಹತೋಟಿಗೆ ಬಂದಿತು. ಊರಿನ ಚಿಂತೆಗಳನ್ನೆಲ್ಲಾ ಒಂದುಕಡೆ ಗಂಟುಕಟ್ಟಿ ಎತ್ತಿಟ್ಟಿದ್ದಾಯಿತು. ಬರಲಿರುವ ಬಸ್ಸಿನ ಯೋಚನೆಯ ಮಾರ್ಗದಲ್ಲಿ ಮೈಸೂರಿನ ಯೋಚನೆ ಬಂದಿತು. ಮಲ್ಲೇಶ ನಿಜವಾಗಿಯೂ ತಾಯಕ್ಕನಿಗೆ ಹಿಂಸೆ ಕೊಟ್ಟು ಮೈಸೂರಿನಲ್ಲಿ ಸುಖವಾಗಿ ಮಾತ್ರ ಇರಲಿಲ್ಲ. ಅವನಿಗೆ ಓದು ಬರಹಗಳು ಹಿಡಿಸುವ ಮಟ್ಟಿಗೆ ಕಾಣುತ್ತಿರಲಿಲ್ಲ. ಅವನ ಕೈಗೆ ಬರುತ್ತಿದ್ದ ಹಣ ಸಾಲುತ್ತಿರಲಿಲ್ಲ. ಸಿದ್ದವೀರಮ್ಮನಿಗೆ ಬಾಕಿ ಕೊಡುವುದಿತ್ತು. ಅವಳು ಬಾಯಲ್ಲಿ ಕಟುವಾಗಿ ಅನ್ನುತ್ತಿದ್ದಳೇ ಹೊರತು ಕೈಯಲ್ಲಿ ಅನ್ನವಿಡುವುದನ್ನು ನಿಲ್ಲಿಸುತ್ತಿರಲಿಲ್ಲ.

ಸಿದ್ದವೀರಮ್ಮನ ಬಿಸಿಮಾತುಗಳನ್ನುಕೇಳಲಾರದೇ ಅಲ್ಲಿಗೆ ಊಟಕ್ಕೆ ಹೋಗುವುದನ್ನು ಆಗಾಗ್ಗೆ ಬಿಡುತ್ತಿದ್ದುದುಂಟು. ಆ ಹೊತ್ತುಗಳಲ್ಲಿ ಬೇರೆಯ ಹೋಟಲುಗಳ ತಿಂಡಿಗೆ ಕಾಸು ಬೇಕಾಗುತ್ತಿತ್ತು. ಸ್ನೇಹಿತರು ಕೊಡಿಸಿದರೂ ಇನ್ನೊಂದು ದಿವಸ ಅವರಿಗೆ ತಾನು ಕೊಡಿಸಬೇಕಷ್ಟೆ. ಎಷ್ಟು ಹೊತ್ತು ಊಟ ತಪ್ಪಿದರೂ ಸಿದ್ದವೀರಮ್ಮ ತಿಂಗಳಲೆಕ್ಕದಲ್ಲಿ ಕಮ್ಮಿಮಾಡುತ್ತಿರಲಿಲ್ಲ. ಕೈಗೆ ಬರುತ್ತಿದ್ದ ದುಡ್ಡನ್ನೇ ಎದುರುನೋಡುತ್ತಿದ್ದ ಸಿನಿಮಾ, ಸಿಗರೇಟು ಹೊಟೇಲು ತಿಂಡಿಗಳ ಲೆಕ್ಕಗಳು ಬಂದು ಆದುಡ್ಡಿನ ಮೇಲೆ ಬಿದ್ದು ಹೀರಿಕೊಳ್ಳುತ್ತಿದ್ದವು. ಮರಳಿನಮೇಲೆ ಎಣ್ಣೆ ಬಿಟ್ಟಂತಾಗುತ್ತಿತ್ತು

ಯಾರಾದರೂ ನೂರುರೂಪಾಯಿ ಸಾಲವಾಗಿ ಕೊಟ್ಟರೆ ಎಲ್ಲವನ್ನೂ ತೀರಿಸಿ ಸಿದ್ಧವೀರಮ್ಮನವರಿಗೆ ತಲುಪಿಸಬಹುದಾಗಿತ್ತೆನಿಸಿತವನಿಗೆ.

ನೂರು ರೂಪಾಯಿ ಸಾಲ ! ಮೈಸೂರಿನಲ್ಲಿ ಸಿಕ್ಕುವಮಟ್ಟಿಗೆ ಇರಲಿಲ್ಲ. ಗುಜ್ಜಗೆಥೆ ಚಿಕ್ಕಲಿಂಗಪ್ಪನವರನ್ನೇ ಕೇಳೋಣವೆಂದು ಒಂದುಬಾರಿ ಮಲ್ಲೇಶನಿಗೆ ಅನ್ನಿಸುತ್ತಿತ್ತು. ತಂದೆತಾಯಿಗಳು ಮಾಡಿರುವ ಸಾಲವನ್ನು ಎಂದಿದ್ದರೂ ತಾನೇ ತೀರಿಸಬೇಕಾಗಿರುವುದರಿಂದ ತನಗೋಸ್ಕರ ಒಂದಷ್ಟು ಹಣವನ್ನೇಕೆ ತೆಗೆದುಕೊಳ್ಳಬಾರದೆಂದನು. ಈ ಬಾರಿ ಕಿರೀಕಾಟಿಗೆ ಹೋಗಿದ್ದುದಕ್ಕೆ ಬದಲಾಗಿ ಗುಜ್ಜಗೆರೆಗೇ ಹೋಗಿ ಚಿಕ್ಕಲಿಂಗಪ್ಪನವರನ್ನು ಕೇಳಿ ನೋಡಬೇಕಾಗಿತ್ತೆಂದುಕೊಂಡನು. ಅಕ್ಕನನ್ನು ನೋಡುವ ನೆಪ ಇದ್ದೇ ಇತ್ತು. ನೂರು ರೂಪಾಯಿನ ವಿಷಯವೇ ಅಲ್ಲದೆ, ಚಿಕ್ಕಲಿಂಗಪ್ಪನವರು ತಮ್ಮ ತಾಯಿಗೆ ಒಟ್ಟು ಎಷ್ಟು ರೂಪಾಯಿ ಸಾಲ ಕೊಟ್ಟಿದ್ದಾರೆಂಬುದನ್ನು ತಿಳಿಯಬೇಕೆಂಬ ಉದ್ದೇಶವೂ ಮಲ್ಲೇಶನಿಗಿತ್ತು.

ಇನ್ನೊಂದು ತಿಂಗಳು ಮೈಸೂರಿನಲ್ಲಿ ಹೇಗೋ ಕಳೆದನು. ಅವನಿಗೆ ವಿದ್ಯಾಭ್ಯಾಸ ಇನ್ನು ಸಾಕೆನ್ನಿಸಿಬಿಟ್ಟಿತ. ಆದರೆ ತನ್ನ ತಾಯಿಗೆ ತಿಳಿಯುವಂತೆ ತಾನು ಓದುವುದನ್ನು ನಿಲ್ಲಿಸಿಬಿಡುವುದಕ್ಕೆ ಸಾಧ್ಯವಿರಲಿಲ್ಲ. ವಾರಕ್ಕೊಂದುಬಾರಿ ತಾಯಿಗೆ ಕಾಗದ ಬರೆದು ತನ್ನ ಪಾಂಡಿತ್ಯದ ಅಭಿವೃದ್ಧಿಯ ಬಗ್ಗೆ ವರದಿಯೊಪ್ಪಿಸಲೇಬೇಕಾಗಿತ್ತು.

ಎಷ್ಟು ದಿವಸ ಹೀಗೆ ತಾಯಿಗೆ ಮೋಸ ಮಾಡುತ್ತಿರಲು ಸಾಧ್ಯ ? ತಾಯಿಗೆ ಯಾವಾಗ, ಹೇಗೆ, ತನ್ನ ಕೈಲಿ ಓದುವುದಕ್ಕಾಗುವುದಿಲ್ಲವೆಂದು ಹೇಳುವುದು ? ಎಂಬ ಪ್ರಶ್ನೆಗಳಿಗೆ ಮಲ್ಲೇಶ ಉತ್ತರ ಹುಡುಕುತ್ತಲೇ ಇದ್ದನು. ಸಮಾಧಾನಕರವಾದ ಉತ್ತರವೇ ಸಿಗುತ್ತಿರಲಿಲ್ಲ. ಮೈಸೂರನ್ನು ಬಿಟ್ಟು ಕಿರೀಕಾಟಿಗೆ ಹಿಂದಿರುಗುವ ಯೋಚನೆಯಂತೂ ಮಲ್ಲೇಶನಿಗೆ ಸಹಿಸುವುದಕ್ಕೆ ಆಗುತ್ತಿರಲಿಲ್ಲ. ಮೈಸೂರಿನಲ್ಲಿಯೇ ಇದ್ದುಕೊಳ್ಳಬೇಕಾದರೆ ತಾಯಿಯ ಸಹಾಯವಿಲ್ಲದಿದ್ದರೆ ಸಾಧ್ಯವಿರಲಿಲ್ಲ.

ಇದಕ್ಕೇನು ಮಾಡಬೇಕು ಎಂದು ಮಲ್ಲೇಶ ಸದಾಶಿವನನ್ನು ಕೇಳಿದನು. ಸದಾಶಿವ ಬಹಳ ಯೋಚನೆ ಮಾಡಿ ತನ್ನ ಪರಿಹಾರವನ್ನು ಕಂಡು

ಹಿಡಿದನು. ಇನ್ನೊಂದಷ್ಟು ದುಡ್ಡನ್ನು ಎಲ್ಲಿಂದಲಾದರೂ ಹೊಂಚಿಕೊಂಡು ಲಂಚಕೊಟ್ಟು ಲೋವರ್ ಸೆಕೆಂಡರಿ ಪರೀಕ್ಷೆಯ ಪ್ರಶ್ನೆಗಳನ್ನು ಗುಟ್ಟಾಗಿ ತರಿಸಿಕೊಂಡು ಅವುಗಳಿಗೆ ಉತ್ತರವನ್ನು ಉರು ಹಾಕಿ ಪರೀಕ್ಷೆಯಲ್ಲಿ ಪಾಸು ಮಾಡುವುದು. ಸದಾಶಿವನಿಗೆ, ಲಂಚಕೊಟ್ಟರೆ ಪ್ರಶ್ನೆಗಳು ಸಿಕ್ಕುತ್ತವೆ ಎಂಬ ಬಗ್ಗೆ ಬಹಳ ವಿಶ್ವಾಸವಿತ್ತು. ಲೋವರ್ ಸೆಕೆಂಡರಿ ಪರೀಕ್ಷೆಯೊಂದು ಪಾಸಾದರೆಅಲ್ಲಿಂದ ಮುಂದೆ ಮೂರು ವರ್ಷಗಳನ್ನು ಹೇಗಾದರೂ ಓದಿ ಕಳೆಯಬಹುದು ಎಂಬುದೂ ಅವನ ನಂಬಿಕೆ. ಪ್ರಶ್ನೆಗಳ ಖರೀದಿ ಎಷ್ಟು ಎಂದು ಮಲ್ಲೇಶ ಕೇಳಿದ್ದಕ್ಕೆ ತಿಳಿದವನಂತೆಯೇ ಹೇಳಿದ. ಒಂದೊಂದು ಪ್ರಶ್ನೆ ಪತ್ರಿಕೆಗೆ ಐವತ್ತೈವತ್ತು ರೂಪಾಯಿಗಳಾಗುತ್ತವೆ ಎಂದ ಸದಾಶಿವನ ಮಾತಿನಲ್ಲಿ ಮಲ್ಲೇಶನಿಗೆ ನಂಬಿಕೆ ಬಂದರೂ ಅವನು ಹೇಳುವಷ್ಟು ದುಡ್ಡನ್ನು ಒದಗಿಸಿಕೊಳ್ಳುತ್ತೇನೆಂಬ ನಂಬಿಕೆ ಮಾತ್ರ ಬರಲಿಲ್ಲ. ಹಾಗೆ ಪಾಸು ಮಾಡಿದರೂ ಮುಂದಕ್ಕೆ ಓದಬೇಕಲ್ಲ ; ಅದು ಯಾರಿಂದಾದೀತು ಎಂಬ ಬೇಸರ. ವಿಠಲ ಹಾಗೆ ಮಾಡುತ್ತಿದ್ದಾನೆ ಎಂದು ಸದಾಶಿವ ವಾದಿಸುತ್ತಿದ್ದ.

ತಾನು ಹಾಗೆ ಮಾಡುವುದು ಅಸಾಧ್ಯವೆಂದು ಅರಿತಿದ್ದರೂ ಮಲ್ಲೇಶನಿಗೆ ಅದರ ಬಗ್ಗೆ ತನಿಖೆ ನಡೆಸಬೇಕೆನ್ನಿಸಿತು. ವಿಠಲ ತುಂಬ ಅನುಕೂಲಸ್ಥರ ಮನೆಯ ಹುಡುಗ. ಅವನು ಕ್ಲಾಸಿನಿಂದ ಕ್ಲಾಸಿಗೆ ಹೋಗುತ್ತಿದ್ದುದು ಅವನ ಐಶ್ವರ್ಯ ಪ್ರಭಾವದಿಂದಲೇ ಎಂದು ಊಹಿಸಬಹುದಾಗಿತ್ತು. ಅವನು ಸ್ಕೂಲಿಗೆ ಬರುತ್ತಿದ್ದುದು ತನ್ನ ವೈವಿಧ್ಯಪೂರ್ಣವಾದ ಉಡುಪುಗಳನ್ನು ಮೆರವಣಿಗೆ ಮಾಡಲು ಕ್ಲಾಸಿನಲ್ಲಿ. ಯಾವ ಮೇಷ್ಟ್ರು ಅವನನ್ನು ಒಂದು ಪ್ರಶ್ನೆಯನ್ನೂ ಕೇಳುತ್ತಿರಲಿಲ್ಲ. ಅವನು ತರುತ್ತಿದ್ದ ಎಲ್ಲಾ ಪುಸ್ತಕಗಳೂ ಯಾವಾಗಲೂ ಹೊಸದಾಗಿಯೇ ಕಾಣುತ್ತಿದ್ದವು. ಸ್ವಲ್ಪವೂ ಕೊಳೆಯಾಗುತ್ತಿರಲಿಲ್ಲ. ಅವುಗಳನ್ನು ಸೈಕಲ್‌ನ ಕ್ಯಾರಿಯರ್ ಗೆ ಒಂದು ಮಡಿಯಾದ ಕರ್ಚೀಫಿನಲ್ಲಿ ಕಟ್ಟಿಕೊಂಡು ಸ್ಕೂಲಿಗೆ ಬಂದರೆ ಅವುಗಳನ್ನು ಎದುರಿಗಿಟ್ಟುಕೊಂಡು ಕೂಡುತ್ತಿದ್ದುದೆಷ್ಟೋ ಅಷ್ಟೆ. ಪುನಃ ಅದನ್ನು ಎತ್ತಿಕೊಂಡು ಹೋಗಿ ಸೈಕಲ್ಲಿನ ಕ್ಯಾರಿಯರ್ರಿಗೆ ಕಟ್ಟಿದರೆ ಮನೆಯ ಪುಸ್ತಕದ 'ಷೆಲ್ಫ್'

ಗೆ ಸೇರಿಕೊಳ್ಳುತ್ತಿದ್ದುವು. ಎಂದರೆ ವಿಠಲ 'ಅಲಂಕಾರ ವಿದ್ಯಾರ್ಥಿ' ಎಂಬು ದರ ಉದಾಹರಣೆ.

ವಿಠಲ ಮಲ್ಲೇಶನ ಪರಿಚಯಕ್ಕೆ ಬಂದುದು ಸದಾಶಿವನಿಂದಲೇ. ಭಾನುವಾರದ ದಿನಗಳಲ್ಲಿ ಸದಾಶಿವನ ರೂಮಿನಲ್ಲಿ 'ಜಾಕಿ' ಆಟಕ್ಕೆ ಹುಡು ಗರು ಸೇರುತ್ತಿದ್ದ ಪದ್ಧತಿ. ಅಲ್ಲಿಗೆ ವಿಠಲನು ಬರುತ್ತಿದ್ದನು. ಬಂದಾಗ ಸಾಮಾನ್ಯವಾಗಿ ಸೇರಿದ್ದವರೆಲ್ಲರಿಗೂ ಅವನ ಕೈಯ್ಯಿಂದಲೇ ತಿಂಡಿ ಕಾಫಿ ಯಾಗುತ್ತಿತ್ತು. ಅವನು ಹೇಳಿದಂತೆ ಆಟದ ನಿಯಮಗಳು ಬದಲಾಯಿಸಿ ಕೊಳ್ಳುತ್ತಿದ್ದವು. ಅವನು ಸೋತರೂ ಆಟವನ್ನು ಬಲು ಚೆನ್ನಾಗಿ ಆಡುತ್ತಾ ನೆಂಬ ಬಿರುದು ಅವನಿಗೆ ಸಲ್ಲಬೇಕಾಗಿತ್ತು. ಅದರಿಂದ ಎಲ್ಲರಿಗೂ ಲಾಭ ವಿತ್ತು. ಅವನ ಬಟ್ಟೆಬರೆಗಳಿಗೆ, ರೂಪಕ್ಕೆ, ಅವನ ಮೈಯಿನ ಸುಗಂಧಕ್ಕೆ ಎಲ್ಲರ 'ಕರುಬೂ' ಇತ್ತು. ಮಲ್ಲೇಶನೂ ಅವನಂತೆ ತನ್ನನ್ನೇಕೆ ಕಿಡಬಾರದೆಂ ದು ದೇವರನ್ನು ಅನೇಕ ಬಾರಿ ನಿಂದಿಸಿದ್ದನು.

ಆ ಭಾನುವಾರ ಆಟಕ್ಕೆ ಸರಿಯಾಗಿ ಜನ ಸೇರದಿದ್ದುದರಿಂದ ವಿಠಲನು ಸದಾಶಿವ, ಮಲ್ಲೇಶ ಇಬ್ಬರನ್ನೂ 'ಸಿನಿಮಾ' ಕ್ಕೆ ಕರೆದನು. ಇಬ್ಬರೂ ತಮ್ಮ ಬಳಿ ಕಾಸಿಲ್ಲವೆಂದರು. ವಿಠಲ ತಾನು ಕರೆದುಕೊಂಡು ಹೋಗುವುದಾಗಿ ಹೇಳಿದರೂ ಅದೇಕೋ ಸದಾಶಿವ ಒಪ್ಪಲಿಲ್ಲ. ಇನ್ನೊಂದು ದಿನ ಸಿನಿಮಾಕ್ಕೆ ಹೋಗುವುದೆಂದೂ ಈ ದಿವಸ ವಿಠಲ ತನ್ನ ಜೊತೆಯಲ್ಲಿ ಒಂದು ಕಡೆಗೆ ಬರಬೇಕೆಂದೂ, ಮಲ್ಲೇಶ ರೂಮಿನಲ್ಲಿಯೇ ತನ್ನ ಯಾರೋ ಒಬ್ಬ ಸ್ನೇಹಿತ ನನ್ನು ಕಾದಿರಬೇಕೆಂದೂ ಹೇಳಿದನು. ಆ ಭಾನುವಾರ ಅದರಂತೆಯೇ ನಡೆಯಿತು. ಆದರೆ ಅದರ ಮುಂದಿನ ಭಾನುವಾರ ವಿಠಲ ತಾನಾಗಿ ಆಟವನ್ನು ಬೇಡವೆಂದು ಹೇಳಿ ಮಲ್ಲೇಶನನ್ನು ಜೊತೆಯಲ್ಲಿ ಕರೆದುಕೊಂಡು ಹೊರಗೆ ಹೊರಟನು.

ಬೆಳ್ಳಿಗೆ ಸಿದ್ಧವೀರಮ್ಮನ ಅನ್ನ ಸೊನ್ನೆಯಾಗಿದ್ದುದರಿಂದ ವಿಠಲ ಕೊಡಿಸಿದ ತಿಂಡಿ, ಕಾಫಿಗಳು ವಿಠಲನಿಗೆ ಆಪ್ಯಾಯಮಾನವಾಗಿತ್ತು. ಅಲ್ಲಿಂ ದ 'ಅಪೇರಾ'ಕ್ಕೆ ಹೋದರು. ಚಿತ್ರ ಪ್ರಾರಂಭವಾಗಿ ಆಗಲೇ ಹತ್ತು ನಿಮಿಷ ಗಳಾಗಿರುವುದಾಗಿ ತಿಳಿದುಬಂದು ಚಿತ್ರವೇ ಬೇಡವೆಂದುಕೊಂಡು ಅಪೇರಾ

ಟಾಕೀಸಿನ ಎದುರಾಗಿರುವ ಕೋಟೆಯ ಒತ್ತಿನ ಪಾರ್ಕಿಗೆ ಹೋಗಿ ಕುಳಿತರು. ಇಬ್ಬರಿಗೂ ಪರಸ್ಪರ ಹೇಳಿಕೊಳ್ಳಬೇಕಾದ ವಿಷಯಗಳಿದ್ದಂತಿತ್ತು. ಮೊದಲಾಗಿ ವಿಠಲನೇ ಮೊದಲು ಮಾಡಿದನು.

'ಹೋದ ಭಾನುವಾರ ನಿನ್ನ ಬಿಟ್ಟುಬಿಟ್ಟು ಹೋದದ್ದು ತಪ್ಪಾಯ್ತು ಮಲ್ಲೇಶ. ನೀನೂ ಜೊತೇಲಿದ್ದಿದ್ರೆ ಚೆನ್ನಾಗಿತ್ತು.'

'ಅದ್ಯಾಕೋ ಸದಾಶಿವ, ನನ್ನ ರೂಮಿನಲ್ಲೇ ಕುಕ್ಕಾಕಿ, ಹೊರಟುಬಿಟ್ಟ. ನನಗೆ ಭಾಳ ಬೇಜಾರಾಗ್ಹೋಯ್ತಪ್ಪ. ಎಲ್ಲಿ ಹೋಗಿದ್ರಿ ? '

'ಯಾರಿಗೂ ಹೇಳಬಾರದು, ಅಂಥಾ ಕಡೇಗೆ ಹೋಗಬೇಕಾಗಿ ಬಂತು ಮಲ್ಲೇಶ. ಯಾರಿಗೂ ಹೇಳಬಾರದೂ ಅಂತ ಇದ್ರೂ ನಿನಗೆ ಹೇಳಬೇಕು ಅನ್ನಿಸ್ತಾ ಇದೆ. ನೀನು ಆಗ ನನ್ನಜೊತೇಲಿದ್ದಿದ್ರೆ ನಾವು ಅಲ್ಲಿಗೆ ಹೋಗ್ತಾ ಇರ್ಲಿಲ್ಲ'

" ಹೇಳಬೇಕೂ ಅನಿಸ್ತಾ ಇದೆಯಲ್ಲ ಹೇಳೋದು ತಾನೆ ?"

" ನಾವು ಆವತ್ತು ಟೌನ್‌ಹಾಲಿನ ಕಡೆ ಬಂದೆವು. ಸದಾಶಿವ ದೊಡ್ಡ ಪೇಟೆ ಕಡೆ ಹೊರಟ. ನಾನೂ ಹೊರಟೆ. ಅಲ್ಲಿ ಒಂದು ಗಲ್ಲಿಯ ಕಡೆಗೆ ತಿರುಗಿದ ನಾನೂ ತಿರುಗಿದೆ. ಒಂದೆರಡು ಮನೆಗಳು ಕಳೆದಮೇಲೆ ಒಂದು ಮನೆಯ ಜಗುಲಿಯಮೇಲೆ ನಿಂತಿದ್ದ ಹುಡುಗಿ ನಮ್ಮನ್ನು ನೋಡಿ ಸಣ್ಣಗೆ ನಗುತ್ತಾ ಒಳಕ್ಕೆ ಹೋಯಿತು. ಸದಾಶಿವ ಒಳಕ್ಕೆ ನುಗ್ಗೇಬಿಟ್ಟ. ನಾನು ಹೊರಗೇ ನಿಂತರೂ ಬಿಡಲಿಲ್ಲ. ನನ್ನೂ ಒಳಕ್ಕೆ ಎಳೆದ. ನನಗೆ ಬಲು ಭಯವಾಗ್ಹೋಯ್ತು ಮಲ್ಲೇಶ, ಆದರೇನು ಮಾಡಲಿ, ಸದಾಶಿವ ಹೇಳಿದಹಾಗೆ ಕೇಳಲೇಬೇಕಾಯ್ತು, ಕೇಳಿಬಿಟ್ಟೆ."

ಮಲ್ಲೇಶನ ಎದೆ ಬಿರಿಯುವಷ್ಟು ಈ ಮಾತಿನಿಂದ ಹೆದರಿಕೆಯುಂಟಾಯಿತು. ಅವನಿಗೆ ಏನು ಮಾತನಾಡಬೇಕೆಂಬುದೇ ತಿಳಿಯಲಿಲ್ಲ. ಪುನಃ ವಿಠಲನೇ ಕೇಳಿದ.

" ಏನು ಯೋಚನೆ ಮಾಡ್ತಾ ಇದೀಯೆ ಮಲ್ಲೇಶ. ನನ್ನ ಸಹವಾಸ ಕೆಟ್ಟದೂಂತ್಴ಲೇ ?"

" ನನಗೇನೂ ಗೊತ್ತಾಗ್ತಾ ಇಲ್ಲ ವಿಠಲ್. ಇಂತಹ ವಿಷಯಾನೇ ಯೋಚನೇ ಮಾಡ್ತೋನಲ್ಲ ನಾನು."

" ನಾನೂ ಹಾಗೇನೇ ಮಲ್ಲೇಶ. ಇನ್ನುಮೇಲೆ ನೀನು ಯಾವಾಗಲೂ ನನ್ನ ಜೊತೇಲಿದ್ದುಬಿಡು. ಸದಾಶಿವ ಒಬ್ಬನೇ ಇರುವಾಗ ನಾನವನ ಜೊತೆಗೆ ಸೇರೋಹಾಗಾಗಬಾರದು. ಮನಸ್ಸು ಎಷ್ಟೇ ಬಿಗಿಹಿಡಿದಿದ್ದರೂ ಈ ಹಾಳು ಕಾಲು ಅವನ ಹಿಂದೆಹಿಂದೆ ಹೊರಟ್ಹೋಗ್ಬಿಡುತ್ತೆ. ಅದಕ್ಕೆ ಇದೇ ಉಪಾಯ. ಸದಾಶಿವ ನನ್ಜೊತೇಲಿರೂವಾಗಲೆಲ್ಲಾ ನೀನೂ ಜೊತೇಲಿರು, ಅಷ್ಟೇ ನಾನು ಕೇಳ್ಕೊಳೋದು.''

" ಅದು ಯಾವ ಮಹಾ ಬಿಡು ವಿಠಲ್—ಹಾಗೇ ಆಗಲಿ.''

ಎಂದು ಮಲ್ಲೇಶ ಒಪ್ಪಿಕೊಂಡ. ಬಿಚ್ಚುಮಾತುಗಳನ್ನಾಡಿದ ವಿಠಲನನ್ನು ಮೆಚ್ಚಿಕೊಂಡ. ಅವನು ತನ್ನ ಅಂತರ್ಯದ ಮಾತುಗಳನ್ನು ಹೇಳಿದ ಮೇಲೆ ತನ್ನದನ್ನೂ ಹೇಳಿಕೊಳ್ಳಲು ಚೆನ್ನಾಯಿತು. ಮಲ್ಲೇಶ ತನ್ನ ಕಷ್ಟ ಸುಖಗಳನ್ನು ತೋಡಿಕೊಂಡನು. ಅದು ವಿಠಲನಿಗೆ ಅಲ್ಪವಾಗಿ ಕಂಡಿತು. ಅವನು ಒಂದೇ ಮಾತಿನಲ್ಲಿ ಮುಗಿಸಿಬಿಟ್ಟನು.

" ನಿಮ್ಮ ತಾಯಿ ದುಡ್ಡು ಕಳಿಸ್ದೇ ಇದ್ರೆ ಬೇಡ, ಸಾನಿರೋವರ್ಗೂ ನೀನು ಮೈಸೂರ್ಲೇ ಇರೋಹಾಗೆ ನೋಡ್ಕೊಳ್ಳೋದು ನನ್ನ ಭಾರ. ಬಿಡು ಮಲ್ಲೇಶ."

ಮಲ್ಲೇಶ ಅನುಮಾನಪಟ್ಟು ಮತ್ತೆ ಮತ್ತೆ ಕೇಳಿದ. ವಿಠಲನದು ಒಂದೇ ಮಾತು.

" ನಿನ್ನ ಖರ್ಚೆಲ್ಲ ನನಗಿರಲಿ, ನೀನು ನನ್ಜೊತೇಲಿರು ಸಾಕು ಮಲ್ಲೇಶ."

ಮಲ್ಲೇಶನಿಗೆ ವಿಠಲನಲ್ಲಿ ನಂಬಿಕೆ ಬಂತು. ಅವನಲ್ಲಿ ಇಷ್ಟು ದಿನ ಮಲ್ಲೇಶ ಭಾವಿಸಿಕೊಂಡಿದ್ದ ಅಹಂಕಾರ ಇಂದು ಲೇಶವೂ ಕಾಣಬಂದಿರಲಿಲ್ಲ. ವಿಠಲನು ಅಪೇಕ್ಷಿಸಿದ್ದ ತನ್ನ ಸ್ನೇಹಕ್ಕೆ ತಕ್ಕ ಸ್ನೇಹ ಪ್ರತಿಫಲಿಸುವುದೆಂದು ಮಲ್ಲೇಶನಿಗೆ ಧೃಡವಾಯಿತು.

" ವಿಠಲ್, ನಿಜವಾಗಲೂ ಇಷ್ಟುದಿನ ನಿನ್ನ ಕಂಡರೆ ನನಗೆ ಹೆದರಿಕೆ ಯಾಗ್ತಾ ಇತ್ತು. ನಿನ್ನ ಮನಸ್ಸು ಎಷ್ಟು ಮೆತ್ತಗಿದೆ ಅನ್ನೋದು ಇವತ್ತು ತಿಳಿದಹಾಗಾಯಿತು. ದುಡ್ಡಿರೋರೆಲ್ಲ ಕೆಟ್ಟವರೂ ಅಂತ ತಿಳ್ಕೊಂಡಿದ್ದ ನಾನು ಶುದ್ಧ ಮೂರ್ಖ."

ಆ ಮಾತಿನಿಂದ ವಿಠಲನಿಗೂ ಸಂತೋಷವಾಯಿತು. ಇಬ್ಬರ ಮನಸ್ಸಿನ ಭಾರವೂ ಕಳೆದಿತ್ತು. ದೂರದ 'ಯೂಕ್ಲಿಪ್ಟಿಸ್' ಮರಗಳನ್ನು ತೂರಿ ಬಂದ ಗಾಳಿ ಕಂಪಾಗಿ ತಂಪಾಗಿತ್ತು. ಆ ಗಾಳಿ ಅವರಿಬ್ಬರ ಮನಸ್ಸಿಗೂ ಉಲ್ಲಾಸವನ್ನು ತಂದುಕೊಟ್ಟುಹೋಯಿತು. ಹುಲ್ಲಿನಮೇಲೆ ಮಲಗಿದ್ದ ಅವರಿಗೆ ತಾವೂ ಆ ಗಾಳಿಯೊಡನೆ ತೂರಿಹೋಗುವೆವೋ ಏನೋ ಎನಿಸುವಂತಿತ್ತು. ಮೌನವಾಗಿ ಆ ಸೌಖ್ಯವನ್ನು ಕ್ಷಣಕಾಲ ಅನುಭವಿಸಿದರು. ಆ ಸೌಖ್ಯದಿಂದ ಅವರಲ್ಲಿದ್ದ ಯೋಚನೆಗಳೊಡನೆ ಹೊಟ್ಟೆಯಲ್ಲಿದ್ದುದೂ ಕರಗಿಹೋಗಿರಬಹುದು. ಪುನಃ ಅವರಿಬ್ಬರೂ ಕಾಫಿತಿಂಡಿಗೆ ಸಿದ್ಧರಾಗಿ ಎದ್ದರು. ಮಲ್ಲೇಶನ ಬೆನ್ನಿಗೆ ಹತ್ತಿದ್ದ ಹುಲ್ಲುಕಡ್ಡಿಗಳನ್ನು ವಿಠಲ ಕೊಡವಿದನು. ವಿಠಲನ ಬೆನ್ನನ್ನು ಮಲ್ಲೇಶ ಸವರಿದನು.

ಹತ್ತುಹನ್ನೆರಡು ದಿನಗಳ ವಿಠಲನ ಸಹವಾಸದಿಂದ ಮಲ್ಲೇಶನಿಗೊಂದು ಧೈರ್ಯ ಬಂದುಬಿಟ್ಟಿತ್ತು. ತಾನು ತಾಯಿಯ ಬೆಂಬಲವಿಲ್ಲದೇ ಮೈಸೂರಿನಲ್ಲಿರಬಲ್ಲೆನೆಂದು ಮಲ್ಲೇಶ ಆ ಬಾರಿ ತಾಯಕ್ಕನಿಗೆ ಕಾಗದ ಬರೆಯುವುದನ್ನೇ ಒಂದು ವಾರದಮಟ್ಟಿಗೆ ತಡಮಾಡಿಬಿಟ್ಟನು. ಅಲ್ಲಿ ತಾಯಕ್ಕ ಮಗನ ಯೋಗಕ್ಷೇಮಕ್ಕಾಗಿ ಚಡಪಡಿಸಿದಳು. ಆದರೆ ಅದು ಮಲ್ಲೇಶನಿಗೆ ಅಹಂಕಾರದ ವಿಷಯವಾಗಿತ್ತು. ತಾಯಿಗೂ ತನ್ನ ಯೋಗ್ಯತೆ ಇಷ್ಟೆಂಬುದು ಇದರಿಂದ ತಿಳಿಯುತ್ತದೆ ಎಂಬುದವನ ಆಲೋಚನೆ.

ವಿಠಲನ ಸ್ನೇಹಿತನನ್ನು ಒಂದೇಬಾರಿಗೆ ರೂಮಿನಿಂದ ಕಳುಹಿಸಿಬಿಡುವ ಧೈರ್ಯ ಸದಾಶಿವನಿಗೂ ಇರಲಿಲ್ಲ. ವಿಠಲ ಹೈಸ್ಕೂಲಿನ ಆರನೇ ತರಗತಿಯವನು. ಮಲ್ಲೇಶ ಮಿಡಲ್ ನಾಲ್ಕನೇ ತರಗತಿಯವನು. ಆದರೂ ಅವರಿಬ್ಬರೂ ಸ್ನೇಹಿತರು. ಮೂರುಹೊತ್ತೂ ಅವರಿಬ್ಬರೂ ಜೊತೆ. ವಿಠಲನ

ತರಗತಿಯವನೇ ಆದ ಸದಾಶಿವನಿಗೆ ಇದು ಸಹಿಸಲಾರದ ಸಂಗತಿ. ತರಗತಿ, ಸ್ನೇಹಗಳಿರಲಿ, ವಿಠಲನ ಜೊತೆಯಲ್ಲಿ ಕಳೆದುಹೋಗುತ್ತಿದ್ದ ಅವನ ಚಪಲ ಗಳು ಹಾಗೆಯೇ ಉಳಿದು ಅವನನ್ನು ಬಲು ಕಾಡಿಸುತ್ತಿದ್ದುವು.

ನಲವತ್ತೆಂಟು ರೂಪಾಯಿಗಳ ಪೈಕಿ ಸಿದ್ಧವೀರಮ್ಮನಿಗೆ ಮಲ್ಲೇಶ ಇಪ್ಪತ್ತು ರೂಪಾಯಿಗಳನ್ನು ತಲುಪಿಸಿದನು. ರಾಜೂ ಅಂಗಡಿಯ ಲೆಕ್ಕ ನಾಲ್ಕೂಮುಕ್ಕಾಲನ್ನು ಪೂರ್ತಿ ತೀರಿಸಿದ್ದಾಯಿತು. ಸೈಕಲ್ ಷಾಪ್ ಷುಕ್ಕೂರಿಗೆ ಆರು ರೂಪಾಯಿಗಳನ್ನು ಕೊಟ್ಟಾಯಿತು. ಮಲ್ಲೇಶನ ತಲೆಯ ಮೇಲಿನ ಭಾರ ಅರ್ಧ ಇಳಿದಂತಾಯಿತು. ಆದರೂ ವಿಠಲನನ್ನು ಎಷ್ಟೆಂದು ದುಡ್ಡನ್ನು ಕೇಳುತ್ತಲೇ ಇರಲು ಸಾಧ್ಯ. ತಾನು ಹಿಂದೆ ಆಲೋಚಿಸಿದ್ದಂತೆ ಗುಜ್ಜಗೆರೆಗೆ ಹೋಗಿ ಚಿಕ್ಕಲಿಂಗಪ್ಪನವರ ಬಳಿ ನೂರು ರೂಪಾಯಿಗಳ ಸಾಲ ವನ್ನು ಕೇಳುವುದೇ ಸರಿ ಎಂದು ಮಲ್ಲೇಶ ಮತ್ತೊಮ್ಮೆ ಮನಸ್ಸುಮಾಡಿ ಕೊಂಡನು. ವಿಠಲನಿಂದ ಎರಡು ದಿನಗಳ ಅನುಮತಿ ತೆಗೆದುಕೊಂಡು ಮಲ್ಲೇಶ ಗುಜ್ಜಗೆರೆಗೆ ಹೊರಟನು.

ತೆಂಕಳ್ಳಿಯ ಬಳಿ ಬಸ್ಸಿಳಿದು ಪೂರ್ವಕ್ಕೆ ಹೋಗುವುದಕ್ಕೆ ಬದಲಾಗಿ ದಕ್ಷಿಣದ ಕಾಲುಹಾದಿ ಹಿಡಿದು ಹೊರಟನು. ಆ ದಾರಿಗೆ ಎಡಕ್ಕೆ ಕಿರೀ ಕಾಟಿ ಆರೇಳು ಮೈಲಿಗಳ ದೂರದಲ್ಲಿದ್ದರೂ ಮಲ್ಲೇಶನಿಗೆ ಮನಸ್ಸಿನಲ್ಲಿ ಏನೋ ಒಂದು ಅಳುಕು. ಅಲ್ಲಿಂದಲೂ ಕಾಣಲಾಗುತ್ತಿದ್ದ ಕಿರೀಕಾಟಿಯ ಹತ್ತಿರದ ಗುಡ್ಡವೇ ಮಲ್ಲೇಶನಿಗೆ ತಾಯಕ್ಕನಂತೆ ತೋರುತ್ತಿತ್ತು. ಕಿರೀ ಕಾಟಿಗೆ ಹೋಗದೇ, ತಾಯಿಗೂ ಹೇಳದೇ ಸ್ವತಂತ್ರವಾದ ಕೆಲಸವೊಂದ ನ್ನಿಟ್ಟುಕೊಂಡು ಗುಜ್ಜಗೆರೆಗೆ ಹೋಗುತ್ತಿರುವ ಮಲ್ಲೇಶನಿಗೆ ಮುಂದಿನ ಪರಿ ಣಾಮದ ಬಗ್ಗೆ ಭಯವೇ ಇತ್ತು. ಆದರೆ ವಿಧಿಯಿಲ್ಲ, ನೂರು ರೂಪಾಯಿ ಗಳು ಸಿಕ್ಕದಿದ್ದರೆ ಅವನಿಗೆ ಮೈಸೂರಿನಲ್ಲಿ ನಿರಾಳವಿರುತ್ತಿರಲಿಲ್ಲ.

ಬಿಸಿಲು ಎಷ್ಟುಹೊತ್ತಿಗೆ ಊರನ್ನು ಕಂಡೇನೋ ಎನಿಸುವಂತೆಮಾಡು ತ್ತಿತ್ತು. ದಾರಿಯಲ್ಲಿ ಜನಗಳ ಸುಳಿವೇ ಇರಲಿಲ್ಲ. ಬರಿ ತಲೆಯ ಮಲ್ಲೇಶ ನಿಗೆ ನೆತ್ತಿ ಸುಡುತ್ತಿತ್ತು. ಹೆಜ್ಜೆ ವೇಗವಾಗುತ್ತಿತ್ತು. ಹೊಲವಾದಮೇಲೆ ಹೊಲ ಬಂದುಹೋಗುತ್ತಿತ್ತು. ನೀರಿಲ್ಲದಿದ್ದಾಗ ರಸ್ತೆಯಾಗುತ್ತಿದ್ದ ದೊಡ್ಡ

ಕಾಲುವೆಯಂತಿದ್ದ ಓಣಿಯೂ ಸಿಕ್ಕಿತು. ಅದು ಮುಗಿದು ಮೇಲಕ್ಕೆ ಹತ್ತಿದ ತಕ್ಷಣ ಗುಜ್ಜಗೆರೆಯು ಸಿಕ್ಕಿತು.

ಊರಬಾಗಿಲಿನಿಂದ ಎಡಗಡೆಯ ಆರನೆಯ ಮನೆಯೇ ಪಟೇಲರ ಮನೆ. ಪುಟ್ಟತಾಯಿಯ ಮನೆಗೇ ಮೊದಲು ಹೋಗಿದ್ದು ಆಮೇಲೆ ಬಂದು ಪಟೇಲರನ್ನು ನೋಡೋಣವೆಂದುಕೊಂಡು ಮಲ್ಲೇಶ ಮುಂದುವರಿದನು. ಪಟೇಲರ ಮನೆಯ ಮುಂದೆ ಯಾರೂ ಇರಲಿಲ್ಲ. ಬಾಗಿಲು ಪೂರ್ತ ತೆಗೆದಿದ್ದರೂ ಮಲ್ಲೇಶ ಕಣ್ಣೆತ್ತಿ ಮನೆಯೊಳಕ್ಕೆ ಇಣುಕಲಿಲ್ಲ. ಊಟ ಮಾಡಿ ಕೈ ಒರೆಸಿಕೊಳ್ಳುತ್ತಾ ಊಟದ ಮನೆಯಿಂದ ಹೊರಗೆ ಬಂದ ಪಟೇಲರ ಕಣ್ಣಿಗೆ ಬೀದಿಯಲ್ಲಿ ಹೋಗುತ್ತಿದ್ದ ಮಲ್ಲೇಶ ಬಿದ್ದಿರಬೇಕು. ಜೀತಗಾರನ ಕೈಲಿ ಮಲ್ಲೇಶನಿಗೆ 'ಬುಲಾವ್' ಬಂತು. ಮಲ್ಲೇಶ ಮನೆಯೊಳಕ್ಕೆ ಪ್ರವೇಶಿಸಿ " ನಮಸ್ಕಾರ " ಅಂದ. ಪಟೇಲರಿಗೆ ನಗು ಬಂತು.

" ಏನು ಮಲ್ಲೂ ಪಕತ್ ಪಟ್ಟಣದೋನೇ ಆಗ್‌ಬುಟ್ಟೆ? ನಾನೂ ನಿನಗೆ ನಮಸ್ಕಾರ ಮಾಡ್ಲೇಬೇಕೂ ಅನ್ನಪ್ಪ? ಇರ್ಲೀ, ಯಾವಾಗ ಬಂದೆ ? "

" ಇದೇತಾನೇ ಬರ್‍ತಾ ಇದೀನಿ, ಮೈಸೂರಿಂದ."

" ಮೈಸೂರಿಂದ್ಲಾ, ಏಳು ಕೋಟುಬಿಚ್ಚಾಕಿ ಊಟ ಮಾಡು."

" ಇಲ್ಲಾ, ಅಕ್ಕನ್ನ ಸ್ವಲ್ಪ ಕಂಡುಬಿಟ್ಟು ಬರ್‍ತೀನಿ."

ಅಷ್ಟರಲ್ಲಿ ಜೀತಗಾರ ಏನೋಮಾತನಾಡಲು ಸ್ವರವೆತ್ತಿದ ಸುಳಿವನ್ನು ಕಂಡು ಪಟೇಲರು " ಏ ಏನುಡಾ ಅದು ? ಹಿತ್ತಲಲ್ಲಿ ಬಿದ್ದಿರೋ ಮುಳ್ಳು ಆದ್ಹಾಕೂ ಅಂದ್ರೆ, ಇಲ್ಲಿ ಮಾತಾಡಕ್ಕೆ ನಿಂತಿದ್ದಯಾ ? " ಎಂದು ಅವನ ಬಾಯಿ ಮುಚ್ಚಿ ಕಳಿಸಿದರು. ಮಲ್ಲೇಶನನ್ನು ಪುನಃಪುನಃ ಊಟಕ್ಕೆ ಬಲವಂತ ಮಾಡಿದರು. ಮಲ್ಲೇಶ ಸಿದ್ಧನಾಗಲೇ ಇಲ್ಲ. ಪಟೇಲರು ವಿಧಿಯಿಲ್ಲದೇ ಅವನನ್ನು ಬಿಟ್ಟುಕೊಟ್ಟರು. ಇದರೂ ಯಾವುದೋ ಸಂಗತಿಯನ್ನು ಅವರು ಅಡಗಿಸಿಕೊಂಡಿದ್ದಂತಿತ್ತು. ಮಲ್ಲೇಶ ಮನೆಯ ಕಡೆಗೆ ಹೊರಟನು. ಪಟೇಲರು ಜೀತಗಾರನ ಮಾತಿಗೆ ಅಡ್ಡಿಮಾಡಿದ ಘಳಿಗೆಯಿಂದ ಅದೇಕೋ, ಮಲ್ಲೇಶನಿಗೂ ಪೆಚ್ಚಾಗಿಹೋಗಿತ್ತು. ಪಟೇಲರು ಮುಚ್ಚಿದ ಸಂಗತಿ ಏನೆಂಬುದನ್ನು ಕೇಳಿ ತಿಳಿದುಕೊಳ್ಳಬೇಕಾಗಿತ್ತೆನಿಸಿತು.

ದಾರಿಯಲ್ಲಿ ಹೆಂಗಸರೆಲ್ಲರೂ ಬೀದಿಯ ಬಾಗಿಲಿಗೆ ಬಂದು ಅವನನ್ನು ನೋಡು ತ್ತಿದ್ದುದು ಮತ್ತಷ್ಟು ಕುತೂಹಲಕ್ಕೆ ಕಾರಣವಾಗುತ್ತಿತ್ತು.

ಮನೆಯೂ ಸಿಕ್ಕಿತು. ಮನೆಯೊಳಕ್ಕೆ ಹೋಗಲು ಹಿಂದೆ ಮುಂದೆ ನೋಡಿದನು. ಬೀದಿಯಬಾಗಿಲಿಗೆ ಬಂದಿದ್ದ ಇಬ್ಬರು ಹೆಂಗಸರೂ ಅವ ನನ್ನು ಕಂಡು ತಮ್ಮ ಮಕ್ಕಳುಗಳನ್ನು ಎಳೆದುಕೊಂಡು ಒಳಕ್ಕೆ ಹೊರಟು ಹೋದರು ಮಲ್ಲೇಶ ಒಳಕ್ಕೆ ಹೋದರೂ ಅವರ ಮುಖ ಪತ್ತೆಯಾಗಲಿಲ್ಲ. ಅವನನ್ನು ಮಾತನಾಡಿಸುವವರೇ ಇಲ್ಲ. ಮಲ್ಲೇಶ ಪುನಃ ಹೊರಕ್ಕೆ ಬಂದನು ಹೊರಟುಹೋಗಲು ಮನಸ್ಸು ಬರಲಿಲ್ಲ. ಮನೆಯಲ್ಲಿ ಅನಾಹುತವೇನಾ ದರೂ ನಡೆದಿರಬೇಕೆನ್ನಿಸಿತವನಿಗೆ. ಪುನಃ ಮನೆಯೊಳಕ್ಕಿಣಿಕಿ 'ಅಕ್ಕಾ ಅಕ್ಕಾ' ಎಂದು ಎರಡುಸಾರಿ ಕೂಗಿದನು. ಕೊಟ್ಟಿಗೆಯಲ್ಲಿದ್ದ ಒಂದುಕರು 'ಅಂಬಾ' ಎಂದಿತು ಅಷ್ಟೆ.

ಮಲ್ಲೇಶ ಜಗಲಿಗೆ ಬಂದು ಕುಳಿತನು. ಮನೆಗೆ ಗಂಡಸರು ಬರುವ ವರೆಗೂ ಯಾವುದೂ ಇತ್ಯರ್ಥವಾಗುವುದಿಲ್ಲವೆಂಬುದು ಅವನಿಗೆ ಹೊಳೆ ಯಿತು. ಕುಳಿತು ಕುಳಿತು ಸಾಕಾಯಿತು. ಮಕ್ಕಳಾದರೂ ಬಂದು ಮಾತ ನಾಡಿಸಿದ್ದರೆ ವಿಷಯವನ್ನು ಪತ್ತೆಹಚ್ಚಬಹುದಾಗಿತ್ತೆನಿಸಿತು. ಮಕ್ಕಳನ್ನು ಹೊರಕ್ಕೆ ಬಿಡದೆ ಕೂಡಿಹಾಕಿದ್ದಂತಿತ್ತು. ಹೊಟ್ಟೆಯೂ ಹಸಿಯುತ್ತಿತ್ತು. ಪಟೇಲರ ಮನೆಯಲ್ಲಿ ಊಟ ಮಾಡಿದ್ದರೆ ಒಳ್ಳೆಯದಾಗಿತ್ತೆನಿಸಿತು.

ಸುಮಾರು ಮೂರೂವರೆಯ ಹೊತ್ತಿಗೆ ಮಾದೇವೂ ಆ ಬೀದಿಯಲ್ಲಿ ಬಂದವನಂತೆ ಬಂದು ಮಲ್ಲೇಶನನ್ನು ಕಂಡು ಹಾಗೆಯೇ ಹೊರಟುಹೋಗು ವುದರಲ್ಲಿದ್ದನು. ಮಲ್ಲೇಶ ತಕ್ಷಣ ಕೂಗಿ ಕೇಳಿದನು.

"ಭಾವಾ........ಇದ್ಯಾಕೇ ?........ಅಕ್ಕ ಎಲ್ಲಿ ?"

ಅದು ಬೀದಿಯೆಂಬುದನ್ನು ಮರೆತು ಮಾದೇವೂ ಗಟ್ಟಿಯಾಗಿಯೇ ಉತ್ತರಕೊಟ್ಟನು.

"ನಿಮ್ಮಕ್ಕ ?....ಗನಗರತಿ....ನೆನ್ನೆಯೇ ಹಟ್ಟೇಬುಟ್ಟು ಓಡ್ಹೋದ್ಲು. ಎಲ್ಲವ್ಳೋ ಹುಡುಕೂ ಹೋಗು"

ಮಲ್ಲೇಶನ ಮುಖಕ್ಕೆ ಹೊಡೆದಂತಾಯಿತು. ಪಟೇಲರ ಮನೆಯಲ್ಲಿ ನಡೆದ ಮಾತುಗಳ ಜ್ಞಾಪಕ ಬಂದಿತು. ಅಕ್ಕ ಗಂಡನನ್ನು ಬಿಟ್ಟು ಓಡಿಹೋದ ಸಂಗತಿ ಊರಿಗೆಲ್ಲಾ ಹರಡಿದೆ. ಅವನಿಗೆ ಹಳೆಯ ನೆನಪುಗಳೆಲ್ಲಾ ಓಡಿ ಬಂದಂತಾಯಿತು. ತನ್ನ ತಾಯಿ, ಅಕ್ಕಂದಿರಿಬ್ಬರೂ ಎಷ್ಟು ಕೆಟ್ಟವರು ಎಂದುಕೊಂಡನು. ಭಾವನ ಮಾತಿನಿಂದಾದ ಅವಮಾನ ಅವನ ಮುಖವನ್ನು ಸಪ್ಪಗೆ ಮಾಡಿತ್ತು. ಮಾತನಾಡಿಸದೇ ಅವಿತುಕೊಂಡಿದ್ದ ಮಲ್ಲೇಶನ ಮಿಕ್ಕಿಬ್ಬರು ಅಕ್ಕಂದಿರೂ ಈಗ ಹೊರಕ್ಕೆ ಬಂದು ನಿಂತಿದ್ದರು. ಮುಂದೆ ಮಾಡಬೇಕಾಗಿದ್ದ ಕೆಲಸವನ್ನೇ ಯೋಚಿಸುತ್ತಾ ಮಲ್ಲೇಶ ಜಗುಲಿಯತುದಿಯಲ್ಲಿ ನಿಂತಿದ್ದನು. ಇಬ್ಬರಲ್ಲಿ ದೊಡ್ಡವಳು—

'ಬಾ ಮಲ್ಲು ನೀರಿಸ್ಕೊ' ಎಂದು ಮೃದುವಾಗಿ ಕರೆದಳು. ಅವರಿಬ್ಬರೂ ಮಾದೇವೂ ಹೇಳಿದ ಮಾತನ್ನು ಮಲ್ಲೇಶನಿಗೆ ಹೇಳಲಾರದೇ ಇಷ್ಟುಹೊತ್ತು ಅಡಗಿಕೊಂಡಿದ್ದದ್ದು.

ಮಲ್ಲೇಶನಿಗೆ ಏನೂ ಬೇಕಿರಲಿಲ್ಲ. 'ಬಂದೆ' ಎಂದು ಒಂದೇಪದದ ಉತ್ತರಕೊಟ್ಟು ಜಗುಲಿಯಿಳಿದು ಮನೆಯ ಪಕ್ಕದ ಕಾಲುಹಾದಿಯಲ್ಲಿ ಹೊರಟನು.

ಅವನ ಬರುವಿಕೆಯನ್ನು ಕಾದುಕುಳಿತ ಹೆಂಗಸರು ಮೋಸಹೋದರು ಮಲ್ಲೇಶ ಗುಜ್ಜಗೆರೆಯ ಒಂದುಪ್ರಾಣಿಗೂ ಮುಖತೋರಿಸಲಾರದೆ ಪಾರಾಗಿ ಹೋಗಿದ್ದನು.



## ೧೮

ಒಂದು ವಾರದಿಂದ ತಾಯಕ್ಕನಿಗೆ ಹಲ್ಲುನೋವು ಬಂದಿತ್ತು. ಮೇಲು ದವಡೆಯ ಮುಂದಿನ ಜೋಡಿಹಲ್ಲುಗಳ ಪೈಕಿ ಬಲಗಡೆಯ ಹಲ್ಲು ಬಹಳವಾಗಿ ನೋಯುತ್ತಿತ್ತು. ತಾಯಕ್ಕ ಸಾಧ್ಯವಾದ ಔಷಧಿಗಳನ್ನೆಲ್ಲಾ ಮಾಡಿದ್ದಳು. ಸೀಗೆಪುಡಿ, ಉಪ್ಪನ್ನು ತುಂಬುತ್ತಿದ್ದಳು. ಉಪ್ಪಿನ ಶಾಖ ಕೊಟ್ಟಿದ್ದಳು. ಹಲ್ಲುಕಪ್ಪನ್ನು ಉಪಯೋಗಿಸಿನೋಡಿದ್ದಳು. ಏನು ಮಾಡಿದರೂ ಅದರ ಸೆಳೆತ ಸ್ವಲ್ಪವೂ ತಗ್ಗಿರಲಿಲ್ಲ. ಕಲ್ಲಿನಲ್ಲಿ ಗುದ್ದಿ ಅದನ್ನು ಕೆಡವಿಬಿಟ್ಟರೆ ಬಾಧೆ ಕಡಿಮೆಯಾಗುವುದೇನೋ ಎನ್ನಿಸಿತ್ತವಳಿಗೆ. ಘಳಿಗೆಗೊಮ್ಮೆ ಆ ಹಲ್ಲನ್ನು ಬೆರಳುಗಳಿಂದ ಜಗ್ಗಿಸಿನೋಡುತ್ತಿದ್ದಳು. ಅದು ಅಲುಗಾಡುತ್ತಿರಲಿಲ್ಲ. ಆ ಹಲ್ಲಿನ ಮುಖಾಂತರ ಗಾಳಿಯನ್ನು ಒಳಕ್ಕೆ ಎಳೆದುಕೊಳ್ಳುತ್ತಿದ್ದಾಗ ಆಸೆಳೆತ ಸ್ವಲ್ಪ ಕಮ್ಮಿಯಾದಂತೆ ತೋರುತ್ತಿದ್ದುದರಿಂದ ತಾಯಕ್ಕ ಪದೇಪದೇ ಉದ್ದವಾದ ಉಸಿರನ್ನು ಮೇಲೆಳೆದುಕೊಳ್ಳುತ್ತಿದ್ದಳು. ಅದರಿಂದ ತಲೆ ತಿರುಗುಬಂದಿತ್ತು.

ಹಲ್ಲುನೋವು ಬಂದವರು ಅಡಿಗೆಮಾಡಿಕೊಂಡು ಊಟಮಾಡಿದ ಹಾಗೆಯೇ. ಎರಡು ದಿನಗಳಿಂದ ತಾಯಕ್ಕನಿಗೆ ಒಪ್ಪೊತ್ತು ಊಟವೂ ತಪ್ಪಿಹೋಗಿತ್ತು. ಕಾಳಕ್ಕನ ಉಪಚಾರಕ್ಕೆ ಎರಡುದಿನಗಳ ಅವಕಾಶ ಮಾತ್ರ ಕೊಟ್ಟು ಅನಂತರ ತಾನು ಅಡಿಗೆ ಮಾಡಿಕೊಳ್ಳುತ್ತಿರುವುದಾಗಿ ಸುಳ್ಳುನಾಟಕ ಹೂಡಿ ತಪ್ಪಿಸಿಕೊಂಡಿದ್ದಳು. ಸದಾ ಬಿಳಿಯ ಕಂಬಳಿಯೊಳಗೆ ಸೇರಿಕೊಂಡು ಮಲಗಿರುವುದೇ ಅವಳ ಕೆಲಸವಾಗಿತ್ತು. ಅವಳ ಕಷ್ಟವನ್ನು ನೋಡಲಾರದೇ ಕಾಳಕ್ಕ ಪುಟ್ಟತಾಯಿಯನ್ನಾದರೂ ಕರೆಸಿಕೊಳ್ಳೆಂಬ ಸಲಹೆಯನ್ನು ಕೊಟ್ಟಳು. ಹಲ್ಲುನೋವೆಂದು ಊರೂರಲ್ಲೆಲ್ಲಾ ಡಂಗುರ ಹೊಡೆದವರುಂಟೆ ಎಂದು ತಾಯಕ್ಕ ಕಾಳಕ್ಕನನ್ನು ಹಾಸ್ಯಮಾಡಿಬಿಟ್ಟಳು. ಮಲ್ಲೇಶನಿಂದ ಬಂದಿದ್ದ ಆಗ್ರಹದಿಂದ ಕೂಡಿದ್ದ ಪತ್ರಕ್ಕೆ ಉತ್ತರ ಬರೆಸಿ ಹಾಕಿಸಿದಾಗಲೂ ತಾಯಕ್ಕ ಅದರಲ್ಲಿ ಹಲ್ಲುನೋವಿನ ಸಮಾಚಾರವನ್ನೇ ಎತ್ತಿರಲಿಲ್ಲ.

ಅವನೆಷ್ಟೇ ಹಣವನ್ನು ಕಸಿದುಕೊಳ್ಳುತ್ತಿರಲಿ, ಅವನು ತನ್ನ ಮೇಲೆ ಎಷ್ಟೇ ಸಿಟ್ಟುಗೊಳ್ಳಲಿ, ಅವನು ವರ್ಷವರ್ಷಕ್ಕೆ ವಿದ್ಯೆಯಲ್ಲಿ ಮುಂದುವರಿಯುತ್ತಿದ್ದಾನೆ ಎಂಬುದೊಂದೇ ತಾಯಕ್ಕನಿಗಿದ್ದ ದೊಡ್ಡ ಸಮಾಧಾನ. ಅವಳ ಆ ಹಲ್ಲುನೋವಿನಲ್ಲೂ ಆ ಸಮಾಧಾನವೇ ಅವಳನ್ನು ಸಂತೈಸುತಿದ್ದ ಕಾಣದ ಕೈ. ಹೋದಬಾರಿ ಅವನು ಬಂದಿದ್ದಾಗ್ಗೆ ಅವನಲ್ಲಿ ಎಂತಹ ವಿದ್ಯೆಯ ಕಳೆಯಿತ್ತು! ಅವನ ಕಣ್ಣುಗಳಲ್ಲಿ ಎಂತಹ ತಿಳುವಳಿಕೆಯ ಮಿಂಚಿತ್ತು! ಅವನ ಉಡುಪುಗಳಲ್ಲಿ ಎಂತಹ ಓರಣವಿತ್ತು! ಅವನ ಕ್ರಾಪು ಎಷ್ಟು ಸುಂದರವಾಗಿತ್ತು! ಅವನ ನಸುಬಾಗಿದ ಚೂಪಾದ ಮೂಗು ಅವನ ಮುಖದ ತೇಜಸ್ಸನ್ನು ಎಷ್ಟು ಹೆಚ್ಚಿಸಿತ್ತು! ಆ ತುಟಿಗಳು............

ತಾಯಕ್ಕನ ಸಿಹಿಗನಸಿನಲ್ಲಿನ ಮಲ್ಲೇಶನ ಚಿತ್ರದಲ್ಲಿ ತುಟಿಗಳ ಮೇಲೆ ಅವಳ ಗಮನ ಬಿದ್ದ ತಕ್ಷಣ ಆ ಸುಂದರ ಚಿತ್ರ ಮಾಯವಾಗುತ್ತಿತ್ತು. ಹೋದಬಾರಿ ಅವನು ಬಂದಿದ್ದಾಗ ತಾಯಕ್ಕ ಮಲ್ಲೇಶನ ಕೈಯಲ್ಲಿ ಒಂದು ಕಾಗದವನ್ನು ಓದಿಸಿದ್ದಳು. ಅವನು ಓದುತ್ತಿದ್ದಾಗ ಅವನ ಬಾಯನ್ನೇ ನೋಡುತ್ತಿದ್ದ ಅವಳಿಗೆ ಅವನ ತುಟಿಗಳು ಕಪ್ಪಾಗಿವೆ, ಎಂಬುದು ತಿಳಿಯ ಬಂದಿತು. 'ಎಂತಾ ಮುದ್ದಾದ ಬಾಯ್ನ ಹೆಂಗೆ ಮಾಡಿಕೊಂಡವ್ನೆ!' ಎಂದು ಮರುಗಿದಳು. ಬೀಡಿ ಸಿಗರೇಟು ಸೇದುವವರ ತುಟಿಯಿದ್ದಹಾಗಿದೆ ಎಂದುಕೊಂಡಳೇ ವಿನಃ ತಾಯಕ್ಕ, ಅವನಿಗೆ ಆ ಅಭ್ಯಾಸವಿದೆ ಎಂದು ಭಾವಿಸಿರಲೇ ಇಲ್ಲ.

ಅವಳು ಭಾವಿಸದೇ ಇದ್ದ ದುಶ್ಚಟವು ಮಗನಲ್ಲಿರುವುದನ್ನು ಕಣ್ಣಿನಲ್ಲಿಯೇ ನೋಡಬೇಕಾಗಿ ಬಂದಿತ್ತು. ಅದೂ ಎಂತಹ ಅವಮಾನದ ಸ್ಥಿತಿಯಲ್ಲಿ!

ಮಲ್ಲೇಶ ಕಿರೀಕಾಟೆಯಲ್ಲಿದ್ದಾಗ ಸಿಗರೇಟನ್ನು ತೋಟದಲ್ಲಲ್ಲದೇ ಇನ್ನೆಲ್ಲಿಯೂ ಹತ್ತಿಸುತ್ತಿರಲಿಲ್ಲ. ಹಾಗೆ ಒಮ್ಮೆ ಹಚ್ಚಿದ್ದಾಗ ಅಲ್ಲಿಗೆ ತಾಯಕ್ಕ ಅವನನ್ನು ಹುಡುಕಿಕೊಂಡು ಬಂದಳು. ಸಿಗರೇಟಿನಲ್ಲಿ ಕಾಲು ಅಂಗುಲ ಕೂಡ ಉರಿದಿರಲಿಲ್ಲ. ಅದನ್ನು ಎಸೆಯಲು ಮಲ್ಲೇಶನಿಗೆ ಮನಸ್ಸಾಗಲಿಲ್ಲ. ಕೈಯೊಳಗೆ ಮರೆಸಿಹಿಡಿದಿದ್ದನು. ಅವನು, ತಾಯಕ್ಕ ಅದನ್ನು ಕಂಡೂ

ಕಾಣದಂತೆ ನೋಡಿಕೊಂಡು ಹೊರಟುಹೋಗುವಳೆಂದು ತಿಳಿದುಕೊಂಡಿದ್ದನು. ತಾಯಕ್ಕನಿಗೆ ಮಗನ ಈ ದುರ್ಬುದ್ಧಿಯನ್ನು ಕಂಡು ಮೈಯೆಲ್ಲ ಉರಿಬಂದಿತ್ತು. ಮಗನು ಎಷ್ಟೆಷ್ಟು ಹಿಂಜರಿದರೂ ತಾಯಕ್ಕನು ಅದರ ತನಿಖೆಯನ್ನು ಬಿಟ್ಟುಕೊಡಲೇ ಇಲ್ಲ. 'ಅದೇನಾ ನಿನ್ನ ಕೈಲಿರದು ತಗೀ ನೋಡುವೆ........ನೋಡ್ಲೇಬೇಕು ಇಂದು........ನೀನು ಕೈ ತಗೀಲೇಬೇಕು' ಎಂದು ಹಟ ಹಿಡಿದುಬಿಟ್ಟಳು.

ಮಲ್ಲೇಶನಿಗೆ ವಿಪರೀತ ರೇಗಿಹೋಯಿತು. ಮನಸ್ಸನ್ನು ಗಟ್ಟಿಮಾಡಿ " ಸಿಗರೇಟು ! ನೋಡ್ಕೊ........ನಾನೇನ್ಮಾಡ್ಲಿ ! " ಎಂದು ಅಂಗೈ ಬಿಚ್ಚಿ ಉರಿಯುತ್ತಿದ್ದ ಸಿಗರೇಟನ್ನು ತಾಯಿಗೆ ತೋರಿಸಿಯೇ ತೋರಿಸಿದನು. ತಾಯಕ್ಕ ಹಾಡಿಕೊಂಡು ಅಳತೊಡಗಿದಳು. ಮಲ್ಲೇಶ ಮಾತನಾಡದೇ ದೃಶ್ಯದಿಂದ ಕಣ್ಮರೆಯಾದನು. ಹೀಗಾಗಿ ತಾಯಕ್ಕ ಆ ದುಶ್ಚಟವನ್ನುಅವನಲ್ಲಿ ತಾನಾಗಿ ಸ್ಥಾಪಿಸಿದಂತಾಗಿತ್ತು.

ಪ್ರಪಂಚದಲ್ಲಿ ಮಲ್ಲೇಶ ಕೊನೆಯವರೆಗೂ ಹೆದರಿ ನಡೆದುಕೊಳ್ಳಬೇಕಾಗಿದ್ದುದು ತಾಯಕ್ಕ ಒಬ್ಬಳಿಗೆ. ಈಗ ಸಿಗರೇಟಿನ ವಿಷಯದಲ್ಲಿ ಅವನು ಅವಳಿಗೂ ಅಂಜಿಕೊಳ್ಳಬೇಕಾಗಿರಲಿಲ್ಲ. ಅವನು ಎಲ್ಲೆಂದರಲ್ಲಿ ಸಿಗರೇಟು ಹಚ್ಚುವುದಕ್ಕೆ ಮೊದಲುಮಾಡಿದನು. ಯಾರನ್ನು ಬೇಕಾದರೂ ದೀಪದ ಕಡ್ಡಿಯನ್ನು ಕೇಳುತ್ತಿದ್ದನು. ತಮ್ಮ ಊರಿನ ಯಾವಮನೆಯ ಹೆಂಗಸನ್ನು ಬೇಕಾದರೂ ಬೆಂಕಿಯನ್ನು ಕೇಳುತ್ತಿದ್ದನು.

ಸದಾಶಿವನ ಸಹವಾಸಕ್ಕೆ ಮಗನನ್ನು ಬಿಟ್ಟುದರಿಂದ ಮಗ ಈ ಕೆಟ್ಟ ದಾರಿ ಹಿಡಿದನೆಂದು ತಾಯಕ್ಕ ತಪ್ಪನ್ನೆಲ್ಲಾ ಸದಾಶಿವನಮೇಲೆ ಹಾಕಿ ನೆಟಿಕೆಗಳನ್ನು ಮುರಿದಳು. ಆ ಬಾರಿ ಮಲ್ಲೇಶ ಊರಿಗೆ ಹೋಗುವಾಗ ಹಣವನ್ನು ನೇರವಾಗಿ ತಾಯಿಯನ್ನು ಕೇಳಲಿಲ್ಲ ಕಾಳಕ್ಕನ ಮುಖಾಂತರ ಕೇಳಿದ. ಇಪ್ಪತ್ತೈದು ಆಗಲೇಬೇಕೆಂದು ಹಟಹಿಡಿದ. ತಾಯಕ್ಕ ಕಾಳಕ್ಕನೆದುರಿಗೇ ಅವನನ್ನು ಕರೆದು 'ಅದೇನಾ ಮಲ್ಲು ಈಸತಿ ಕಾಳಕ್ಕನ್ನಾ ಮಧ್ಯ ಬುಟ್ಟಿದಯಲ್ಲ. ನನಗೂ ನಿನಗೂ ಮಾತಿಲ್ವಾ ? ಅದೆಲ್ಲಾ ಚೆಂದಾಗಿಲ್ಲ. ಇಪ್ಪತ್ತು ರೂಪಾಯದೆ ತಕಂಡೋಗು. ಬರೋ ಆಯಿತ್ತವಾರ

ಇನ್ನೈದು ರೂಪಾಯಿ ಕಳಿಸ್ತೀನೀ ' ಎಂದು ಇಪ್ಪತ್ತುರೂಪಾಯಿ ಕೊಟ್ಟಳು ಮಲ್ಲೇಶ ಹೆಚ್ಚುಬಡ್ಡಿಗೆ ಒಪ್ಪಿಕೊಂಡು ಅರ್ಧ ದುಡ್ಡನ್ನು ತೆಗೆದುಕೊಳ್ಳುವ ಸಾಲಗಾರನಂತೆ ಅದನ್ನು ತೆಗೆದುಕೊಂಡು ಹೋಗಿದ್ದನು.

ಅವನು ಮಂಕುಮುಖ ಹಾಕಿಕೊಂಡು ಹೋದ ಮರುಕ್ಷಣದಲ್ಲಿ ಅವನ ಕೆಟ್ಟಚಾಳಿಯಿಂದಾದ ವ್ಯಥೆಯು ಕರಗಿಹೋಯಿತು. ಯಾರಾದರೂ ನಿನ್ನ ಮಗ ಇಂತಹ ಕೆಟ್ಟ ದಾರಿಗೆ ಬಿದ್ದಿದ್ದಾನೆ ಎಂಬ ಮಾತನ್ನು ತೆಗೆದರೆ ತಾಯಕ್ಕನಿಗೆ ಸುಮ್ಮನಾಗುವ ಮನಸ್ಸಿರಲಿಲ್ಲ. ಹಾಗೆನ್ನುವವರ ಮಾತಿಗೆ ಭಂಡಮಾತುಗಳನ್ನಾಡಿ ಎದುರುಬಾಯನ್ನು ಮುಚ್ಚಿಸಲು ಸಿದ್ಧಳಾಗಿದ್ದಳು.

ತಾಯಕ್ಕನು ಅಣ್ಣ ಬಸವಣ್ಣನಿಗೂ ಹಾಗೆಯೇ ಮಾಡಿ ಕಳುಹಿಸಿದ್ದಳು. ಬಸವಣ್ಣ ಜಲಂದರನ ಯೀರಣ್ಣನ ಎತ್ತುಗಳಿಗೆ ಕ್ರಯಕಟ್ಟುವುದಕ್ಕೆ ಸಲುವಾಗಿ ಕಿರೀಕಾಟಿಗೆ ಆ ಬಾರಿ ಬಂದಿದ್ದನು. ಎತ್ತಿನ ವ್ಯಾಪಾರವಾಗಲಿಲ್ಲ. ಕಿರೀಕಾಟಿಗೆ ಬಂದಮೇಲೆ ತಂಗಿಯ ಮನೆಗೆ ಹೋಗದೇ ಹೋಗುವುದಕ್ಕೆ ಮನಸ್ಸೂ ಬರುವುದಿಲ್ಲ. ಜನಾಪವಾದವೂ ಉಂಟು ಎಂದು ಬಸವಣ್ಣ ತಾಯಕ್ಕನ ಮನೆಗೆ ಬಂದ. ಪುಟ್ಟತಾಯಿಯ ಮದುವೆಯಲಾಗಾಯ್ತು ಇದ್ದ ಅಣ್ಣ-ತಂಗಿಯರ ವೈಷಮ್ಯ ಯೀರಣ್ಣನ ಮನೆಯ ಎತ್ತುಗಳಿಂದ ಮರೆಸಿಹೋಗುವ ಕಾಲ ಬಂದಿತ್ತು. ತಾಯಕ್ಕ ಮನಸ್ಸಿನ ಬೇಸರವನ್ನೆಲ್ಲಾ ಅಡಗಿಸಿಕೊಂಡು ಅಣ್ಣನ ಸತ್ಕಾರಕ್ಕೆ ನಿಂತಳು. ಬಸವಣ್ಣನೂ ಯೋಗಕ್ಷೇಮದ ಮಾತುಗಳನ್ನೆಲ್ಲಾ ನಗುನಗುತ್ತ ಆಡಿದನು. ಮಾತಿನಮಧ್ಯೆ ಪುಟ್ಟತಾಯಿಯ ಮದುವೆಯ ಸುದ್ದಿ ಬರದಂತೆ ಇಬ್ಬರೂ ಎಚ್ಚರಿಕೆ ವಹಿಸಿದ್ದರು. ಸಾಮಾನ್ಯವಾಗಿ ಸಂಭಾಷಣೆಯೆಲ್ಲಾ ಮಲ್ಲೇಶನನ್ನು ಕುರಿತದ್ದೇ ಆಗಿತ್ತು. ಬಸವಣ್ಣ ವಿಚಾರಿಸುತ್ತಾ—

" ಮಲ್ಲೇಸನ್ನ ಬಾಳ ದಿನದಲ್ಲಿ ನೋಡದ್ದು. ನಮ್ಮೂರು ಹೈದನೂ ಒಬ್ಬ ಮೈಸೂರ್ನಲ್ಲಿ ಓದ್ತನೆ. ಅವನು ಏಳ್ತಿದ್ದ. ಮಲ್ಲೇಶ ಈಗ ಬಾಳ ಚೆಂದಾಗವನಂತೆ. ಆದರೆ ಓದದ್ರಲ್ಲಿ ಎಷ್ಟುಮಟ್ಟಿಗೋ ತಿಳೀದು ಅಂತಿದ್ದ. ಎಂಗದೆ ಅವನ್ಯಓದು ?"

" ಮೈಸೂರಿಗೋದಮೇಲೆ ಒಂದು ಕಳಾಸ್ಲೂ ಪೇಲಾಗಿಲ್ಲ ಅವನು"

" ಬೇಸ್! ಶಿವನ ಕಟ್ಲೆ. ನಿನ್ನ ಪುಣ್ಯ. ಅವನು ಅಂಗೇ ಮುಂದರೀಲಿ ಅಂತ್ಲೇ ನಮ್ಮೆಲ್ಲರ ಆಸೆ"

" ಇಲ್ಲ, ಮಲ್ಲೇಸ ಒಂದೊಸಿ ದುಡುಕಾದರೂ ಜಾಣ, ಓದ್ತನೆ. ಚಿಕ್ಕಂದ್ನಿಂದಲೂ ಅವನಿಗೆ ಓದದ್ರಲ್ಲೇ ಗ್ಯಾನ. ಹೊಲ, ಮನೆಮೇಲೆ ಅಷ್ಟೇನೂ ಮನಸಿರಲಿಲ್ಲ. ಅದಕ್ಕೇ ನಾನು ಅವನ್ನ ಆ ದಾರೀಲೇ ಬುಟ್ಟುಬುಟ್ಟೆ"

" ಅದೆಲ್ಲಾ ಸರಿ, ಜಾಣ. ಆದರೆ ಸವಾಸ ಚಂದಿಲ್ಲವಂತೆ. ಈ ವಯಸ್ನಲ್ಲೇ ಅವನು ಬೀಡಿ ಸೇದದು ಉಂಟಂತೆ! ಅಲ್ಲಾ—ಕೇಳಿದಮಾತು. ಕಂಡದ್ದಲ್ಲ"

" ಯಾರು ಏಳಿದ್ರು ನಿಂಗೆ?"

" ಅದೇ ನಮ್ಮ ಮೈಸೂರು ಹೈದ ಏಳಿದಂಗಿತ್ತು. ಸುಳ್ಳಾದರೆ ಸಂತೋಷವೆ! ನಿಜವಾ ಅಂತ ನಿನ್ನ ಕೇಳ್ದೆ!"

" ನಿಜ"

" ಹಂಗಂದ್ರೆ"

" ಔದು. ಅವನು ಶಿಕರೇಟು ಶೇದದು ನಾನೇ ಕಂಡೆ. ಬೇಡಾ ಅಂದ್ರೆ ಬುಟ್ಟಾರಾ! ಈಗ ನಿನ್ನ ಬುಡು ಅಂದ್ರೆ ಬಟ್ಟುಬುಟ್ಟಯಾ?"

" ಅದಕ್ಕೆ ನಿನಗ್ಯಾಕೆ ಕ್ಯಾಪಾ ತಾಯಿ! ಇದ್ದ ಇಸಯಾ ಯೋಳಿದರೆ ಎದ್ದುಬಂದು ಎದೆಗೊದ್ದನಂತೆ"

" ಇರಲೇಳು, ಅದರಿಂದ ನಿನಗೇನು? ನಿನ್ನ ಮಗಳನಾ ನನ್ನ ಮಲ್ಲೇಸನಿಗೇನೂ ಕೊಡಬೇಡ."

ಆ ಮಾತು ತಾಯಕ್ಕ ಲೋಕಾರೂಢಿಯಂತೆ ಆಡಿದುದು. ಆದರೆ ಬಸವಣ್ಣನ ಅಂತರಂಗವನ್ನು ತಿಳಿದು ಆಡಿದ ಮಾತಿನಂತಿತ್ತು. ಬಸವಣ್ಣ ಆ ಮಾತನ್ನು ಕೇಳಿ ಸಂವಾದವನ್ನು ಅಲ್ಲಿಗೇ ನಿಲ್ಲಿಸಿ ಯೋಚನೆಗೆ ತೊಡಗಿದನು. ಅವನು ಆಬಾರಿ ಕಿರೀಕಾಟಿಗೆ ಬಂದಿದ್ದ ಉದ್ದೇಶ ಯೀರಣ್ಣನ ಎತ್ತುಗಳು ಮಾತ್ರವಾಗಿರಲಿಲ್ಲ. ತಾಯಕ್ಕನ ಬಾಂಧವ್ಯವನ್ನು ಊರ್ಜಿತಗೊಳಿಸಿಕೊಳ್ಳುವ ಆಲೋಚನೆಯೂ ಇತ್ತು. ಪುಟ್ಟತಾಯಿಯ ಮದುವೆಯ

ಲಾಗಾಯ್ತು ಬಿಟ್ಟುಹೋಗಿದ್ದ ನೆಂಟಸ್ತನವನ್ನು ಸೇರಿಸಿಕೊಳ್ಳುವ ಆಸೆಯನ್ನು ತಾನು ಮೊದಲು ತೋರಿಸಿಕೊಳ್ಳಬಾರದೆಂದು ಬಸವಣ್ಣ ತುಂಬ ದಿವಸಗಳನ್ನು ಕಳೆದುದಾಗಿತ್ತು. ಆದರೆ ತಾಯಕ್ಕನ ಹೃದಯ ಗಟ್ಟಿಯಿದ್ದಂತಿತ್ತು.

" ನಿನ್ನ ಮಗಳನಾ ನನ್ನ ಮಲ್ಲೇಸನಿಗೇನೂ ಕೊಡಬ್ಯಾಡ " ಎಂದ ಮಾತು ಬಸವಣ್ಣನಿಗೆ ಗಾಯವನ್ನು ಗುರ್ತಿಸಿಕೊಂಡು ಪೆಟ್ಟುಕೊಟ್ಟಂತಾಗಿತ್ತು. ಅವನ ಮಗಳಿಗೂ ಹನ್ನೊಂದು ವರ್ಷ ತುಂಬುವುದರಲ್ಲಿತ್ತು. ಮಾರೇಗೌಡನ ಹುಂಡಿಯವರು ಕೇಳಲು ಬಂದಿದ್ದರು. ಬಸವಣ್ಣ ಈ ಬಾರಿ ಆಗುವುದಿಲ್ಲವೆಂದು ಹೇಳಿ ತಪ್ಪಿಸಿಕೊಂಡಿದ್ದನು. ಆದರೆ ಅವಳ ಮದುವೆಯ ಯೋಚನೆಯನ್ನಂತೂ ಆಸಕ್ತಿಯಿಂದ ಮಾಡಬೇಕಾಗಿದೆಯೆಂದಾಗಿತ್ತು. ಇಲ್ಲದಿದ್ದರೆ ಬಂದಬಂದವರಿಗೆಲ್ಲ ' ಇಲ್ಲ 'ಎಂದು ಹೇಳುವ ಕಷ್ಟವೊಂದಿತ್ತಲ್ಲ.

ಮಲ್ಲೇಶನಿಗೆ ಮಗಳನ್ನು ಕೊಡುವ ವಿಷಯ ಮಗಳು ಹುಟ್ಟಿದ ದಿನವೇ ಬಸವಣ್ಣ-ದಂಪತಿಗಳು ಹಾಸ್ಯಕ್ಕೆ ಆಡಿಕೊಂಡಿದ್ದ ಮಾತು. ಆ ಹಾಸ್ಯ ಸಿದ್ದಪ್ಪ ಸತ್ತಮೇಲೆ ಗಂಭೀರ ನಿರೀಕ್ಷಣೆಯೇ ಆಗಿತ್ತು. ಪುಟ್ಟತಾಯಿಯನ್ನೂ ತಮ್ಮ ಕಡೆಯವರೇ ಆದ ಯಾರಿಗಾದರೂ ಬಡವನಿಗೆ ಕೊಡಿಸಬೇಕೆಂದಿದ್ದ ಅವರ ಅಭಿಲಾಷೆಯನ್ನು ತಾಯಕ್ಕ ನಡೆಯಗೊಡಲಿಲ್ಲ. ಆದುದರಿಂದಲೇ ಅವರು ಪುಟ್ಟತಾಯಿ ಮದುವೆಯನ್ನು ಮನಸ್ಸಿಗೆ ಹಾಕಿಕೊಳ್ಳಲಿಲ್ಲ. ಮಾದೇವೂ ಯೋಗ್ಯತೆ ಎಷ್ಟರಮಟ್ಟಿಗಿದೆ ಎಂದು ಇಷ್ಟುದಿನ ಕಾದುನೋಡಿದ್ದಾಗಿತ್ತು. ಅವನು ತನ್ನ ಯೋಗಕ್ಷೇಮವನ್ನೇ ತಾನು ನೋಡಿಕೊಳ್ಳಲಾರದವನೆಂಬ ಸುದ್ದಿ ಬಂದು ತಲುಪಿತ್ತು. ಅದರಿಂದ ಮಲ್ಲೇಶನಿಗೆ ಮಗಳನ್ನು ಕೊಡುವ ಆಸೆ ಪುನಃ ತಲೆಯೆತ್ತಿತ್ತು. ತಾಯಕ್ಕ ತನ್ನ ಅಣ್ಣ ಅತ್ತಿಗೆಯವರ ಸಹಾಯವನ್ನು ಯಾವಾಗಲೂ ಕೋರಲಿಲ್ಲ. ಹಾಗೆಂದು ತಾವು ದೂರದಲ್ಲಿಯೇ ಇರಹತ್ತಿದರೆ ಸನ್ನಿವೇಶ ಕೈಮೀರಿಹೋಗಬಹುದೆನ್ನಿಸಿತು ಹೆಂಡತಿಯ ಕಿರುಕುಳ ವಿಪರೀತವಾದಮೇಲೆ ಯೀರಣ್ಣನ ಎತ್ತುಗಳನ್ನು ನೋಡುವವನಂತೆ ಬಸವಣ್ಣ ಕಿರೀಕಾಟಿಗೆ ಬಂದಿದ್ದದ್ದು. ಸನ್ನಿವೇಶ ಸರಸವಾಗಿಯೇ ಇದ್ದಿದ್ದರೆ ಆ ಬಾರಿಯೇ ಬಸವಣ್ಣ ಮಲ್ಲೇಶನ

ಮದುವೆಯ ಮಾತೆತ್ತಬೇಕೆಂದಿದ್ದನು. ಆದರೆ 'ಶಿಕರೋಟಿ'ನ ಮಾತು ಬಂದು, ಬಸವಣ್ಣ-ದಂಪತಿಗಳ ತಲೆಯಮೇಲೆಯೇ ಕಲ್ಲುಹಾಕಿದಂತಾಗಿತ್ತು.

ಬಸವಣ್ಣ ತಾನು ಬಂದಿದ್ದ ಉದ್ದೇಶದ ಪ್ರಸ್ತಾಪವೆತ್ತದೆ ಠಾಣ್ಯಕ್ಕೆ ಹೊರಟುಹೋದನು. ನಡೆದುದೆಲ್ಲವನ್ನೂ ಸವಿಸ್ತಾರವಾಗಿ ಹೆಂಡತಿಗೆ ಹೇಳಿದನು. ತಾಯಕ್ಕ ಎದುರಿಗಿಲ್ಲದಿದ್ದುದರಿಂದ ಚನ್ನೂರಮ್ಮ ಬೇಕಾದಷ್ಟು ಎಗರಾಡಿದಳು. "ನನ್ನ ಮಗಳನಾ ಯಾರೂ ತರದೇ ನಿಂತಿದ್ದರಾ ? ಇವಳ ಬಡಾಯಿಗೆ ಬೆಂಕಿ ಹಾಕ, ಇವಳ ಪೋಲೀ ಮಗ ದುಬಟೀ ಕಮೀಸರಾಗದ್ನ ನಾನು ಕಾಣ್ದೇ ಹೋದೀನಾ ?" ಮುಂತಾಗಿ ಹಾರಾಡಿದಳು. ತನ್ನ ಮನೆಯಲ್ಲೇ ಅಲ್ಲದೇ ಬಂದವರು ಹೋದವರೊಡನೆಯೂ ಇದೇರೀತಿಯ ಮಾತುಗಳನ್ನಾಡಿದಳು.

"ಮಲ್ಲೇಸ ಊದದು ನನಗೂ ಗೊತ್ತದೆ. ಇಲ್ದೇ ಇದ್ರೆ ನಮ್ಮ ಹುಡುಗೀನ್ಯಾಕೆ ಇನ್ನೊಬ್ಬರು ಬಂದು ನೋಡಬೇಕಾಗಿತ್ತು. ಅವನು ಪೋಲೀಬಿದ್ಹೋಗವ್ನೆ ಅನ್ನದು ಕಿರೀಕಾಟೀಗೆಲ್ಲ ಗೊತ್ತು. ಅವನವ್ವೆ ಒಬ್ಬಳಿಗೇ ತಿಳೀದು—ಅಯ್ಯೋ ಪಾಪ."

ಈ ಮಾತು, ಠಾಣ್ಯದಿಂದ ಕಿರೀಕಾಟಿಗೆ ಗಾಳಿಯಲ್ಲಿ ತೂರಿಕೊಂಡು ಬಂದು ತಾಯಕ್ಕನ ಕಿವಿಯಮೇಲೆ ಬಿದ್ದಿತು. ತನ್ನಣ್ಣ ಸೋತು, ತನ್ನ ಮನೆಯ ಬಾಗಿಲಿಗೇ ಬಂದಿದ್ದುದರ ಉದ್ದೇಶ ತಿಳಿದು ತಾಯಕ್ಕನಿಗೆ ಬಲು ನಗು ಬಂದಿತು. ಅವರು ತನ್ನ ಮಗನನ್ನು 'ಪೋಲಿ'ಯೆಂದುದರಬಗ್ಗೆ ಆಗಬೇಕಾದುಷ್ಟು ಹೊಟ್ಟೆಯುರಿ ಉಂಟಾಗಲೇ ಇಲ್ಲ. ಬದಲಾಗಿ ಈಗಾಗಲೇ ಮಗನಿಗೆ ಹೆಣ್ಣುಕೊಡಲು ಮನೆಯ ಬಾಗಿಲಿಗೆ ಜನ ಬರುವಂತಾಯಿತಲ್ಲ ಎಂಬ ಸಂತೋಷವೇ ಉಂಟಾಗಿತ್ತು.

ಹೆಣ್ಣಿನವರು ಗಂಡಿನವರ ಮನೆಗೆ ಬರುವುದು ಪದ್ಧತಿಯಲ್ಲ. ಆದರೂ ಮಲ್ಲೇಶ ವಿದ್ಯಾವಂತ. ಒಳ್ಳೆಯ ತಂದೆತಾಯಿಗಳ ಮಗ, ಚಲುವ, ಜಾಣ. ಉಣ್ಣಲು ಉಡಲು ಉಳ್ಳವ. ಅದಕ್ಕೇ ಜನ ಬರುತ್ತಿರುವುದು. ಅದರಲ್ಲೂ ಸೋದರಮಾವನೇ ಬಂದಿದ್ದಾನೆ. ಹೀಗೆ ಆಲೋಚಿಸುತ್ತಾ ತಾಯಕ್ಕನಿಗೆ ತಾನು ಹುಟ್ಟಿದುದೇ ಅಂದಿಗೆ ಸಾರ್ಥಕವಾಯಿತೆಂದುಕೊಂಡಳು. ಆ ಹಲ್ಲು

ನೋವಿನ ಬಾಧೆಯಲ್ಲಿಯೂ ಕೂಡ ಇವೆಲ್ಲ ಯೋಚನೆಗಳೂ ಬಂದು ಅವಳ ಯಾತನೆಯನ್ನಷ್ಟು ತಗ್ಗಿಸಿಕೊಡುತ್ತಿದ್ದುವು. ಮನಸ್ಸಿನಲ್ಲೇ ಮಲ್ಲೇಶನ ಮದುವೆ ಮಾಡಿನೋಡುತ್ತಿದ್ದಳು. ಚಪ್ಪರ, ದಿಬ್ಬಣ, ಧಾರೆ ಎಲ್ಲದರ ಚಿತ್ರವೂ ಅವಳ ಕಣ್ಣುಮುಂದೆ ಹಾಯ್ದುಹೋಗುತ್ತಿದ್ದವು. ಆದರೆ ಹೆಣ್ಣಿನ ಮುಖ ಮಾತ್ರ ಅಸ್ಪಷ್ಟವಾಗಿರುತ್ತಿತ್ತು. ಚನ್ನೂರಮ್ಮನ ಮಗಳಂತೂ ಖಂಡಿತ ಅಲ್ಲ.

ಈ ಸವಿಭಾವನೆಗಳಲ್ಲಿಯೇ ಹೊತ್ತನ್ನು ಕಳೆಯಲು ತಾಯಕ್ಕನಿಗೆ ಹಲ್ಲುನೋವು ಅವಕಾಶವನ್ನು ಕಡಿಮೆ ಮಾಡುತ್ತ ಬಂದಿತು. ಹಲ್ಲು 'ದುಡಿತ' ವಿಪರೀತವಾಯಿತು. ಮಲಗಲೂ ಆಗದು, ಕುಳ್ಳಿರಲೂ ಆಗದು, ಏಳಲೂ ಆಗದು, ಹೀಗಾಗಿಹೋಗಿ ಕಾಳಕ್ಕ ಆ ಸಂಜೆ ತಾಯಕ್ಕನ ಮನೆಯಲ್ಲೇ ಬಿಡಾರಬಿಡಲು ಬಂದುಬಿಟ್ಟಿದ್ದಳು. ತಾಯಕ್ಕನ ಪರದಾಟವನ್ನು ನೋಡಿ ಕಾಳಕ್ಕನಿಗೂ ಸ್ವಲ್ಪ ಹೆದರಿಕೆಯೇ ಆಯಿತು. ತಾಯಕ್ಕನಿಗಾಗುತ್ತಿದ್ದ ನೋವಿನ ಪ್ರಮಾಣವನ್ನು ಅವಳ ಕಣ್ಣೀರು ಅಳೆದಳೆದು ತೋರಿಸಲು ತೊಡಗಿತ್ತು. ಕಾಳಕ್ಕ "ನಮ್ಮಟ್ಟೀ ಜೀತಗಾರನ್ನಾದ್ರೂ ಕಳೀಸಿ ಪುಟ್ಟ ತಾಯೀನ ಬರಮಾಡ್ಲಾ ತಾಯಿ" ಎಂದು ಕೇಳಿದಳು. ಒಂದು ಘಳಿಗೆ ತಾಯಕ್ಕನಿಗೂ ಮಗಳನ್ನು ನೋಡಬೇಕೆಂಬ ಆಸೆಯೇ ಆಯಿತು. ಆದರೂ ಕಾಳಕ್ಕನಿಗೆ ಬೇಡವೆಂದೇ ಹೇಳಿದಳು.

ನಾಲ್ಕು ದಿನದಿಂದ ಮನೆಯಲ್ಲಿ ತುಂಬಿಕೊಂಡಿದ್ದ ಕಸವನ್ನು ಗುಡಿಸಿ ಹಿತ್ತಲ ತಿಪ್ಪೆಗೆ ಸುರಿಯಲು ಕಾಳಕ್ಕ ಮನೆಯ ಹಿಂದಿನ ಬಾಗಿಲನ್ನು ತೆಗೆದುಕೊಂಡುಹೋದಳು. ಅವಳು ಬಾಗಿಲಿನಿಂದ ಎರಡು ಹೆಜ್ಜೆಗಿಂತ ಮುಂದೆ ಹೋಗಿರಲಾರಳು, ಅಷ್ಟರಲ್ಲಿ ಕಾಳಕ್ಕನ ಮಾತನ್ನು ಕೇಳಿ ತಾಯಕ್ಕನಿಗೆ ಅತ್ಯಾಶ್ಚರ್ಯವಾಯಿತು.

"ಸಾವಿರ ವರ್ಸ ಆಯಿಸು ನಿನಗೆ ಪುಟ್ಟತಾಯಿ. ಈಗ್ತಾನೇ ನಿನ್ನ ಕರೀಸೋ ಮಾತಾಡ್ತಾ ಇದ್ವೊ. ನೀನೇ ಬಂದ್ಬುಟ್ಯೆಲ್ಲ. ಇದೇನು ಹಿತ್ತಲ ಕಡೆಯಿಂದ ಬತ್ತಾ ಇದೀಯಲ್ಲ!"

ತಾಯಕ್ಕನೂ ಅಸಾಧ್ಯ ತವಕದಿಂದ ಆ ಮಾತಿನ ನಿಜವನ್ನು ತಿಳಿಯಲು ಧಾವಿಸಿದಳು. ಅದು ಸತ್ಯವಾದ ಸಂಗತಿಯಾಗಿತ್ತು. ಪುಟ್ಟತಾಯಿ ಬಂದಿದ್ದಳು. ತಾಯಕ್ಕನ ಹಲ್ಲುನೋವು ಹೋಗುತ್ತಿತ್ತು.

ಕಾಳಕ್ಕ ತಾಯಕ್ಕಂದಿರು ಎಷ್ಟು ಮಾತುಗಳನ್ನಾಡಿ ಎಷ್ಟು ಪ್ರಶ್ನೆಗಳನ್ನು ಕೇಳಿದರೂ ಪುಟ್ಟತಾಯಿ ಸ್ವಲ್ಪ ಹೊತ್ತು ಏನೊಂದೂ ಆಡದೇ ನಡೆದು ಬಂದ ಆಯಾಸಕ್ಕೆ ಕುಳಿತವಳಂತೆ ಸ್ತಬ್ಧವಾಗಿ ಕುಳಿತುಬಿಟ್ಟಳು. ಅವರಿಬ್ಬರ ಆತುರ ಹೆಚ್ಚುತ್ತಲೇ ನಡೆಯಿತು.

"ನಡಕಂಡೇ ಬಂದ್ಯಾ ಪುಟ್ಟ? ನನ್ನ ಅಲ್ಲುನೋವು ನಿಂಗೆಂಗೆ ಗೊತ್ತಾಯಿತು?"

"ನನಗೇನೂ ಗೊತ್ತಿಲ್ಲ. ಸುಮ್ನೆ ಬಂದುಬುಟ್ಟೆ."

"ಒಳ್ಳೇ ಕೆಲಸವಾಯಿತು. ಒಬ್ಬೇ ಬಂದ್ಯಾ? ಜೊತೆಗ್ಯಾರೂ ಇಲ್ಲವಾ?"

"ನನ್ನ ಜೊತೇಗೆ ಇನ್ನುಮೇಲೆ ಯಾರೂ ಇಲ್ಲ. ಜೊತೇಗ್ಯಾರೂ ಇಲ್ಲ—" ಪುಟ್ಟತಾಯಿಯ ಬಾಯಿಂದ ಮುಂದಕ್ಕೆ ಮಾತುಗಳು ಹೊರಡಲಾರದೇ ಅವುಗಳೇ ಕಣ್ಣುಗಳಿಂದ ಇಳಿದುಬರುತ್ತಿರುವಂತೆ ಕಂಬನಿಗಳುದುರಿದವು. ಮಕ್ಕಳಂತೆ ಪುಟ್ಟತಾಯಿ ತನ್ನ ಬಲದ ಕೈಯ್ಯಿಂದ ಕಣ್ಣನ್ನು ಹೊಸಗಿಕೊಳ್ಳುತ್ತಾ ಗಟ್ಟಿಯಾಗಿ ಅಳಲಾರಂಭಿಸಿದಳು.

ಅವಳ ಕೈಯ್ಯನ್ನು ಕೀಳುತ್ತ ಕೀಳುತ್ತ ತಾಯಕ್ಕ ಸಮಾಧಾನದ ಮಾತುಗಳನ್ನು ಹೇಳತೊಡಗಿದಳು. ಅವಳ ಸಮಾಧಾನದಿಂದ ದುಃಖ ಹೆಚ್ಚುತ್ತಲೇ ಹೋಯಿತು. ಪುಟ್ಟತಾಯಿಯ ದುಃಖವು ಶಮನವಾಗಬೇಕಾದರೆ, ದೀಪ ಹಚ್ಚುವ ಸಮಯವಾಯಿತು. ತಾಯಕ್ಕ ಕಷ್ಟಪಟ್ಟು ಒಂದಷ್ಟು ಹುರುಳೀಸಾರು ಮಾಡಿ ಹಿಟ್ಟು ಮಾಡಿದ್ದಳು. ಮಗಳನ್ನು ಬಲವಂತಮಾಡಿ ಊಟಮಾಡಿಸಿದಳು. ಪುಟ್ಟತಾಯಿಯನ್ನು ಮಾತನಾಡಿಸಬೇಕೆಂದು ಬೇಕಾದಷ್ಟು ಪ್ರಯತ್ನ ಮಾಡಿ ಸೋತುಹೋದ ಕಾಳಕ್ಕ ತಾಯಿಮಕ್ಕಳನ್ನೇ ಅಂತರಂಗಕ್ಕೆ ಬಿಟ್ಟು ತನ್ನ ಮನೆಯ ದಾರಿಹಿಡಿದಿದ್ದಳು.

ಊಟವಾದಮೇಲೆ ಮಂದಲಿಗೆ ಹಾಸಿ ಬಳಿಯ ಕಂಬಳಿಯನ್ನೇ ಇಬ್ಬರೂ ಹೊದ್ದು ಮೌನವಾಗಿ ಮಲಗಿದರು. ಇಬ್ಬರಿಗೂ ಮಾತನಾಡಬೇಕೆನ್ನುವ ಹಂಬಲ ಬೆಟ್ಟದಷ್ಟಿತ್ತು. ಆದರೆ ಇಬ್ಬರಿಗೂ ಹೆದರಿಕೆ. ಮಾತನಾಡದೆಯೇ ಮಲಗಿಯೇ ಮಲಗಿದರು. ತಾಯಕ್ಕನ ಹಲ್ಲುನೋವು ಇತ್ತು. ಆದರೆ ಅವಳಿಗೆ ಜ್ಞಾಪಕವಿರಲಿಲ್ಲ ಅಷ್ಟೆ. ಮಗಳು ಬಂದದ್ದೇ ಅದರ ಔಷಧವಾಯಿತೇನೋ ಎಂದುಕೊಂಡಳು ತಾಯಕ್ಕ. ಇನ್ನೇನು ಮಂಪರು ಬರುವುದರಲ್ಲಿತ್ತು. ಅಷ್ಟರಲ್ಲಿ ಪುಟ್ಟತಾಯಿ ಗಕ್ಕನೆ ಹಾಸಿನಮೇಲೆದ್ದು ಕುಳಿತು ಅಳತೊಡಗಿದಳು. ತಾಯಕ್ಕನೂ ಹೊಡೆದೆಬ್ಬಿಸಿದವಳಂತೆ ಎದ್ದು ಕುಳಿತು ವಿಚಾರಿಸಿದಳು.

" ಏನಾಯ್ತು ಪುಟ್ಟ ? "

" ಇನ್ನೇನಾಯ್ತು ಮೈಮೂಳೆಯೆಲ್ಲ ಮುರಿದೋಗವೆ! ನೀನೇ ನನ್ನಾ ಅವನ ಕೈಗೆ ಕೊಟ್ಟು ಹಿಂಗೆ ಮಾಡ್ದೋಳು. ಅಯ್ಯೋ....ಅಪ್ಪಾ! "

" ಎಲ್ಲಾ ನೋಡವೇ ಏನಾಗದೆ ! "....

" ನೋಡೇನಾಗ್ಬೇಕಾಗದೆ ಬುಡು. ಒಂದೇ ಏಟಿಗೆ ಜೀವಾ ಆದರೂ ಹೊಂಟೋಗಿದ್ದರೆ ಎಷ್ಟೋ ಚೆನ್ನಾಗಿರದು ! "

" ನಿನ್ನ ಗಂಡ ಇಂತವನು ಅಂತ ನನಗೆ ಗೊತ್ತಿರಲಿಲ್ಲ ಕೂಸು. ಅಯ್ಯೋ ನನ್ನವ್ವ.... ಎಷ್ಟು ನೋಂಡ್ತೋ ಏನೋ ! "

" ಬರೀ ಏಟಾ ! ಆ ಬಯ್ಗುಳಾ ಯಾರ ಕೈಲಿ ಕೇಳಕ್ಕಾಯ್ತದೆ ? ಆ ಮಾತು ಕೇಳಕ್ಕಿಂತ ಕೆರೆಯೋ ಬಾವಿಯೋ ನೋಡ್ಕಳದು ಲೇಸು."

" ಏನಾಯ್ತು ಪುಟ್ಟ ಹೇಳವ್ವ ! ನೀ ಬಂದೊತ್ತಿನಿಂದಲೂ ನನ್ನ ಜೀವ ಹೊಡ್ಕತ್ಲೇ ಅದೆ. ಏನಾಯ್ತು ಹೇಳವ್ವ,."

ಪುಟ್ಟತಾಯಿ ಹೇಳಲು ಮೊದಲುಮಾಡಿದಳು. ಅವಳ ಮೈಕೈಗಳ ಮೇಲಿದ್ದ ಏಟುಗಳ ಕುರುಹನ್ನು ನೋಡಲು ಹತ್ತಿಸಿದ್ದ ಸೀಮೆಣ್ಣೆಬುಡ್ಡಿ ಉದ್ದಕ್ಕೆ ಉರಿಯುತ್ತಿತ್ತು.

ಪುಟ್ಟತಾಯಿಯ ಮನೆ ಪಾಲಾದ ಮೇಲೆ ಗೃಹಕೃತ್ಯದ ಖರ್ಚಿಗೆ ಮಾದೇವು ವಿಪರೀತ ಅವಕಾಶ ಕೊಡುತ್ತ ಬಂದಿದ್ದನು. ಅವನು ಆಗಾಗ್ಗೆ ಮನೆಯಲ್ಲಿ ಗೆಳೆಯರನ್ನು ಸೇರಿಸಿಕೊಂಡು ಟೀ ಸಮಾರಂಭ ಏರ್ಪಡಿಸುತ್ತಿದ್ದನು. ಅದರ ವೆಚ್ಚವೇ ಮಿಕ್ಕೆಲ್ಲ ವೆಚ್ಚಗಳಿಗೆ ಸರಿಸಮನಾಗುತ್ತಿತ್ತು. ಇದನ್ನು ಪುಟ್ಟತಾಯಿ ವಿರೋಧಿಸಿದಾಗಲೆಲ್ಲಾ ಮನೆಯಲ್ಲಿ ಜಗಳವಾಗುತ್ತಿತ್ತು. ಮಾದೇವು ಕೋಪ ಹೆಚ್ಚಿದಂತೆಲ್ಲಾ ಹುಚ್ಚನಾಗುತ್ತಿದ್ದನು. ಆ ಹುಚ್ಚಿನಲ್ಲಿ ಕೈಗೆ ಏನು ಸಿಕ್ಕಿದರೆ ಅದನ್ನು ಹಾಳುಮಾಡುತ್ತಿದ್ದನು. ಏನು ಸಿಕ್ಕಿದರೆ ಅದರಲ್ಲಿ ಪುಟ್ಟತಾಯಿಗೆ ಏಟು ಹಾಕುತ್ತಿದ್ದನು.

ಈ ವೆಚ್ಚದಿಂದಾಗಿ ಮಾದೇವೂವಿನ ಸಾಲ ಬೆಳೆಯಿತೆಂದು ಕಾಣಿಸುತ್ತದೆ. ಅವನು ಹಿತ್ತಿಲನ್ನು ಶಂಭುಗೌಡರಿಗೆ ಮಾರಿದನು. ಪುಟ್ಟತಾಯಿಗೆ ಕಾಸಿನ ಸರದ ಆಸೆಯನ್ನು ತೋರಿಸಿ ಅವಳ ಒಪ್ಪಿಗೆ ಪಡೆಯಲು ಸಾಧ್ಯವಾಗಲಿಲ್ಲ. ಕಾಸಿನ ಸರವೂ ತನಗೇ ಉಳಿಯಿತೆಂದು ಮತ್ತಷ್ಟು ದಿನ ಹಾಯಾಗಿದ್ದು ಬಿಟ್ಟನು. ಪುಟ್ಟತಾಯಿಗೆ ಅವನ ಅವಿವೇಕ ವರ್ತನೆಯಿಂದ ಬಲು ಬೇಸರವಾಗುತ್ತಿದ್ದರೂ ಜಗಳವಾಡುವಾಗ ಮಾದೇವೂ ವರ್ತಿಸುತ್ತಿದ್ದ ರೀತಿಯಿಂದ ಅಸಹ್ಯಗೊಳ್ಳುತ್ತಿದ್ದ ಪುಟ್ಟತಾಯಿ ಬಹಳ ದಿನ ಮಾತು ಬೆಳಸದೇ ಸುಮ್ಮನಿದ್ದು ಬಿಡುತ್ತಿದ್ದಳು.

ಒಂದು ದಿನ ಪುಟ್ಟತಾಯಿ ತೋಟಕ್ಕೆ ಹೋಗಿದ್ದಾಗ ಪಕ್ಕದ ಹೊಲದಲ್ಲಿದ್ದ ಚಿಕ್ಕಲಿಂಗಪ್ಪನವರು ಅವಳಿಗೆ ತಮ್ಮ-ಮಾದೇವೂವಿನ ಲೇವಾದೇವಿಯ ವಿಷಯವನ್ನು ತಿಳಿಸಿದರು. ಅದುವರೆಗೆ ಮಾದೇವು ಒಟ್ಟು ಏಳು ನೂರುರೂಪಾಯಿಗಳನ್ನು ಅವರಿಗೆ ಕೊಡಬೇಕಾಗಿತ್ತಂತೆ. "ನಿನ್ನ ಗಂಡನಿಗೆ ಸರಿಯಾಗಿ ಬುದ್ದಿ ಏಳಿ ಅತೋಟೇಲೀ ಮಡೀಕೋ!" ಎಂದು ಉಪದೇಶ ಮಾಡಿದ್ದರು. "ಈ ನಿನ್ನ ತೋಟಾನೂ ನನ್ಗೇ ಬರ್ಕೊಟ್ಟು ಬುಡಕ್ಕೂ ತಯಾರಾಗವ್ನೆ ನಿನ್ನ ಗಂಡ" ಎಂದೂ ಅವಳನ್ನು ಎಚ್ಚರಿಸಿದ್ದರು. ಆ ಮಾತಿನಿಂದ ಪುಟ್ಟತಾಯಿಗೆ ತಲೆಯಮೇಲೆ ಆಕಾಶ ಕಳಚಿ ಬಿದ್ದಂತಾಗಿತ್ತು.

ಎಷ್ಟೇ ತಡೆದುಕೊಂಡರೂ ಬದನೇಕಾಯಿನ ಮಾತಿಗೆ ಮಾತು ಬೆಳೆದು ಊಟ ಮಾಡುತ್ತಿದ್ದಾಗ ತೋಟವನ್ನು ಚಿಕ್ಕಲಿಂಗಪ್ಪನವರಿಗೆ ಬರೆದುಕೊಡುವ ಮಾತು ಬಂದೇ ಬಂದಿತು. "ಎದ್ವಾ—ತದ್ವಾ" ಜಗಳ ವಾಯಿತು. ಮಾದೇವು ಊಟಮಾಡುತ್ತಿದ್ದ ಭಾರವಾದ ಕಂಚಿನ ತಳಿಗೆ ಯನ್ನೇ ಎತ್ತಿ ಪುಟ್ಟತಾಯಿಯ ಕಡೆಗೆ ಬೀಸಿದನು. ಅದು ಪುಟ್ಟತಾಯಿಯ ಎಡಮುಂಡಿಗೆ ತಗುಲಿ ಸೊಕ್ಕಿದಂತೆ ಆಯಿತು. ಅದನ್ನು ಲೆಕ್ಕಿಸದೇ ಪುಟ್ಟ ತಾಯಿ ಮುಂದುವರಿದಳು. "ನೀನು ಆ ತೋಟ ಅವರಿಗೆ ಮಾಡಿದ ಮಾರನೇ ದಿನವೇ ನಿನ್ನ ಸಂಸಾರ ಬೀದಿಗೆ ತಂದು ನಿನ್ನ ಮಾನಾ ಹೋಗೋ ಅಂಗೇ ಮಾಡ್ದೇ ಇದ್ದರೆ ನಾನು ಅಪ್ಪನ ಮಗಳಲ್ಲ" ಎಂದು ಪುಟ್ಟತಾಯಿ ಅವನಿಗೆ ಏಕವಚನದ ಸವಾಲು ಹಾಕಿದಳು. ಅವನು ಎಂಜಲ ಕೈಯಲ್ಲಿ ಕೋಣೆಗೆ ನುಗ್ಗಿ ಹಿಟ್ಟಿನ ದೊಣ್ಣೆಯನ್ನು ತಂದು ಹೆಂಡತಿಗೆ ತಲೆ ತೂತು ಮಾಡಿದನು. ಅವಳು ನಿಂತ ನಿಲುವಿನಲ್ಲೇ ಮನೆ ಬಿಟ್ಟು ಹೊರಡುವುದಾಗಿ ಹೇಳಿ ಅಡಿಗೇ ಮನೆಯ ಹೊಸಿಲನ್ನು ದಾಟಿದಳು. ತಲೆ ಗೂದಲನ್ನು ಹಿಡಿದು ಮಾದೇವೂ ಅವಳನ್ನು ಒಳಕ್ಕೆಳೆದುಕೊಂಡು "ಇಂದೇ ನಿನ್ನ ಮುಗೀಸ್ಬುಡ್ತೀನಿ ತಾಳು" ಎಂದು ಬಲಗೈಯಲ್ಲಿ ಈಳಿಗೆಮಣೆಯನ್ನು ತೆಗೆದುಕೊಂಡನು. ಪುಟ್ಟತಾಯಿ 'ಸತ್ತೇ' ಎಂದು ಚೀರಿದಳು. ಅವಳ ದೊಡ್ಡ 'ವಾರಗಿತ್ತಿ' ಓಡಿಬಂದು ಹತ್ಯಾಕಾಂಡವನ್ನು ತಪ್ಪಿಸಿದಳು.

ಪುಟ್ಟತಾಯಿಯ ಮೇಲಿನ ಹಟಕ್ಕೆ ತೋಟವನ್ನು ಚಿಕ್ಕಲಿಂಗಪ್ಪ ನವರಿಗೆ ಬರೆದ ಹಾಗೆ ಮಾದೇವೂ ಬರೆದೇ ಬಿಟ್ಟನು. ಚಿಕ್ಕಲಿಂಗಪ್ಪನವರು ತಮ್ಮ ಬುದ್ಧಿವಂತಿಕೆಗೆ ತಾವೇ ಮೆಚ್ಚಿಕೊಂಡು 'ಸಾಬಾಸ್!' ಎಂದರು. ಅವರಿಗೆ ಇಷ್ಟು ಸುಲಭವಾಗಿ ಆ ಕೆಲಸವಾಗುವುದೆಂದಿರಲಿಲ್ಲ. ತಮ್ಮ ಸಾಲಕ್ಕೆ ಮೊದಲು ಅವನಿಂದ ಸ್ವತ್ತಿನಮೇಲಿನ ಆಧಾರ ಪತ್ರ ಬರೆಯಿಸಿ ಅನಂತರ ಬಹಳ ದಿನವಾದ ಮೇಲೆ ಕೋರ್ಟು ಹತ್ತಿ ಸ್ವತ್ತು ಸ್ವಾಧೀನ ಪಡಿಸಿಕೊಳ್ಳಬೇಕಾಗುವುದೆಂದು ತಿಳಿದುಕೊಂಡಿದ್ದರು.

ಮಾದೇವೂ ಕೈಯಲ್ಲಿ ಮತ್ತೆ ಮೊತ್ತವಾಗಿ ಹಣವನ್ನು ಕಂಡು ಪುಟ್ಟ ತಾಯಿ ಹೀಗಾಗಿರಬಹುದೆಂದು ಊಹಿಸಿದಳು. ಅದು ಹಾಲಿನ ಬಟ್ಟಮ್ಮ

ಹೇಳಿದಮೇಲೆ ಸ್ಥಿರವಾಯಿತು. ಪುಟ್ಟತಾಯಿ ಕದ್ದು ಮನೆಯಿಂದ ಓಡಿ ಹೋಗಲಿಷ್ಟಪಡಲಿಲ್ಲ. ಗಂಡನಿಗೆ ಹೇಳಿಯೇ ಹೊರಟುನಿಂತಳು. "ನೀ ಹೋದ್ರೆ ನಿನ್ನ ಮಾನವೇ ಓಯ್ತದೆ. ನನಗೆ ಶನಿಕಾಟ ತಪ್ತದೆ. ಹಾಳಾ ಗೋಗು" ಎಂದನು ಮಾದೇವು.

ಪುಟ್ಟತಾಯಿ ಹೊರಟು ಬಂದಳು. ಯಾರೂ ಅವಳನ್ನು ತಡೆಯ ಲಿಲ್ಲ. 'ವಾರಗಿತ್ತಿ'ಯರಿಗೆ ತಡೆಯಬೇಕೆಂಬ ಇಷ್ಟವಿದ್ದರೂ ಅವರ ಗಂಡಂದಿರಿಂದ ಅದಕ್ಕೆ ಅಡ್ಡಿಯಿತ್ತು. ಮಾದೇವೂವಿನ ಸಂಸಾರದ ಮಾತಿಗೆ ಹೋದರೆ ಅವನ ಬಾಯಿನ ಬೆಂಕಿ ಅವರ ಸಂಸಾರಕ್ಕೂ ತಗಲುವುದೆಂದು ಅವರಿಗೂ ಭಯವಿತ್ತು. ಪುಟ್ಟತಾಯಿ ಹೋದಳು. ಅವಳು ಹೋದುದು ಕಿರೀಕಾಟಗೆ ಎಂದು ವಾರಗಿತ್ತಿಯರಿಗೆ ಚೆನ್ನಾಗಿ ಗೊತ್ತಿತ್ತು. ಆದರೂ ಮಾದೇವೂ ತನ್ನ ಸಂಸಾರವನ್ನು ತಾನೇ ಲೇವಡಿಮಾಡಿಕೊಳ್ಳತೊಡಗಿದ್ದನು. ಪುಟ್ಟತಾಯಿ ಎಲ್ಲಿಗೊ ಓಡಿಹೋದಳೆಂದು ಅವನೇ ಊರಲ್ಲೆಲ್ಲಾ ಪ್ರಚಾರ ಮಾಡಿದ್ದನು.

ಪುಟ್ಟತಾಯಿಯ ವರದಿಯಿಂದ ಇಷ್ಟನ್ನು ಗ್ರಹಿಸಿಕೊಂಡು ತಾಯಕ್ಕ ದೊಡ್ಡದೊಂದು ನಿಟ್ಟುಸಿರನ್ನು ಬಿಟ್ಟಳು. ದೀಪ ಉರಿಯುತ್ತಲೇ ಇತ್ತು. ಪುಟ್ಟತಾಯಿ ಕೊನೆಯದಾಗಿ ಒಂದೆರಡು ಹನಿ ಕಣ್ಣೀರು ಹಾಕಿದಳು. ತಾಯಕ್ಕ ನೋಯುತ್ತಿದ್ದ ಹಲ್ಲಿನ ಮೇಲೆ ಒಂದು ಬಾರಿ ಗಾಳಿಯನ್ನೆಳೆದು ಕೊಂಡು ಒಂದು ಘಳಿಗೆ ಮೌನವಾಗಿ ಕುಳಿತಳು. ಪುಟ್ಟತಾಯಿಗೆ ತನ್ನ ಈ ನಡವಳಿಕೆಗೆ ತನ್ನ ತಾಯಿಯ ಪ್ರತಿಕ್ರಿಯೆ ಏನೆಂಬುದನ್ನು ತಿಳಿದು ಕೊಳ್ಳುವ ಕಾತರವಾಯಿತು. ಕೊಂಚ ಭಯವೂ ಆಯಿತು. ತಾಯಿ ತನ್ನದೇ ತಪ್ಪೆಂದು ಬಿಟ್ಟರೆ ಏನು ಮಾಡಬೇಕೆಂದು ಯೋಚಿಸಿದಳು. ಆ ಯೋಚನೆಯ ಗಾಬರಿಯಲ್ಲಿ ಅವಳ ದುಖಃವೆಲ್ಲ ಇಂಗಿಹೋಗಿತ್ತು. ಅವಳೊಮ್ಮೆ ತಿರುಗಿ ತಾಯಿಯ ಮುಖವನ್ನು ನೋಡಿದಳು. ತಾಯಕ್ಕನ ಮುಖದ ಅರ್ಧಕ್ಕೆ ಸರಿಯಾಗಿ ಬೆಳಕುಬಿದ್ದಿದ್ದು ಅರ್ಧ ಸರಿಯಾಗಿ ನೆರಳಿ ನಲ್ಲಿತ್ತು. ಬೆಳಕಿದ್ದ ಭಾಗದಲ್ಲಿ ದುಃಖದ ರೇಖೆಗಳು ಮೂಡಿದ್ದವು. ಮಗ ಳಿಗೆ ತಾಯಿ ಹಣ್ಣು ಮುದುಕಿಯಂತೆ ಕಂಡಳು.

ಭೂಮಿ ಬಿರಿದಷ್ಟು ಕಷ್ಟದಿಂದ ತಾಯಕ್ಕನ ತುಟಿಗಳು ಬಿರಿದವು. ಪುಟ್ಟತಾಯಿ ಕಾತರದಿಂದ ತನ್ನ ಬಗ್ಗೆ ತಾಯಿಯ ಬಾಯಿಂದ ಒಳ್ಳೆಯ ಎರಡು ಮಾತುಗಳನ್ನು ನಿರೀಕ್ಷಿಸಿದಳು. ತಾಯಕ್ಕ ಕತ್ತರಿಸಿ ಹಾಕಿದಂತೆ ಅಂದಳು.

" ಪುಟ್ಟೀ ನೀನು ತೌರಿನ ಮಾನಾ ಮಣ್ಣುಪಾಲು ಮಾಡಿದೆ "

ಪುಟ್ಟತಾಯಿಗೆ ಗಂಡನ ಏಟಿಗಿಂತಲೂ ಜೋರಾದ ಏಟೊಂದು ಬಿದ್ದಂತಾಯಿತು. ಆದರೂ ಚೇತರಿಸಿಕೊಂಡು ಹೇಳಿದಳು.

" ಇಲ್ಲೀಗ್ಹೋಯ್ತೀನೀಂತ ನಾನವನ್ಗೆ ಹೇಳಬುಟ್ಟೇ ಬಂದಿರೋದು "

" ಅವನೆಲ್ಲರಿಗೂ ಹೇಳೋದು ಬೇರೆ ಪುಟ್ಟೀ. ಇದ್ನ ನೀನು ಮಕ್ಕಳಾಟ ಅಂತ ತಿಳ್ಕಂಡೆ. ನನಗೊಂದು ಕೆಟ್ಟ ಎಸರಿನ ಕಲ್ಲು ಹೊರ ಸಿದೆ "

" ಸರಿ, ನನ್ನಿಂದ ನಿನಗ್ಯಾಕ್ಕಷ್ಟ. ಬೇಡ ಅಂದ್ರೆ ನಿನ್ನ ಅಟ್ಟೀನೂ ಬಿಟ್ಹೋಯ್ತೀನಿ "

" ಎಲ್ಲಿ ಓದೀಯೆ !"

" ಅಂಜ್ಕ ಬೇಡ ನಿನ್ನ ಯಾವ ನೆಂಟರಟ್ಟಿಗೂ ಓಗಕ್ಕಿಲ್ಲ "

" ನಿನಗೆ ಬುದ್ದಿ ಕೆಟ್ಹೋಗದೆ ಪುಟ್ಟಿ. ನಾನು ಅಟ್ಟೀ ಬುಟ್ಟು ಓಗೂ ಅನ್ನಿಲ್ಲ. ನಿನ್ನಗಂಡ ಮಾಡಿದ್ದೂ ತಪ್ಪೆ. ನೀನು ಮಾಡಿದ್ದೂ ತಪ್ಪೆ. ಓಗ್ಲಿ, ನೀನು ಮಾಡಿದ್ದು ತಪ್ಪೂಂತ ತಿಳ್ಕೋ. ಅಷ್ಟಾದ್ರೆ ಸಾಕು. ನೀನೆಲ್ಲಿಗೂ ಓಗ್ಬೇಗಾಗಿಲ್ಲ. ಅಷ್ಟೇ ನಾ ಏಳದು "

ಪುಟ್ಟತಾಯಿಗೆ ತಾಯಕ್ಕ ಆಡಿದ ಸಮಾಧಾನದ ಮಾತು ಬಹಳ ಬಲವಂತಕ್ಕೆ ಬಂದಿದ್ದಂತಿತ್ತು. ಅದರ ಜೊತೆಯಲ್ಲೇ ತನ್ನ ಮತ್ತೊಂದು ಸಂಶಯವನ್ನೂ ನೀಗಿ ಕೊಳ್ಳಬೇಕೆಂದು ತಾಯಿಗೊಂದು ಮಾತು ಹಾಕಿದಳು.

" ಒಂದಷ್ಟು ಜಿನ ಬುಟ್ಕಂಡು 'ಗಂಡನ ಮನೇಗೆ ಓಗ್ರೂ, ನಡೀ ನಾನೂ ಬತ್ತೀನಿ' ಅಂದ್ರೆ ಆಗಕ್ಕಿಲ್ಲ ಅದನ್ನು ಈಗಲೇ ಏಳ್ಬುಡು "

ತಾಯಕ್ಕನಿಗೆ ಎಲ್ಲಾ ಮಾತನ್ನು ಒಂದೇ ದಿವಸದಲ್ಲಿ ಆಡಿ ಮುಗಿಸಿ ಬಿಡುವುದು ಒಳ್ಳೆಯದಲ್ಲವೆನಿಸಿತು. ಬುಟ್ಟಿ ಸಣ್ಣದಾಗುತ್ತ ಬರುತ್ತಿತ್ತು. ಅದನ್ನೆತ್ತಿ ಅಲುಗಾಡಿಸಿ ನೋಡಿದಳು ಎಣ್ಣೆ ಮುಗಿಯುತ್ತ ಬಂದಿತ್ತು.

"ಓಗ್ಲೀ ಮಲೀಕೋ ಪುಟ್ಟಿ. ಯಾರ‍್ಯಾರ ಅಣೇಲಿ ಎಂಗೆಂಗೆ ಬರ‍್ದದೋ ಅಂಗಾಗ್ಲಿ" ಎಂದು ತಾಯಕ್ಕ ಹಿಂದಕ್ಕೆ ಒರಗಿದಳು. ಪುಟ್ಟತಾಯಿಗೂ 'ಹಣೆಯಬರಹ' ಮಾತನ್ನು ಕೇಳಿ ಸ್ವಲ್ಪ ಬೆದರಿಕೆಯಾಗಿತ್ತೇನೋ ಅವಳಿಗೂ ಸಂಭಾಷಣೆಯನ್ನು ನಿಲ್ಲಿಸುವುದು ಒಳ್ಳೆಯದೆಂದು ತೋರಿತು. ದೀಪ ಆರಿತು.

ಸ್ವಲ್ಪ ಹೊತ್ತಾದಮೇಲೆ ಪುಟ್ಟತಾಯಿಗೆ ನಿದ್ದೆ ಬಂದು ಬಿಟ್ಟಿತು. ಅವಳ ಚಿಂತೆಗಳನ್ನೆಲ್ಲಾ ವಹಿಸಿಕೊಂಡವಳಂತೆ ತಾಯಕ್ಕ ಮುಸುಕಿನೊಳಗೇ ಕಣ್ಣು ಬಿಟ್ಟುಕೊಂಡು ಯೋಚಿಸತೊಡಗಿದಳು. ಇಷ್ಟಕ್ಕೂ ಕಾರಣ ಪುಟ್ಟ ತಾಯಿಯೂ ಅಲ್ಲ—ಮಾದೇವೂ ಕೂಡ ಅಲ್ಲ. ಚಿಕ್ಕಲಿಂಗಪ್ಪ! ಅವ ನಿಂದಲೇ ಇಷ್ಟೆಲ್ಲ ಆಗಿದ್ದು. ಈಗ್ಗೆ ಸ್ವಲ್ಪ ದಿನಗಳ ಹಿಂದೆ ಬಂದು ಆತ ತನ್ನನ್ನು ದುಡ್ಡಿಗೆ ಒತ್ತಾಯ ಮಾಡಿದ ಕಾರಣ ಈಗ ತಿಳಿದಂತಾಯಿತು.

ಚಿಕ್ಕಲಿಂಗಪ್ಪನವರು ತಾಯಕ್ಕನಿಂದ ಯಾವ ವಿಧವಾದ ಸವಿ ಮಾತುಗಳನ್ನೂ ಹೊಂದಲಾರದೇ ಬೇಜಾರಿನಿಂದ ಒಂದು ಬಾರಿ ಹಣಕ್ಕೆ ತಗಾದೆ ಮಾಡಿದರು. ತಾವು 'ನೀರೆತ್ತುವ ಮಿಷನ್' ಒಂದನ್ನು ತೆಗೆದು ಕೊಳ್ಳಬೇಕಾಗಿದೆಯೆಂದು ಹಣಕ್ಕೆ ಅವಶ್ಯಕತೆಯನ್ನು ಸೂಚಿಸಿದ್ದರು. ಅವರ ನೀರೆತ್ತುವ ಮಿಷನ್ನಿನ ಅಗತ್ಯ ತಾಯಕ್ಕನಿಗೆ ಈಗ ತಿಳಿಯಿತು. ಮಾದೇವೂ ತೋಟ ಅವರಿಗೆ ಸೇರಿದ ಮೇಲೆ ಅವರ ವಿಶಾಲವಾದ ಜಮೀನಿಗೆ 'ಅಡ್ಡಾಳ'ದ ಕರೆ ಸಿಕ್ಕಿತ್ತು. ಆರು ತಿಂಗಳು ಅಡ್ಡಾಳದಲ್ಲಿ ನೀರಿರುತ್ತಿತ್ತು. ಅದನ್ನು ಮಿಷನ್ನಿನಿಂದ ಎತ್ತಿಸಿಕೊಂಡರೆ ಅವರ ಎಲ್ಲಾ ಜಮೀನೂ ಖುಷ್ಕಿ ಯಿದ್ದದ್ದು ಬಾಗಾಯಿತಾಗುತ್ತಿತ್ತು.

ಇದೊಂದು ಕಾರಣಕ್ಕಾಗಿ ಅವರು ಮಾದೇವು ಮದುವೆಯನ್ನು ಮಾಡಿಸಿ, ಅವನಿಂದ ಮನೆಯ ಪಾಲು ಮಾಡಿಸಿದುದು ಎಂದು ತಾಯಕ್ಕ ಆಲೋಚಿಸಿದಳು. ಅವಳ ಮೈ ಕೋಪ ಮತ್ತು ಭಯದಿಂದ ಆದ್ಯಂತವಾಗಿ

ಒಂದು ಬಾರಿ ನಡುಗಿತು. ಅವರಿಗೆ ತನ್ನ ಸ್ವತ್ತುಗಳೂ ಆಧಾರವಾಗಿವೆ. ಅದರ ಹಿನ್ನೆಲೆಯಲ್ಲಿ ಅವರ ಯಾವ ದುರಾಶೆ ಅಡಗಿದೆಯೋ ಎಂದು ತಾಯಕ್ಕ ಗಾಬರಿಗೊಂಡಳು. ಪಕ್ಕದಲ್ಲಿ ತಾಯಿಯೊಡನೆ ಮಲಗಿದ ಮರಿಯಂತೆ ನಿರ್ಭೀತಳಾಗಿ ಪುಟ್ಟತಾಯಿ ಮಲಗಿದ್ದಳು.

ವಿವೇಕವೋ ಅವಿವೇಕವೋ ಅಂತೂ ಪುಟ್ಟತಾಯಿ ಗಂಡನನ್ನು ಬಿಟ್ಟು ಬಂದಿದ್ದುದಾಗಿತ್ತು. ಮುಂದೇನು ಮಾಡಬೇಕೆಂಬುದೇ ತಾಯಕ್ಕನಿಗೆ ತಿಳಿಯದಾಗಿತ್ತು. ಆ ಪರಿಸ್ಥಿತಿ ಅವಳಿಗೆ ತೀರ ಹೊಸದಾಗಿ ತೋರುತ್ತಿತ್ತು. ಬೆಳಗಾದ ಕೂಡಲೇ ಪುಟ್ಟತಾಯಿ ಬಗ್ಗೆ ಕಿರೀಕಾಟಯಲ್ಲಿ ಏನೇನು ಮಾತು ಹುಟ್ಟುವುದೋ ಎಂಬ ಹೆದರಿಕೆಯಾಯಿತು. ಅದೇ ಹೆದರಿಕೆಯಿಂದಲೇ ಪುಟ್ಟತಾಯಿ ಕೂಡ ತನ್ನ ತಾಯಿಯ ಮನೆಯನ್ನ ಪ್ರವೇಶಿಸಿದುದು ಹಿಂದಿನ ಬಾಗಿಲಿನಿಂದ. ಕಾಡು ಬಿದ್ದು ಹೊಲಗೇರಿಯ ಮಗ್ಗುಲಿನ ದಾರಿಯಿಂದ ಬಂದು ತಾಯಿಯ ಮನೆಯ ಹಿತ್ತಲನ್ನು ಪ್ರವೇಶಿಸಿದ್ದಳು. ಅದು ತನ್ನೊಬ್ಬಳಿಗೆ ಕಾಳಕ್ಕ ಒಬ್ಬಳಿಗೆ ಮಾತ್ರ ತಿಳಿದಿತ್ತು.

ಕಾಳಕ್ಕ ತಮ್ಮ ಮರ್ಯಾದೆಯನ್ನು ಸಿಕ್ಕಿದವರ ಬಾಯಿಪಾಲು ಮಾಡುವವಳಲ್ಲವೆಂದು ಯೋಚಿಸಿಕೊಂಡಾಗ ತಾಯಕ್ಕನಿಗೆ ಕಾಳಕ್ಕನನ್ನು ಸಲಹೆ ಕೇಳಬಹುದೆನ್ನಿಸಿತು. ಪುಟ್ಟತಾಯಿಯು ಮಾಡಿಕೊಂಡಿದ್ದ ತಪ್ಪಿಗಾಗಿ ತಾಯಕ್ಕನೇ ಅವಳನ್ನು ಕರೆದುಕೊಂಡು ಹೋಗಿ ಗುಜ್ಜಗೆರಗೆ ಬಿಟ್ಟು ಬರಬೇಕೆಂದು ಕಾಳಕ್ಕ ಸಲಹೆಕೊಟ್ಟರೇನು ಮಾಡುವುದು ? ಗುಜ್ಜಗೆರೆಯವರನ್ನು ಯಾವ ಮುಖ ಹೊತ್ತು ಸಂಧಿಸುವುದು ? ಹ್ಞು ಬೆಳಗಾಗಲಿ ........ಎಂದು ಕೊಂಡು ತಾಯಕ್ಕ ಬೇರೆಯ ಮಗ್ಗುಲಾದಳು. ಹಲ್ಲು ನೋವಿಲ್ಲದಿದ್ದುದರಿಂದಲೂ ಬೆಳಗಿನ ಝಾವವು ಸಮೀಪಿಸುತ್ತಿದ್ದುದರಿಂದಲೂ ನಿದ್ದೆ ಬಂದಿತು.

ಮಾರನೆಯ ದಿನ ಕಾಳಕ್ಕನಿಗೆ ಪುಟ್ಟತಾಯಿಯ ವಿಷಯವನ್ನೆಲ್ಲಾ ಆಮೂಲಾಗ್ರವಾಗಿ ವಿವರಿಸಲಾಯಿತು. ಪುಟ್ಟತಾಯಿ ಎದುರಿಗಿರುವಾಗ ಕಾಳಕ್ಕನೂ ಪುಟ್ಟತಾಯಿಯದೇ ತಪ್ಪೆಂದೂ ಅವಳನ್ನು ಸ್ವಲ್ಪ ದಿವಸ ಬಿಟ್ಟುಕೊಂಡು ಗುಜ್ಜಗೆರೆಗೆ ಬಿಟ್ಟು ಬರಬೇಕೆಂದೂ ತೀರ್ಪುಕೊಟ್ಟಳು. ಪುಟ್ಟ

ತಾಯಿ ಸಿಡಾರೆಂದು ಅಲ್ಲಿರದೇ ಎದ್ದು ಹೋದ ಮೇಲೆ ಕಾಳಕ್ಕ ತಾಯಕ್ಕ ನಿಗೆ ಹೇಳಿದ ತೀರ್ಪೇ ಬೇರೆ. ಮಾದೇವೂ ತಪ್ಪೇ ಇದರಲ್ಲಿ ಹೆಚ್ಚಾಗಿರು ವುದರಿಂದ ಅವನು ಬಂದು ಬೇಡಿಕೊಳ್ಳುವವರೆಗೂ ತಾಯಕ್ಕ ಮಗಳನ್ನು ಮನೆಯಲ್ಲೇ ಇಟ್ಟುಕೊಂಡು ಬುದ್ಧಿ ಹೇಳುತ್ತಿರಬೇಕೆಂದೂ, ಹಾಗೆ ಮಾಡದೆ ಪುಟ್ಟತಾಯಿಯನ್ನು ಅಲ್ಲಿಗೆ ತಾಯಕ್ಕನೇ ಕರೆದುಕೊಂಡು ಹೋದರೆ ಮಾದೇವೂಗೆ ಅತ್ತೆ ಹೆಂಡತಿಯರ ವಿಷಯದಲ್ಲಿ ಮತ್ತಷ್ಟು ಸದರ ವಾಗಿ ಬಿಡುವುದೆಂದೂ ಕಾಳಕ್ಕ ಅಭಿಪ್ರಾಯಪಟ್ಟಳು.

ಮತ್ತೊಂದು ದಿವಸದ ಯೋಚನೆಯಿಂದ ತಾಯಕ್ಕನಿಗೂ ಕಾಳಕ್ಕನ ನಿರ್ಧಾರವೇ ಸರಿಯೆನ್ನಿಸಿತು. ಹೆಂಡತಿ ಮನೆಗೆ ಬಂದು ಎರಡು ವರ್ಷ ತುಂಬುವುದರೊಳಗಾಗಿ ಬದುಕು ಬಾಳೆಲ್ಲವನ್ನೂ ಕಳೆದುಕೊಂಡು ಅಳಿಯನ ಬಗ್ಗೆ ಅತ್ತೆಗೂ ಕೋಪವೇ ಸ್ಥಿರ ಪಟ್ಟಿತು. ಇದಾಗಿ ಹತ್ತಾರು ದಿನಗಳಾ ದರೂ ಗುಜ್ಜಗೆರೆಯ ಸುದ್ದಿಯನ್ನೇ ಎತ್ತದ ತಾಯಿಯ ವಿಷಯದಲ್ಲಿ ಪುಟ್ಟ ತಾಯಿಗೆ ವಿಶ್ವಾಸ ಬಂದಿತು. ಅವಳ ಕಳವಳವೆಲ್ಲ ನಾಶವಾಗಿ ಹಾಯಾ ಗಿದ್ದುಕೊಂಡಳು.

ಗಂಡನನ್ನು ಬಿಟ್ಟು ತಾಯಿಯ ಮನೆಗೆ ಪುಟ್ಟತಾಯಿ ಓಡಿಬಂದ ವಿಷಯ ಕಿರೀಕಾಟೆಯಲ್ಲೆಲ್ಲಾ ಪ್ರಚಾರವಾಗಲು ಒಂದೇ ಒಂದು ಹಗಲು ಸಾಕಾಯಿತು. ಹೆಂಗಸರು ಕೆಲವರು ಪುಟ್ಟತಾಯಿ ಇದ್ದಲ್ಲಿಗೇ ಬಂದು ವಿಚಾರಿಸಿಕೊಂಡುಹೋಗುತ್ತಿದ್ದರು. ಪುಟ್ಟತಾಯಿಗೆ, ಅವರೊಡನೆ ಮಾತ ನಾಡುವುದರಲ್ಲಿ ಎಳ್ಳಷ್ಟೂ ಅವಮಾನ ಕಾಣುತ್ತಿರಲಿಲ್ಲ. ಬಂದವರೆಲ್ಲರೂ ಪುಟ್ಟತಾಯಿಯ ಗಂಡನದೇ ತಪ್ಪೆಂದು ಹೇಳಿ ಅವಳನ್ನು ಸಮಾಧಾನಪಡಿಸಿ ಹೋಗುತ್ತಿದ್ದರು. ಹಿಂದೆ ನಗುತ್ತಿದ್ದರೋ ಏನೋ ಅದು ತಾಯಕ್ಕನಿಗೂ ಬೇಕಾಗಿರಲಿಲ್ಲ, ಪುಟ್ಟತಾಯಿಗಂತೂ ಅದರ ಪರಿವೆಯೇ ಇರಲಿಲ್ಲ.

ತಾಯಿಯೂ ಮಗಳಿಗೆ ಮನೆಯಿಂದ ಹೊರಗೆ ತಲೆಹಾಕುವ ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ. ಅದೇಕೋ ಊರಿನ ಹೆಣ್ಣುಮಕ್ಕಳು ಪುಟ್ಟ ತಾಯಿಯ ಜೊತೆಗೆ ಆಡಲು ಬರುತ್ತಿರಲಿಲ್ಲ. ಪುಟ್ಟತಾಯಿಗೆ ಅದು ಆಡುವ ವಯಸ್ಸೂ ಅಲ್ಲ. ಆದುದರಿಂದ ಅವಳು ಕಾಲಕಳೆಯಲು ನಿದ್ದೆಯ ಆಶ್ರಯ

ವನ್ನೇ ಪಡೆಯಬೇಕಾಗಿತ್ತು. ಬೆಳಿಗ್ಗೆ ಮನೆಗೆಲಸಗಳಲ್ಲಿ ತೊಡಗಿದ್ದು ಮಧ್ಯಾಹ್ನದ ಊಟವಾಯಿತೆಂದರೆ ಊಟದಮನೆಯಲ್ಲೇ ಒಂದು ಮಂದಲಿಗೆ ಯನ್ನೆಳೆದು ಪುಟ್ಟತಾಯಿ ಮಲಗಿಬಿಡುತ್ತಿದ್ದಳು. ನಿದ್ದೆ ಮುಗಿಸಿ ಅವಳು ಏಳುತ್ತಿದ್ದುದು ಒಂದೊಂದು ದಿವಸ ಹೊತ್ತು ಬಿದ್ದಮೇಲೆಯೆ. ಸಂಜೆ ಊಟ, ಪುನಃ ನಿದ್ದೆ. ಅಭ್ಯಾಸ ಬಲದಿಂದ ಬಂದ ಅವಳಿಗೆ ಎರಡು ಹೊತ್ತು ನಿದ್ದೆ ಚೆನ್ನಾಗಿಯೇ ಬರತೊಡಗಿತು. ತಾಯಕ್ಕ ಎಷ್ಟು ಕೂಗಿದರೂ ಪುಟ್ಟ ತಾಯಿಗೆ ಎಚ್ಚರವೇ ಇರುತ್ತಿರಲಿಲ್ಲ. ಅದು ಸರಿಯಲ್ಲವೆಂದು ತಾಯಕ್ಕ ಎಷ್ಟುಬಾರಿ ಹೇಳಿದರೂ ಪ್ರಯೋಜನವಾಗಿರಲಿಲ್ಲ.

ಹಾಗೆ ಅವಳನ್ನು ಮಧ್ಯಾಹ್ನದ ವೇಳೆಯಲ್ಲಿ ಎಚ್ಚರವಾಗಿರುವಂತೆ ಮಾಡಲು ತಾಯಕ್ಕ ಅವಳಿಗೆ ಯಾರಾದರೊಬ್ಬ ಗೆಳತಿಯನ್ನು ಹೊಂಚಿ ಕೊಟ್ಟಿದ್ದರೆ ಆಗುತ್ತಿತ್ತು. ತಾವಾಗಿ ಯಾರೂ ಪುಟ್ಟತಾಯಿಯ ಬಳಿಗೆ ಬರುತ್ತಿರಲಿಲ್ಲ. ಆ ದಿವಸ ಬೆಳಿಗ್ಗೆ ಯೀರಣ್ಣನ ಮನೆಯಲ್ಲಿ ಖಾರದ ಪುಡಿ ಯನ್ನು 'ಇಡಿ'ಯುತ್ತಿದ್ದರಂತೆ. ಯೀರಣ್ಣನ ಹುಡುಗಿ ಬಂದು ತಾಯಕ್ಕನ ಮನೆಯ ಒನಕೆಯನ್ನು ತೆಗೆದುಕೊಂಡುಹೋದಳು. ಆಗ ಪುಟ್ಟತಾಯಿ ಅವಳನ್ನು ಮಾತನಾಡಿಸಿದ್ದಳು. ಪುನಃ ಮಧ್ಯಾಹ್ನಕ್ಕೆ ಮನೆಗೆ ಬಾರೆಂದು ಕರೆದಿದ್ದಳು. ಬರುತ್ತಾ ಅಂಗಡಿಯಿಂದ 'ಚಿರಕುಳ್ಳಿ' ತೆಗೆದುಕೊಂಡು ಬಾರೆಂದು ಅವಳ ಕೈಯಲ್ಲಿ ಒಂದಾಣೆಯನ್ನೂ ಕೊಟ್ಟಿದ್ದಳು.

ಮಾತಿನ ಪ್ರಕಾರ ಯೀರಣ್ಣನ ಮಗಳು 'ಚಿರಕುಳ್ಳಿ'ಯಸಮೇತ ಬಂದಳು. ಕೊಂಚ ಹೊತ್ತು ಇಬ್ಬರೂ 'ಅಣ್ಣೆಕಲ್ಲು' ಆಡುತ್ತಿದ್ದರು. ಅಷ್ಟರಲ್ಲಿ ಬೀದಿಯಲ್ಲಿ ಬಹುದೂರದಲ್ಲೇ ಯೀರಣ್ಣನ ತಾಯಿ ಆ ಹುಡುಗಿ ಯನ್ನು ಹುಡುಕಿಕೊಂಡು ಅರಚಿಕೊಂಡು ಬರುತ್ತಿರುವುದು ಕೇಳಿಸಿತು. ಆ ಮುದುಕಿ ಬಂದದ್ದೇ ಮಗಳನ್ನು ಹೀನಾಮಾನವಾಗಿ ಅಂದು ಕೈಹಿಡಿ ದೆಳೆದು ದಾರಿಗೆ ಬಿಟ್ಟಳು. ಹೋಗುವಾಗ ಒಂದು ಮಾತನಾಡಿದಳು, "ತಡೀಕಂಡು ಬಂದವಳೆ ಮುಂತಾನಸ್ತರ ಒಡನಾಟಕ್ಕೆ." ಆ ಮಾತಿನ ಮುಳ್ಳು 'ವಡ್ಡಿ'ಯಾದ ಪುಟ್ಟತಾಯಿಯ ಹೃದಯಕ್ಕೂ ತಗುಲಿತು. ಪುಟ್ಟ ತಾಯಿಗೆ ತನ್ನಲ್ಲಿಗೆ ಯಾವ ಹುಡುಗಿಯರೂ ಏಕೆ ಬರುತ್ತಿಲ್ಲವೆಂಬುದಕ್ಕೆ

ಕಾರಣ ಆ ದಿವಸ ತಿಳಿಯಿತು. ಸರ್‍ರನೆ ಎದ್ದು ಹೋಗಿ ಊಟದಮನೆಯಲ್ಲಿ ಚಾಪೆಯನ್ನು ಹಾಸಿ ಬಿದ್ದುಕೊಂಡಳು.

ತಾಯಕ್ಕ ಆ ಮಾತನ್ನು ಕೇಳಿದ್ದರೆ ಇನ್ನೆಷ್ಟು ದುಃಖಿಸುತ್ತಿದ್ದಳೋ? ಅವಳಾಗ ಹಿತ್ತಲಿನಲ್ಲಿ ಬಟ್ಟೆಗಳನ್ನು ಹಿಂಡುತ್ತಿದ್ದಳು. ಬಟ್ಟೆಯನ್ನು ಒಗೆಯುತ್ತಿರುವಾಗ ಮಿಕ್ಕ ಯಾವ ಶಬ್ದವೂ ಕಿವಿಗೆ ಬೀಳುತ್ತಿರಲಿಲ್ಲ ಯೀರಣ್ಣನ ತಾಯಿಯ ಹಗರಣವನ್ನು ಆ ಬಟ್ಟೆಗಳು ಅವಳ ಕಿವಿಗೆ ಹಾಕಲಿಲ್ಲ. ಬಟ್ಟೆಗಳನ್ನು ಹಿಂಡಿ ಆದಮೇಲೆ ಅವುಗಳಲ್ಲಿ ಕೆಲವನ್ನು ಹಿತ್ತಲಿನ ಬೇಲಿಗೇ ಒಣಗಹಾಕಿ ಕೆಲವನ್ನು ತೊಟ್ಟಿಯ ಸೂರಿಗೆ ಕಟ್ಟಲು ಮನೆಯೊಳಕ್ಕೆ ತಂದಳು. ಚಿಕ್ಕಲಿಂಗಪ್ಪನವರು ತಲೆಬಾಗಿಲಿನಿಂದ ಮನೆಯನ್ನು ಪ್ರವೇಶಿಸುತ್ತಿದ್ದರು.

ನಿರ್ವಾಹವಿಲ್ಲದೇ ಅವರನ್ನು ಒಳಕ್ಕೆ ಸ್ವಾಗತಿಸಬೇಕಾಯಿತು. ಚಿಕ್ಕಲಿಂಗಪ್ಪನವರು ಬಂದು ಊಟದ ಮನೆಯ ಎದುರಿನ ಹಜಾರದಲ್ಲಿ ಕುಳಿತರು. ಸಾಧಾರಣವಾಗಿ ಇರುತ್ತಿದ್ದಹಾಗೆ ಅವರ ಜೊತೆಯಲ್ಲಿ ಆ ದಿವಸ ಯಾರೂ ಇರಲಿಲ್ಲ. ಚಿಕ್ಕಲಿಂಗಪ್ಪನವರು ಸುತ್ತಲೂ ನೋಡುತ್ತಿದ್ದರು. ತಲೆಬಾಗಿಲು ಅರ್ಧ ಮಾತ್ರ ತೆರೆದಿತ್ತು. ಅವರು ಪುಟ್ಟತಾಯಿಯನ್ನು ಹುಡುಕಿದರೇನೋ ? ಅವಳ ಸುಳಿವನ್ನು ಕಾಣದೆ ಕಣ್ಣುಗಳನ್ನುತಾಯಕ್ಕನ ಕಡೆಗೇ ತಿರುಗಿಸಿ ತಂದರು. ತಾಯಕ್ಕ, ನೀರಿನಲ್ಲಾಡಿ ಬಂದಿದ್ದವಳು. ತೊಟ್ಟಿದ್ದ ರವಿಕೆಯನ್ನೂ ಹಿಂಡಿ ಬೇಲಿಯಮೇಲೆ ಒಣಗಿಹಾಕಿದ್ದಳು. ಸೆರಗನ್ನು ತೋಳಕೆಳಗಿಂದ ತಂದು ನಡುವಿಗೆ ಬಲವಾಗಿ ಸಿಕ್ಕಿಸಿದ್ದಳು. ಮಂಡಿಯವರೆಗೆ ಎತ್ತಿಕಟ್ಟಿದ್ದರೂ ಸೀರೆ ತುಂಬಾ ತೇವವಾಗಿಹೋಗಿತ್ತು. ಬಾಯಗಲದ ಹಂಡೆಯಲ್ಲಿ ಭಾವಿಯಿಂದ ನೀರು ತಂದುಕೊಳ್ಳುವಾಗ ತುಳುಕಿ ತುಳುಕಿ ಎಡಭಾಗವೆಲ್ಲ ಸಂಪೂರ್ಣವಾಗಿ ತೋಯ್ದುಹೋಗಿತ್ತು. ಈ ಪರಿಸ್ಥಿತಿಯಲ್ಲಿ ತಾಯಕ್ಕ ಚಿಕ್ಕಲಿಂಗಪ್ಪನವರ ಕಣ್ಣಿಗೆ ಬಿದ್ದು ಕಷ್ಟಕ್ಕೀಡಾದಳು.

ಪಾಪ, ಪಟೇಲರು ಆ ದಿನ ಕಿರೀಕಾಟಿಗೆ ಬಂದಿದ್ದದ್ದು ಯಾವುದೋ ನ್ಯಾಯ ತೀರ್ಮಾನಕ್ಕಾಗಿ. ಕಿರೀಕಾಟಿಗೆ ಬಂದಮೇಲೆ ತಮ್ಮ 'ಲೇವಾದೇವಿ'ಯಿರುವ ಕಡೆ ಬರದೇ ಹೇಗೆಂದು ತಾಯಕ್ಕನ ಮನೆಯಕಡೆಗೆ ಬಂದಿ

ದ್ದದ್ದು. ಪುಟ್ಟತಾಯಿಯು ಕಿರೀಕಾಟೆಯಲ್ಲಿರುವುದೇ ಅವರ ನಿರುತ್ಸಾಹಕ್ಕೆ ದೊಡ್ಡ ಕಾರಣವಾಗಿತ್ತು. ಎಂದರೆ ಅವರು ಅಲ್ಲಿಗೆ ಉದ್ದೇಶರಹಿತರಾಗಿ ಬಂದಿದ್ದವರು. ಆದರೆ ಈ ವಾತಾವರಣ ಅವರಿಗೆ ನಿರುತ್ಸಾಹಕರವಾಗಿ ಕಾಣಲಿಲ್ಲ. ವರ್ಷಾಂತರ ಬಲೆ ಬೀಸಿಕೊಂಡು ಕುಳಿತು ಬೇಸರಗೊಂಡಿದ್ದ ಬೇಡನಿಗೆ ಪ್ರಾಣಿಯು ಎದುರಿಗೆ ಬಂದಾಗ ಕೈಯಲ್ಲಿಯೇ ಹಿಡಿದು ನಿಲ್ಲಿಸುವಷ್ಟು ರೊಚ್ಚು ಬಂದಿತು.

ಸುತ್ತುಮುತ್ತಿನ ಪರಿಜ್ಞಾನವನ್ನೇ ಗಂಡು. ಬಿಟ್ಟುಕೊಟ್ಟಿತು. ನಾಲ್ಕಾರುಜನಗಳ ಬಾಯಲ್ಲಿ ಈಗಾಗಲೇ ಬಂದುಹೋಗಿದ್ದ ತನ್ನ-ತಾಯಕ್ಕನ ಸಂಬಂಧದ ವಿಷಯ ಅವಳಿಗೂ ತಿಳಿದಿರಬಹುದೆನ್ನಿಸಿತು. ತನ್ನ ಋಣದಲ್ಲಿ ಸಿಕ್ಕಿಬಿದ್ದಿರುವ ಆ ಪ್ರಾಣಿ ಹೆಚ್ಚು ಗಲಾಟೆ ಮಾಡಿಕೊಳ್ಳಲಾಗುವುದಿಲ್ಲವೆಂದು ಭಾವಿಸಿತು. ಇಷ್ಟರಮೇಲೆ ಗಲಾಟೆಯಾದರೆತಾನೇ ಏನಂತೆ? ತಾಯಕ್ಕನಿಗೆ ಕಿರೀಕಾಟೆಯಲ್ಲಿ ಒತ್ತಾಸೆಯಾಗಿರುವ ತಮ್ಮ ದರ್ಜೆಯ ಮನುಷ್ಯರು ಯಾರಿದ್ದಾರೆ?

ಮುಂದೆ ತಾವು ನಡೆಸಲಿರುವ ಅಮಾನುಷ ಕೃತ್ಯಕ್ಕೆ ಹೆದರಿ ಚಿಕ್ಕಲಿಂಗಪ್ಪನವರು ತಾವೇ ನಡುಗಲು ವೊದಲಿಟ್ಟರು. ಮಾತನಾಡುತ್ತಿದ್ದ ಹಾಗೆಯೇ ಎದ್ದು ತಲೆಬಾಗಿಲಕಡೆಗೆ ಹೋಗಿ ಯಾರನ್ನೋ ನೋಡುವವರಂತೆ ನೋಡಿ ಬಾಗಲು ಮುಂದೆಮಾಡಿ ಬಂದರು. ಅವರ ಕೈಗಳು ಬಾಗಿಲನ್ನು ಮುಂದೆ ಮಾಡಿದ ತಕ್ಷಣ ತಾಯಕ್ಕನಿಗೆ ಅನುಮಾನ ಬಂದುಬಿಟ್ಟಿತು. ಅವಳು ಹಿತ್ತಿಲ ಬಾಗಿಲಕಡೆಗೆ ನಡೆದಳು. ಚಿಕ್ಕಲಿಂಗಪ್ಪನವರು ಅತಿ ಶೀಘ್ರವಾಗಿ ಅವಳು ಪಾರಾಗದಂತೆ ಹೋಗಿ ತಡೆದರು. ತಾಯಕ್ಕ ಹುಲಿಯನ್ನು ಕಂಡ ಹುಲ್ಲೆಯಾದಳು. ಅವಳಿಗೆ ಸ್ಮೃತಿಯೇ ತಪ್ಪಿಹೋಯಿತು. ಬೊಂಬೆಯಂತೆ ನಿಂತಳು. ಚಿಕ್ಕಲಿಂಗಪ್ಪನವರು ಸಂತೋಷಪಟ್ಟರು.

"ತಾಯೀ....ಇಂದ್ಗೆ ನನ್ನ ಜಲ್ಮ ಸಾರ್ತಕವಾಯ್ತು" ಎಂದ ಅವರ ಮಾತು ಅವಳಿಗೆ ಎಲ್ಲಿಯೋ ಕೇಳಿಸಿದಂತಾಯಿತು. ಹೆಬ್ಬಾವೊಂದು ಅವಳನ್ನು ಸುತ್ತಿಕೊಂಡಂತಾಯಿತು. ಅವಳ ನಿಶ್ಚಲ ಸ್ಥಿತಿಯನ್ನು ಸಮ್ಮತಿಯ

ಪ್ರದರ್ಶನವೆಂದುಕೊಂಡಿದ್ದ ಚಿಕ್ಕಲಿಂಗಪ್ಪನವರು ತಮ್ಮ ತೋಳುಗಳಿಗೆ ಅಷ್ಟೇನೂ ಹೆಚ್ಚಿನ ಶಕ್ತಿಯನ್ನು ಕಳುಹಿಸಿರಲಿಲ್ಲ. ತನ್ನ ಸಂಪೂರ್ಣ ದೇಹ ಅವರ ಅಧೀನದಲ್ಲಿರುವುದು ತಾಯಕ್ಕನ ಅರಿವಿಗೆ ಬಂದಕೂಡಲೇ ಪಿಸು ಧ್ವನಿಯಲ್ಲಿಯೇ "ಪುಟ್ಟತಾಯಿ!" ಎಂದಳು. ಹಾಗೆ ಚಿಕ್ಕಲಿಂಗಪ್ಪನವರ ಗಮನವನ್ನು ಬೇರೆಡೆಗೆ ಸೆಳೆದು, ಗಕ್ಕನೆ ತನ್ನ ಸರ್ವಬಲವನ್ನೂ ಉಪಯೋಗಿಸಿ ಅವರ ಹಿಡಿತದಿಂದ ಹೊರಬಂದಳು. ಆದರೆ ಅವಳ ಎಡಗೈಯನ್ನು ಹಿಡಿದಿದ್ದ ಅವರ ಬಲಗೈ ತಕ್ಷಣ ಎಚ್ಚೆತ್ತುಕೊಂಡು ಬಿಗಿಯಾಗಿಬಿಟ್ಟಿತ್ತು. ತಪ್ಪಿಸಿಕೊಂಡು ಹೋಗಲೆತ್ನಿಸಿದ ಅವಳ ಎಡಗೈಯನ್ನು ನುಲಿಚಿದರು. ಅವಳು ಅವರಿಗೆ ಹಿಮ್ಮುಖಳಾದಳು. ಆದರೂ ಪುನಃ ಬಲವನ್ನೆಲಾ ಮುಂದಕ್ಕೆ ಜಗ್ಗಿದಳು. ಅವಳು ತನ್ನ ಎಡಗೈಯಿನ ಮೇಲಿನ ಆಸೆಯನ್ನೆಲ್ಲಾ ಬಿಟ್ಟು ಜಗ್ಗಿದ್ದಳು. ಚಿಕ್ಕಲಿಂಗಪ್ಪನವರು ಅವಳಿಗೆ ಅಪಾಯವಾಗದಿರಲೆಂದು ಕೈಬಿಟ್ಟರು. ಅಪಾಯವಾಗಿಯೇ ಇತ್ತು.

ತಾಯಕ್ಕ ಬೋರಲಾಗಿ ತೊಟ್ಟಿಯಂಚಿನ ಕಲ್ಲಿನಮೇಲೆ ಬಿರುಸಾಗಿ ಬಿದ್ದಳು. ಬಿದ್ದವಳು ಸತ್ತಂತೆ ಚಲಿಸದೇ ಇದ್ದಳು. ಚಿಕ್ಕಲಿಂಗಪ್ಪನವರ ಎದೆಯೊಡೆಯಿತು. "ಏನಾಯ್ತು ತಾಯಿ, ಏನಾಯ್ತು" ಎಂದುಕೊಂಡು ಕುಳಿತು ಅವಳನ್ನೆತ್ತಿದರು. ಅವಳಿಗೆ ಸ್ವಲ್ಪ ನೋವಾಗಿದ್ದಿದ್ದರೆ ಅವರಿಗೆ ಅಷ್ಟು ಅವಕಾಶ ಕೊಡುತ್ತಿರಲಿಲ್ಲ. ಈಗ ಅವಳು ಚಿಕ್ಕಲಿಂಗಪ್ಪನವರ ಮೇಲೆ ದ್ವೇಷ-ಸಾಧಿಸುವ ಸ್ಥಿತಿಯಲ್ಲಿ ಇರಲಿಲ್ಲ. ಅವಳ ತುಟಿ ಒಡೆದು ಧಾರಾಕಾರವಾಗಿ ರಕ್ತ ಹೊರಡುತ್ತಿತ್ತು. ಚಿಕ್ಕಲಿಂಗಪ್ಪನವರು ಅವಳ ಸೀರೆಯನ್ನೇ ಅದಕ್ಕೆ ಒತ್ತಿಹಿಡಿದರು. ಬಾಯನ್ನು ಒತ್ತಿಹಿಡಿದಾಗ ಅವರ ಕೈಗೆ ತಿಳಿಯಿತು, ತಾಯಕ್ಕನ ಎರಡು ಹಲ್ಲುಗಳು ಮುರಿದುಹೋಗಿದ್ದವು. ಅವರಿಗೆ ಏನು ಮಾಡಬೇಕೆಂಬುದೇ ತೋಚಲಿಲ್ಲ. ಅಷ್ಟು ರಕ್ತವನ್ನು ಅವರು ಕಂಡೇ ಇರಲಿಲ್ಲ. ಅದು ಅವರನ್ನು ಹೆದರಿಸಿತು. ಅವಳನ್ನೆತ್ತಿ ಹಾಗೆಯೇ ಕಂಬಕ್ಕೆ ಒರಗಿಸಿ ಕೂಡಿಸಿದರು. ತಾಯಕ್ಕನ ದುರ್ಬಲವಾಗಿದ್ದ ಎಡಗೈ ಬಾಯಿನವರೆಗೆ ಬರಲಾರದೇ ಹಿಂದಕ್ಕೆ ಬಿದ್ದಿತು. ಬಲಗೈ ಬಂದು ಬಾಯನ್ನು ಒಂದು ಬಾರಿ ಸವರಿ ತಾನೂ ಹಿಂದೆಗೆಯಿತು. ಚಿಕ್ಕಲಿಂಗಪ್ಪನವರು ತಮ್ಮ ಬಟ್ಟೆಬರೆಗಳನ್ನು ನೋಡಿಕೊಂಡರು. ಧೈರ್ಯವಾಯಿತು.

ತಾಯಕ್ಕನಿಗೆ ಪ್ರಾಣಾಪಾಯವೇನೂ ಇರಲಿಲ್ಲವೆಂಬ ಧೈರ್ಯವೂ ಜೊತೆಗೆ ಸೇರಿಕೊಂಡಿತು. ಅವರು ಮೆಲ್ಲನೆದ್ದು ತಲೆಬಾಗಿಲ ಮೂಲಕ ಹೊರಗೆ ಹೋಗಿ ಬಾಗಿಲನ್ನು ಪೂರ್ಣವಾಗಿ ಎಳೆದುಕೊಂಡು ಹೊರಟು ಹೋದರು.

ತಿಳಿವು ಹಿಂದಿರುಗುವುದು ಅವಳಿಗೆ ಬಹಳ ಹೊತ್ತಾಯಿತು. ಎದ್ದು ರಕ್ತವನ್ನೆಲ್ಲಾ ಒರಸಿಕೊಂಡಳು. ಬಾಯಲ್ಲಿದ್ದ ಎರಡು ಹಲ್ಲುಗಳನ್ನೂ ಉಗುಳಿದಳು. ಇನ್ನೂ ಸ್ವಲ್ಪ ಹೊತ್ತು ಸುಧಾರಿಸಿಕೊಂಡಮೇಲೆ ಮೆಲ್ಲನೆ ಎದ್ದಳು. ಮುಖ ತೊಳೆದುಕೊಳ್ಳಲು ಕೊಳದಪ್ಪಲೆಯನ್ನು ತೆಗೆದುಕೊಂಡು ದೊಡ್ಡಹಂಡೆಯ ಬಳಿಗೆ ಬಂದಳು.

ನೀರಿನಲ್ಲಿ ಬಾಯಿಮುಕ್ಕಳಿಸುತ್ತಿದ್ದಂತೆಯೇ ತಾಯಕ್ಕನಿಗೆ ನಗು ಬಂತು. ನೋಯುತ್ತಿದ್ದ ಹಲ್ಲೂ ಬಿದ್ದುಹೋಗಿತ್ತು. ಅಸಾಧ್ಯ ನೋವಿದ್ದರೂ ಆ ಹಲ್ಲು ಹೋದುದು ತಾಯಕ್ಕನಿಗೆ ಲಾಭಕರವೇ ಆಗಿತ್ತು. ಆ ಎರಡು ಹಲ್ಲುಗಳಿದ್ದ ಜಾಗದಲ್ಲಿ ನೀರು ಧಾರಾಳವಾಗಿ ನುಗ್ಗಿಬರುತ್ತಿದ್ದುದು ಅವಳಿಗೆ 'ಕಚಗುಳಿ' ಇಟ್ಟಂತಾಗುತ್ತಿತ್ತು.

ಅದಾದಮೇಲೆ ಹಜಾರದ ಗೋಡೆಯ ಮೊಳೆಗೆ ತಗಲುಹಾಕಿದ್ದ ಕನ್ನಡಿಯನ್ನು ತೆಗೆದುಕೊಂಡು ಮುಖದೆದುರಿಗೆ ಹಿಡಿದುಕೊಂಡಳು. ಯಾರದು ಆ ಮುಖ? ಪುನಃ ತಾಯಕ್ಕನಿಗೆ ನಗು ಬಂತು. ಯಾರದು ಆ ನಗು?

ಯೀರಣ್ಣನ ತಾಯಿಯ ಹಗರಣದಿಂದಾಗಿ ಪುಟ್ಟತಾಯಿಗೆ ಆ ಮಧ್ಯಾಹ್ನ ಸ್ವಲ್ಪವೂ ನಿದ್ದೆ ಬಂದಿರಲಿಲ್ಲ!



# ೧೧

ಎಷ್ಟು ವರ್ಷವಾದರೂ ಮಲ್ಲೇಶನನ್ನು ಮರಿಮಲ್ಲಪ್ಪಾಸ್ಕೂಲು ಬಿಟ್ಟು ಕೊಡುತ್ತಿರಲಿಲ್ಲ. ಅವನು ಮಾಧ್ಯಮಿಕ ನಾಲ್ಕನೇ ತರಗತಿಯವನೆಂದು ಮೈಸೂರಿನವರು ಕೆಲವರಿಗೆ ಮಾತ್ರ ಗೊತ್ತಿದ್ದ ವಿಷಯ. ಅವನ ಹಿತೈಷಿಗಳೊಬ್ಬರಿಗೂ ಅದು ತಿಳಿದ ವಿಷಯವಲ್ಲ. ತಿಳಿದವರು ಹಿತೈಷಿಗಳಾಗಿರಲಿಲ್ಲ. ಈಚೆಗಂತೂ ಮಲ್ಲೇಶ ಈಗಿನಕಾಲದ ವಿದ್ಯಾಭ್ಯಾಸ ಪದ್ಧತಿಯಲ್ಲಿ ಹುಡುಗರಿಗೆ ಯಾವ ವಿಧವಾದ ಉಪಯೋಗವೂ ಇಲ್ಲ ಎಂಬ ವಿಷಯದಲ್ಲಿ ಒಂದು ಉಪನ್ಯಾಸ ಕೊಡುವಷ್ಟು ಧೀರನಾಗಿ ಹೋಗಿದ್ದನು. ಉಪನ್ಯಾಸ ಕೊಡುವುದಕ್ಕೆ ಬಂದಮೇಲೆ ಇನ್ನುಳಿದ ವಿದ್ಯೆಗಳಲ್ಲಿ ಏನಿದೆ ?

ಇದರಿಂದ ಅವನಿಗೂ ಸ್ಕೂಲಿಗೂ ಅಂತಹ ಸಂಬಂಧವೇನೂ ಇರಲಿಲ್ಲವೆಂದಹಾಗಿತ್ತು. ಮೂರು ಹೊತ್ತು ಅವನಾಯಿತು ವಿಠಲನಾಯಿತು, ಅವರಿಬ್ಬರ ನಡುವೆ ವಿಠಲನ ಸೈಕಲ್ಲಾಯಿತು. ಮೈಸೂರಿನ ಪೌರಸಭಾಧ್ಯಕ್ಷರಿಗೆ ಊರಿನ ಬೀದಿಗಳ ವಿವರ ಇವರಿಬ್ಬರಿಗಿಂತ ಹೆಚ್ಚಾಗಿ ತಿಳಿದಿರಲಿಲ್ಲ. ಊರಿನ ಯಾವ ಸಿನಿಮಾ ಮ್ಯಾನೇಜರಿಗೂ ಇವರಿಗೆ ತಿಳಿದಿದ್ದಷ್ಟು ಸಿನಿಮಾವಿಷಯಗಳು ತಿಳಿದಿರಲಿಲ್ಲ. ಯಾವ ಹೋಟಲಿನಲ್ಲಿ ಯಾವ ತಿಂಡಿ " ಪರಮಾಯಿಷಿ " ಎಂಬುದನ್ನು ಹೇಳುವುದು ಅವರಿಬ್ಬರ ಅನುಭವಸಿದ್ಧವಾಗಿದ್ದ ಪಾಂಡಿತ್ಯ.

ಇವೆಲ್ಲಕ್ಕೂ ಮುಖ್ಯವಾದ ಬೆಂಬಲ ವಿಠಲನ ಹಿರಿಯರು ಗಳಿಸಿಟ್ಟು ಹೋಗಿದ್ದ ಅಗಾಧವಾದ ಐಶ್ವರ್ಯ. ಬಟ್ಟೆಯ ವ್ಯಾಪಾರದಲ್ಲಿ ಪ್ರಾರಂಭ ಮಾಡಿದ್ದ ಅವರ ವ್ಯವಹಾರ ಬಣ್ಣದ ಕಾರ್ಖಾನೆ, ಜರತಾರಿಯ ಕಾರ್ಖಾನೆಯ ಪಾಲುಗಾರಿಕೆ. ಸಾಮಾನು ಸಾಗಾಣಿಕೆಗಳಿಗೆಂದಿದ್ದ ಎರಡುಲಾರಿಗಳು ಹೀಗೆ ಬೆಳೆದುಕೊಂಡು ಹೋಗುತ್ತಿತ್ತು. ವಿಠಲನಿಗೆ ತಂದೆಯಿರಲಿಲ್ಲ ತಾಯಿಯಿದ್ದರು. ಚಿಕ್ಕಪ್ಪಂದಿರು ದೊಡ್ಡಪ್ಪಂದಿರು ಇಬ್ಬಿಬ್ಬರಿದ್ದರು. ಕುಟುಂಬ ಭಾಗವಾಗಿರಲಿಲ್ಲ ಸಂಸಾರ ಅನ್ಯೋನ್ಯವಾಗಿತ್ತು. ವಿಠಲನ ಸಹುದ ಮಕ್ಕಳಲ್ಲಿ ವಿಠಲನೇ ಹಿರಿಯ. ಅದರಿಂದ ವಿಠಲನನ್ನು ಕಂಡರೆ

ಎಲ್ಲರಿಗೂ ಪ್ರೀತಿಯಿತ್ತು. ಅವನು ಖರ್ಚುಮಾಡಬೇಕೆಂದಷ್ಟು ಹಣ ಯಾರನ್ನು ಕೇಳಿದರೂ ಸಿಕ್ಕುತ್ತಿತ್ತು.

ಅವನೊಡನಿರುವವರೆಗೂ ಮಲ್ಲೇಶ ಅವನಷ್ಟೇ ಐಶ್ವರ್ಯವಂತನಾಗಿ ರುತ್ತಿದ್ದನು. ಎಲ್ಲ ಭೋಗ ಭಾಗ್ಯಗಳನ್ನೂ ವಿಠಲ ಅವನೊಡನೆ ಸಮ ನಾಗಿ ಹಂಚಿಕೊಂಡು ಅನುಭವಿಸುತ್ತಿದ್ದನು. ಹೊಟ್ಟೆಯಂತೂ ಸದಾ ತುಂಬಿದಹಾಗೆಯೇ ಇರುತ್ತಿತ್ತು. ಕಾಲಯಾಪನೆಗಂತೂ ನಾಲ್ಕಾರು ದಾರಿ ಗಳಿದ್ದವು. ಮಲ್ಲೇಶ ಕೇಳದೆಯೇ ವಿಠಲ ತಾನಾಗಿಯೇ ತೀರಿಸಿದ್ದ ಕೆಲವು ಸಾಲಗಳ ಬಾಧೆಯೂ ಇರಲಿಲ್ಲ. ತಾಯಿ ಕಳುಹಿಸುತ್ತಿದ್ದ ದುಡ್ಡಿನಲ್ಲಿ ಪೂರ್ಣವಾಗಿ ಅಲ್ಲದಿದ್ದರೆ ಅರ್ಧಂಬರ್ಧವಾಗಿಯಾದರೂ ಚನ್ನವೀರಮ್ಮ ಲೆಕ್ಕ ತೀರುತ್ತಿತ್ತು. ಈಗ್ಗೆ ಮೂರು ತಿಂಗಳಿಂದ ಮಲ್ಲೇಶ ಸದಾಶಿವನ ಹಂಗನ್ನು ತೊರೆದು ತನ್ನದೇ ಬೇರೆಯೊಂದು ರೂಮನ್ನು ಮಾಡಿಕೊಂಡಿದ್ದು ದರಿಂದ ಮನೆ ಸೇರಲು ಸಮಯ ನಿರ್ಬಂಧವೂ ಇರಲಿಲ್ಲ.

ಎಲ್ಲ ಸರಿ, ಆದರೆ ವಿಠಲ ಮಲ್ಲೇಶನಿಗೆ "ಗುಡ್‌ನೈಟ್"ಹೇಳಿ ಮನೆಗೆ ಹೊರಟುಹೋದಮೇಲೆ ಪುನಃ ಮಾರನೆಯದಿನ ಬಂದು ಸಂಧಿಸುವ ವರೆಗೆ ಮಲ್ಲೇಶ ಕಡುಬಡವನಾಗಿರುತ್ತಿದ್ದನು. ಸಿಗರೇಟಿಗೆ ಬದಲು ಬೀಡಿ ಯನ್ನು ಕೊಳ್ಳುವುದಕ್ಕೂ ಕಾಸಿರುತ್ತಿರಲಿಲ್ಲ. ಬಟ್ಟೆ ಒಗೆಯುವುದಕ್ಕೆ ವೇಳೆ ಇಲ್ಲದೇ ಅಗಸರವನಿಗೆ ಬಟ್ಟೆಹಾಕಿದರೆ ಕೊಡಲು ದುಡ್ಡಿಲ್ಲದೇ ಬಲು ಪಂಚಾ ಯಿತಿಯಾಗುತ್ತಿತ್ತು. ಎಷ್ಟೇ ಇಂತಹ ಕಷ್ಟ ಬರಲಿ ವಿಠಲನನ್ನವನು ಕಾಸು ಕೇಳಿದ್ದಂತೂ ಇಲ್ಲ. ಎರಡುಬಾರಿ ಮಲ್ಲೇಶನ ಕ್ರಾಪು ತೀರ ಬೆಳೆದು ಹೋಗಿ ಕಿವಿಮುಚ್ಚುವ ಸ್ಥಿತಿಗೆ ಬಂದಿದ್ದಾಗ್ಗೆ ವಿಠಲನೇ ಅವನನ್ನು ಕರೆದು ಕೊಂಡು ಹೋಗಿ 'ಕಟ್' ಮಾಡಿಸಿ ಕಳುಹಿಸಿದ್ದದು. ಆದರೂ ಮಲ್ಲೇಶ 'ಕಟ್ಟ'ಗೆಂದು ದುಡ್ಡು ಕೇಳಿದವನಲ್ಲ. ಮಲ್ಲೇಶನ ಸ್ವಾಭಿಮಾನ ಮಾತ್ರ ಅಷ್ಟು ಮಟ್ಟಿಗೆ ಎಚ್ಚರಿಕೆಯಾಗಿತ್ತು.

ದಿನಗಟ್ಟಲೆ ವಿಠಲ ಸಿಗದಿದ್ದಾಗ ಮಲ್ಲೇಶ ತುಂಬಾ ಪೇಚಿಗೆ ಸಿಕ್ಕಿ ಕೊಳ್ಳುತ್ತಿದ್ದ. ಖಾಲಿಜೇಬು ಮತ್ತು ಕಳೆಯಲಸಾಧ್ಯವಾದ ಕಾಲಗಳೆ ರಡೂ ಸೇರಿ ಅವನನ್ನು ಯೋಚನಾಪರವಶನನ್ನಾಗಿ ಮಾಡುತ್ತಿತ್ತು. ಅವ

ನಿಗೆ ಆಗ ತನ್ನ ದುಸ್ಥಿತಿಗೆಲ್ಲಾ ತನ್ನ ತಾಯಿಯೇ ಕಾರಣವೆನ್ನಿಸುತ್ತಿತ್ತು. ದೇವರು ಕೊಟ್ಟ ಅನುಕೂಲವನ್ನೆಲ್ಲಾ ತಾನೊಬ್ಬಳೇ ಅನುಭವಿಸುತ್ತಿದ್ದಾಳೆಂಬ ಅಪಾದನೆಯನ್ನು ಅವಳಮೇಲೆ ಹೊರಿಸುತಿದ್ದನು. ಮಗಳನ್ನು ಮಾತ್ರ ಮುದ್ದಾಗಿ ಸಾಕಿ ಹಾಗೂ ಅವಳಿಗೆ ದುರ್ಬುದ್ಧಿ ಕಲಿಸಿ ಹಾಳು ಮಾಡಿದ್ದಾಳೆಂದು ಆಕ್ಷೇಪಿಸುತಿದ್ದನು. ತನ್ನನ್ನೂ ಸರಿಯಾಗಿ ಓದಿಸದೆ ಆಸ್ತಿಯನ್ನೆಲ್ಲಾ ಚಿಕ್ಕಲಿಂಗಪ್ಪನ ಬಾಯಿಗೆ ಹಾಕಿ, ಮನೆಯನ್ನು ಹಾಳು ಮಾಡುತ್ತಾಳೆಂದು ತೀರ್ಮಾನಿಸಿಕೊಳ್ಳುತ್ತಿದ್ದನು. ಇಷ್ಟೆಲ್ಲ ಬುದ್ಧಿಯೋಡುತ್ತಿದ್ದರೂ ತನ್ನ ಅಭಿವೃದ್ಧಿಗೆ ತಾನು ಯಾವ ದಾರಿಯಲ್ಲಿ ನಡೆಯಬೇಕೆಂಬ ಯೋಚನೆ ಮಾತ್ರ ಬರುತ್ತಿರಲಿಲ್ಲ. ವಿಠಲನ ಸ್ನೇಹದ ಹಿನ್ನೆಲೆಯಲ್ಲಿ ತಾನು ಅಭಿವೃದ್ಧಿಸ್ಥಿತಿಯಲ್ಲೇ ಇದ್ದೇನೆಂದು ಅವನ ಭಾವನೆಯಾಗಿತ್ತು.

ಅಂತಹ ಒಂದುದಿನ ಸಂಜೆ ನಾಲ್ಕು ಗಂಟೆಯ ಹೊತ್ತಿನಲ್ಲಿ ರೂಮಿನಲ್ಲಿಯೇ ಇದ್ದ ಮಲ್ಲೇಶನನ್ನು ಹುಡುಕಿಕೊಂಡು ಕಿರೀಕಾಟಿಯ ಕೆಂಪದೇವಿಯ ಗಂಡ ಕೆಂಪಣ್ಣ ಬಂದನು. ಬಾಕಿಯ ದಿವಸಗಳಲ್ಲಾಗಿದ್ದರೆ ತಾನೇ ಕೆಂಪಣ್ಣನ ಮನೆಗೆ ರಾತ್ರಿಯಹೊತ್ತು ಬರುತ್ತೇನೆಂದು ಒಂದುಸುಳ್ಳು ಹೊಡೆದು ಮಲ್ಲೇಶ ಹೊರಟುಹೋಗುತ್ತಿದ್ದನು. ಆದರೆ ಆದಿನ ವಿಠಲನು ಊರಿನಲ್ಲೇ ಇರಲಿಲ್ಲ. ತಾಯಿಯೊಡನೆ ಬೆಂಗಳೂರಿಗೆ ಹೋಗಿದ್ದನು. ಕಾಲವನ್ನಾದರೂ ಕಳೆಯಬಹುದೆಂದು ಮಲ್ಲೇಶ ಕೆಂಪಣ್ಣನೊಡನೆ ಮಾತಿಗೆ ಕುಳಿತನು. ಮಲ್ಲೇಶ ಯಾವ ಮಾತನ್ನು ಆಡಿ ವಿಷಯವನ್ನು ಬದಲಾಯಿಸಿದರೂ ಕೆಂಪಣ್ಣ ಪುನಃಪುನಃ ಹಿಂದಕ್ಕೇ ಬಂದು ತಾಯಕ್ಕನ ತಾಪತ್ರಯಗಳನ್ನೇ ವರ್ಣಿಸುತ್ತಿದ್ದನು.

" ಈಸತಿ 'ಮರೊಡೆ' ಬಂದು ಜೋಳಗಳನ್ನೆಲ್ಲಾ ಆಳಾಗೋಗವಂತೆ. ಉಣ್ಣಕ್ಕೇ ಜೋಳವಿಲ್ಲ ಇನ್ನು ಮಾರಕ್ಕೆಲ್ಲಿ ಬಂದದು ? "

" ಮೂರು ಹೊಲಗಳವಲ್ಲ ಕೆಂಪಣ್ಣ ? "

"ಒಬ್ಬಂಟಿ ಹೆಂಗಸು ಏನ್ಮಾಡಾರು ? "

" ಗುತ್ಗೇ ಕೊಡೋದು"

"ಹೆಂಗಸಿಗೆ ಗುತ್ತಿಗೇತಾನೆ ಸರಿಯಾಗಿ ಕೊಡೋರು ಯಾರು ಮಲ್ಲು. ಅದಕ್ಕೇ ನಾಹೇಳಿದು ಒಂದು ಮಾತು. ನೀನು ಓದಿ ಏನ್ಮಾಡ್ಬೇಕಾಗದೆ. ಸಾಕು ಬುಟ್ಬುಬುಡು. ಇಲ್ಲಾ—ಹೊಲ ಮನೆ ನೋಡ್ಕಂಡು ಮನೇಗೆ ಗಂಡಾಗಿರು. ಇಲ್ಲಾ—ಇನ್ನ್ಯಾವ್ದಾದರೂ ಸಂಪಾದನೆ ದಾರಿ ಹುಡುಕಿ ನಿಮ್ಮವ್ವನಿಗೆ ಒಸಿ ಸಾಯವಾಗು."

"ನೋಡು ಕೆಂಪಣ್ಣ, ನಾನು ನೇಗಿಲು ಹಿಡಿಯೋ ವಿಷಯಾನ ನಮ್ಮವ್ವನೇ ತಪ್ಪಿಸ್ಬುಟ್ಳು. ಇನ್ನು ಸಂಪಾದನೆಮಾಡೋಕ್ಕೆ ಈಗ ಓದಿರೋ ಅಷ್ಟು ಸಾಲದು. ಮುಂದಕ್ಕೊದಬೇಕು. ದುಡ್ಡು ಕಳೀಸಕ್ಕಾಗಕ್ಕಿಲ್ಲ ಅಂತ ಓದನ್ನ ಮಧ್ಯದಲ್ಲೇ ನಿಲ್ಲಿಸ್ಬುಟ್ಟರೆ ಎರಡು ದಾರಿಯೂ ತಪ್ಪೋಯ್ತದೆ."

"ಆ ದುಡ್ಡಿಂದೇ ಈಗ ಬಂದಿರೋದು ಮಲ್ಲು. ನಿಮ್ಮವ್ವನ ಕೈಲಿ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಕಳೀಸಕ್ಕೆ ಆಗದಿಲ್ಲ ಕಣಪ್ಪ"

"ಹಂಗಂತ ನಿನಗೆ ಬರದಿದಾಳೇನು ?"

"ಊ ಮಲ್ಲು. ಈ ಸತೀಗೆ ಎಲ್ಲಾದ್ರೂ ಮಾಡಿ ನೀನೇ ಒಂದು ಹತ್ತುರೂಪಾಯಿದ್ರೆ ಮಲ್ಲೂಗೆ ಕೊಟ್ಟರೂ, ನನ್ನ ಕಷ್ಟ ಒಸಿ ಹೇಳೂಂತ ನನಗೆ ಕಾಗದ ಬರೀಸಿದ್ರು. ನನ್ತಾವು ಎಲ್ಲಿ ಬರಬೇಕು. ಎಲ್ಲೋ ಐದು ರೂಪಾಯಿ ಸಿಕ್ತು. ತಕೊ—ಮಲ್ಲೂ ನಾನು ಹೇಳಿದ ಮಾತ್ನ ಒಸಿಯೋಚನೆ ಮಾಡು."

ಮಲ್ಲೇಶ ಸ್ವಲ್ಪಹೊತ್ತು ಯೋಚನೆ ಮಾಡಿದನು. ಆ ಸಮಯವಲ್ಲದಿದ್ದರೆ ಅವನು ಕೆಂಪಣ್ಣನ ಕೈಯಿನ ಐದು ರೂಪಾಯಿಗಳನ್ನು ತೆಗೆದು ಕೊಳ್ಳುತ್ತಿರಲಿಲ್ಲ. ನೋಟನ್ನು ಎರಡೂ ಕೈಗಳಲ್ಲಿ ತಿರುಗಿಸುತ್ತಾ ಇಲ್ಲದ ಮುಗುಳ್ನಗೆ ತಂದು ಹೇಳಿದನು.

"ಹೊಕ್ಕಳ್ಳಿ. ಓದನ್ನ ಬಿಟ್ಟು ಬಿಡ್ತೀನಿ ಕೆಂಪಣ್ಣ. ನನಗೆ ಕೆಲಸ ಯಾರು ಕೊಡೋರು ?

"ಉಡಕಬೇಕು ಮಲ್ಲು. ಇಲ್ನೋಡು, ನಮ್ಮ ಸಾಹೇಬರತ್ರಕ್ಬಾ. ಕರ್ಕಂಡೋಯ್ತೀನಿ ಎಂಗಾರೂ ಮಾಡಿ ಅಂತ ಕೇಳ್ಕತೀನಿ, ನೋಡವೆ"

ಮಲ್ಲೇಶನಿಗೆ ಅಸಾಧ್ಯವಾದ ನಗು ಬಂದಿತು. ಜೊತೆಯಲ್ಲೇ ಅವ ಮಾನವೂ ಆದಂತಾಗಿತ್ತು. ಅಠಾರಾಕಛೇರಿಯ ಮೈಸೂರು ಸಬ್ ಡಿವಿಜನ್ ಆಫೀಸರ ಜವಾನ ತನಗೆ ಶಿಫಾರ್ಸು ಮಾಡಿ ಕೆಲಸ ಕೊಡಿಸುವವನೆಂಬು ದನ್ನು ಯೋಚಿಸಿ ಮಲ್ಲೇಶನಿಗೆ ಬಲುದುಃಖ ಬಂದುಬಿಟ್ಟಿತು. ಆದರೂ ಆ ಕೋಪದಿಂದ ಕೆಂಪಣ್ಣನನ್ನು ನಿಂದಿಸಿ ಕಳುಹಿಸುವ ಮನಸ್ಸವನಿಗಾಗಲಿಲ್ಲ

ಬೀಡಿ ಸೇದಿ ಬಾಯೆಲ್ಲ ಕಹಿಯಾಗಿತ್ತು. ಕೆಂಪಣ್ಣನನ್ನು ಕರೆದು ಕೊಂಡುಹೋಗಿ ಹೋಟಲಿನಲ್ಲಿ ಕುಳಿತನು. ರಾತ್ರಿಗೆ ಚನ್ನವೀರಮ್ಮನನ್ನು ಕಾಣದಿರುವುದಕ್ಕೆ ತಕ್ಕಹಾಗೆ ತಿಂಡಿ ತಿಂದನು. ಕೆಂಪಣ್ಣನನ್ನು ಬಲವಂತ ಮಾಡಿದನು. ಅವನು ಕಡ್ಡಾಯವಾಗಿ ಒಂದೂ ಬೇಡವೆಂದು ಹೇಳಿ ಒಂದು ಹಾಲನ್ನು ಕುಡಿದನು. ಹೊರಗೆ ಬಂದು ಮಲ್ಲೇಶ ಒಂದುಪ್ಯಾಕು "ಸೀಸರ್ಸ್" ತೆಗೆದುಕೊಂಡು ಅದರಲ್ಲೊಂದನ್ನು ಕೆಂಪಣ್ಣನಿಗೂ ಕೊಟ್ಟನು ಕೆಂಪಣ್ಣ, ಮಲ್ಲೇಶನಲ್ಲಿ ಇನ್ನು ಉಳಿದಿರಬಹುದಾದ ದುಡ್ಡಿನ ಅಂದಾಜು ಮಾಡಿದನು. ಮೂರುರೂಪಾಯಿ ಹತ್ತಾಣೆ!! ಕೆಂಪಣ್ಣನ ಹೊಟ್ಟೆ ಉರಿ ದುಹೋಯಿತು.

ರಾತ್ರಿ ಮಲ್ಲೇಶ ಬಹಳಹೊತ್ತು ಯೋಚಿಸಿದನು. ವಿಠಲನ ಸ್ನೇಹ ಸಿಕ್ಕಿದ ದಿನದಿಂದೀಚೆಗೆ ಬಡತನದ ಯೋಚನೆಯೇ ಅವನ ಹತ್ತಿರಕ್ಕೆ ಸುಳಿ ಯುತ್ತಿರಲಿಲ್ಲ. ವಿಠಲ ದೊರಕಿಸುತ್ತಿದ್ದ ವೈಭವದ ಜೀವನದೊಡನೆ ಸ್ವಂತ ಖರ್ಚಿಗೆಂದಿರುತ್ತಿದ್ದ ಊರಿನ ದುಡ್ಡು ಇನ್ನುಮೇಲೆ ಇಲ್ಲವೆಂಬ ಸೂಚನೆ ಆದಿನ ಬಂದಿತ್ತು. ಒಳಗೇ ಕುದಿದನು. ಊರಿಗೆ ಹೋಗಿ ಅದರ ಇತ್ಯರ್ಥ ಮಾಡಿಕೊಂಡು ಬರಬೇಕೆಂದುಕೊಂಡನು. ಹಣ ಸಿಕ್ಕದಿರುವುದೇ ತೀರ್ಮಾನ ವಾದರೂ ಮೈಸೂರಿಗೇ ಹಿಂದಿರುಗಿ ಬಂದು ತನ್ನ ತಾಯಿಯ ಕಣ್ಣೆದುರಿಗೇ ಸ್ವತಂತ್ರವಾಗಿದ್ದು ತೋರಿಸಬೇಕೆಂಬ ಹಟಕ್ಕೆ ಬಂದನು.

ಇದೇ ಹಟವನ್ನು ಮಲ್ಲೇಶ ಹಿಂದಿನ ದಿನ ಕೈಗೊಳ್ಳಲಾರದವನಾಗಿ ದ್ದನು. ಈದಿನ ಕೈಯಲ್ಲಿ ಕಿರೀಕಾಟಿಗೆ ಹೋಗಿಬರಲು ಬೇಕಾದಷ್ಟು ದುಡ್ಡಿತ್ತು. ವಿಠಲ ತುಮಕೂರಿಂದ ಬರುವುದಕ್ಕೆ ಇನ್ನೂ ಎರಡು ದಿನಗಳ ಕಾಲವಿತ್ತು. ಚನ್ನವೀರಮ್ಮನಿಗೆ ಮುಖ ತೋರಿಸದೇ ಮೂರು ದಿನಗಳಿರ ಬಹುದೆಂಬ ನಿರಾಳ ಬೇರೆ. ಮಲ್ಲೇಶ ಮಾರನೆಯ ಬೆಳಿಗ್ಗೆ ಕಷ್ಟಪಟ್ಟು

ಹೊತ್ತಿಗೆ ಮುಂಚೆ ಎದ್ದನು. ಒಂದು ಜೊತೆ ಮೈಲಿಗೆ ಬಟ್ಟೆಗಳನ್ನೆ ಚೀಲಕ್ಕೆ ಹಾಕಿಕೊಂಡು ಹೊರಟನು.

ಬಸ್ಸು ತೆಂಕಳ್ಳಿಗೆ ಹನ್ನೆರಡೂವರೆಯ ಗಂಟೆಗೆ ಸುಮಾರಿಗೆ ತಲುಪಿತು. ಅವನು ಊರು ಸೇರಿದಾಗ ಮೂರುಗಂಟೆ. ಅವನು ಮನೆಯೊಳಕ್ಕೆ ನುಗ್ಗಿದ ತಕ್ಷಣವೇ ಕಣ್ಣಿಗೆ ಬಿದ್ದವಳು ಪುಟ್ಟತಾಯಿ. ಅವಳಿಗೆ ಅದೇಕೋ ಅವನನ್ನು ಮಾತನಾಡಿಸಲು ತೋಚದೇ "ಅಪ್ಪಾ ಮಲ್ಲು ಬಂದಾ ಎಂದಳು. ಮಲ್ಲೇಶನೂ ಪುನಃ ಅವಳ ಮುಖವನ್ನು ನೋಡದೇ ಮಾತನ್ನೆ ಆಡಿಸದೇ ಹೋಗಿ ಹಜಾರದಲ್ಲಿ ಕನ್ನಡಿ ನೇತುಹಾಕಿದ್ದ ಮೊಳೆಗೆ ತನ್ನ ಚೀಲವನ್ನು ತಗುಲಿಸಿದನು.

ಹಿತ್ತಿಲಿನಲ್ಲಿದ್ದ ಎಮ್ಮೆಕರುವನ್ನು ಹೊತ್ತು ಒಳಕ್ಕೆ ತರುತ್ತಾ ಬಂದ ತಾಯಕ್ಕನನ್ನು ನೋಡುವ ಇಷ್ಟವೇ ಅವನಿಗಿರಲಿಲ್ಲ. ಆದರೂ ಒಮ್ಮೆ ನೋಡಿದನು. ಮತ್ತೂ ಒಮ್ಮೆ ನೋಡಬೇಕೆನ್ನಿಸಿತು. ತಾಯಕ್ಕನಿಗೆ ಅವನ ಕುತೂಹಲದ ಅರ್ಥವಾಯಿತು. ನಕ್ಕಳು. ಮಲ್ಲೇಶ ಮತ್ತೂ ನೋಡಿದನು. ತನ್ನ ತಾಯಿಯ ಮುಖವೇ ಇದು ? ಹಲ್ಲುಗಳು ಬಿದ್ದು ಹೋಗಿರಬಹುದು. ಆದರೆ ಮುಖದಮೇಲೆ ಹೊಸದಾಗಿ ಕಾಣಿಸಿಕೊಂಡಿರುವ ಗೆರೆಗಳು ಎಷ್ಟು ಬೇಗ ಬಂದಿವೆ ಎನ್ನಿಸಿತವನಿಗೆ. ತಾಯಕ್ಕ ಅವನ ಕಣ್ಣಿಗೆ ಅರವತ್ತು ವರ್ಷದವಳಂತೆ ಕಂಡಳು. "ಎಷ್ಟೊತ್ತಿನ ಮೋಟಾರ್ನಲ್ಲಿ ಬಂದೆ ಮಲ್ಲು ?" ಎಂದಳು. ಮಲ್ಲೇಶ ಅವಳ ಮುಖದಿಂದ ತನ್ನ ದೃಷ್ಟಿಯನ್ನು ಕಿತ್ತು "ಬೆಳಗ್ಗೆ ಮೊದಲನೇ ಬಸ್ನಲ್ಲೇ!" ಎಂದು ಕೋಟನ್ನು ಕಳಚಿದನು.

ಮಲ್ಲೇಶ ಹಿಡಿದಿಟ್ಟದ್ದ ಮಾತುಗಳಿಂದಾಗಿ ಮನೆಯಲ್ಲಿ ಮೌನದ ಆಡಳಿತವೇ ಹೆಚ್ಚಾಗಿತ್ತು. ಪುಟ್ಟತಾಯಿಗೆ ತಮ್ಮನಲ್ಲಿ ಅಣ್ಣನ ಭಾವನೆ ಬಂದುಬಿಟ್ಟಿತ್ತು. ಅವನು ಮನೆಯಲ್ಲಿದ್ದಾಗ ಗಟ್ಟಿಯಾಗಿ ಮಾತನಾಡಲು ಏಕೋ ಅವಳಿಗೆ ಸ್ವರವೇ ಏಳುತ್ತಿರಲಿಲ್ಲ. ಹೆಚ್ಚೇನು ? ಅವನೆದುರಿಗೆ ಸುಳಿಯುವುದನ್ನೂ ಅವಳು ಸಾಧ್ಯವಾದಷ್ಟು ಕಡಿಮೆಮಾಡಿಕೊಂಡಿದ್ದಳು. ಎರಡು ದಿನಗಳು ಬಹಳ ಬಿಕ್ಕಟ್ಟಿನಿಂದಲೇ ಉರುಳಿದವು.

ಮೂರನೆಯ ದಿನ ಮಲ್ಲೇಶನಿಗೆ ಸುಮ್ಮನಿರಲಾಗಲಿಲ್ಲ. ಮಾತನ್ನು ಹೇಗೆ ಪ್ರಾರಂಭಿಸುವುದೆನ್ನುವುದೂ ಬಗೆಹರಿಯಲಿಲ್ಲ. ಬೆಳಿಗ್ಗೆ ಮುಖ ತೊಳೆಯುತ್ತಿದ್ದಾಗಲೇ ಪ್ರಾರಂಭಿಸಬೇಕೆಂದುಕೊಂಡು ವಿಫಲನಾಗಿದ್ದನು. ಊಟ ಮಾಡುವಾಗ ಮೈಸೂರಿನ ಊಟದ ಮಾತು ಬಂದಿದ್ದಾಗ ವಿಷಯ ವನ್ನೆತ್ತಬೇಕೆಂದುಕೊಂಡಿದ್ದು ಆಗಲೂ ಆಗಲಿಲ್ಲ. ಆ ದಿನವೂ ಊರಿ ನಲ್ಲಿಯೇ ಉಳಿದುಬಿಟ್ಟರೆ ಮೈಸೂರಿನಲ್ಲಿ ವಿಠಲ ತನ್ನನ್ನು ಕಾಣದೇ ಬೇಜಾರು ಪಟ್ಟುಕೊಳ್ಳಬಹುದು. ಅವನಿಗೆ ಹೇಳಿಯೂ ಬಂದಿರಲಿಲ್ಲ ಎಂಬ ಯೋಚ ನೆಯ ಹಿಂಸೆ ಬೇರೆ ಒಂದುಕಡೆ. ಮಲ್ಲೇಶನಿಗೆ ದಾರಿಯೇ ತೋಚಲಿಲ್ಲ. ತಾಯಿಯಿಂದ ದುಡ್ಡನ್ನು ಎಳೆಯಲಾಗದೇ ಹೋದರೆ ಮೈಸೂರಿಗೆ ಹೋಗು ವಷ್ಟು ದುಡ್ಡಾದರೂ ತನ್ನ ಬಳಿಯಲ್ಲಿದೆಯೇ ಎಂಬುದನ್ನು ಮಲ್ಲೇಶ ನೋಡಿ ಕೊಂಡನು. ಒಂದು ರೂಪಾಯಿ ಒಂಭತ್ತಾಣೆಯಿತ್ತು, ಎಂದರೆ ಮೈಸೂರನ್ನು ತಲುಪಬಹುದಾಗಿತ್ತು. ಮಲ್ಲೇಶನಿಗೆ ಅದೇ ಮಾರ್ಗದಲ್ಲಿ ಬೆಳಕು ಸಿಕ್ಕಿತು. ಹೇಗಿದ್ದರೂ ಊಟವಾಗಿ ಬಹಳ ಸ್ವಲ್ಪ ಹೊತ್ತಾಗಿತ್ತು. ಸೂರಿನಲ್ಲಿ ಹರವಿದ್ದ ತನ್ನ ಬಟ್ಟೆಗಳನ್ನು ಎಳೆದುಕೊಂಡು ಬ್ಯಾಗಿಗೆ ಮಡಿಸಿ ಸೇರಿಸುತ್ತಾ ಗಟ್ಟಿ ಯಾಗಿ ಹೇಳಿದನು—

"ಅವ್ವಾ, ನಾನು ಮೈಸೂರಿಗೆ ಹೊರಡ್ತೀನಿ."

ತಾಯಕ್ಕ ನಾಳೆಯ ದಿನ ಮಗನ ಬೆಳಗಿನ ಫಲಹಾರಕ್ಕೆ 'ಕಡುಬು' ಮಾಡಬೇಕೆಂದು ಅಕ್ಕಿ ನೆನೆಹಾಕಿದ್ದಳು. ಅದನ್ನು 'ಆಡಿಸಿ'ಕೊಳ್ಳಲು ಒರಳಿಗೆ ಸ್ವಲ್ಪ ಸುರಿದುಕೊಂಡಾಗ ಮಲ್ಲೇಶನ ಈ ಮಾತು ಕಿವಿಯಮೇಲೆ ಬಿತ್ತು. ಅವಳ ಏರ್ಪಾಡು ತಲೆಕೆಳಗಾಯಿತು. ಅದರಿಂದುಂಟಾದ 'ಕಿರಿಕಿರಿ' ಯಿಂದಲೇ ಹೇಳಿದಳು—

"ಇದೇನಾ ಮಲ್ಲು! ಇಷ್ಟೊತ್ತಿನಮೇಲೆ ಈ ಮಾತಾಡ್ತೀಯೇ. ಒಳ್ಳೆ ಹೈಲಾಟ ನಿಂದು." ಮಲ್ಲೇಶನಿಗೆ 'ಹೈಲಾಟ' ಎಂದರೆ ಹುಡುಗಾಟ ಎನ್ನುವ ಗ್ರಾಮ್ಯ ಅರ್ಥ ಹಳೆದಾಗಿ ಮರೆಸಿಹೋಗಿತ್ತೇನೋ. 'ಹೈಲು' ಎಂದರೆ 'ಹುಚ್ಚುಹುಚ್ಚು' ಎನ್ನುವ ಅರ್ಥದಲ್ಲಿ ಅದನ್ನು ತೆಗೆದುಕೊಂಡನು.

"ಹೈಲೂ ಇಲ್ಲ, ಪೈಲೂ ಇಲ್ಲ. ನನಗೆ ರಜವಿಲ್ಲ. ನಾನು ಇವತ್ತೇ ಹೋಗಬೇಕು."

" ಇಂತಾ ಆತುರದಲ್ಲಿ ಬಂದುಹೋಗಕ್ಕೇನು ಕೆಲಸವಿತ್ತು. ಅಲ್ಲೇ ಇರೂವೇ ! "

" ನನಗೇನೂ ಇಲ್ಲಿಗೆ ಬರಕ್ಕೆ ಆಸೆಯೇನೂ ಇಲ್ಲ. ಬರ್ಬೇಡ ಅಂದರೆ ಇನ್ನುಮೇಲೆ ಬರದೂ ಇಲ್ಲ. ಅದ್ನೆಲ್ಲಾ ಸರಿಯಾಗಿ ಮಾತಾಡ್ಬುಟ್ಟು ಹೋಗವೇ ಅಂತ್ಲೆ ಈ ಸತಿ ಬಂದಿರದು."

" ಮಾತಾಡು."

" ನೀನಿನ್ಮೇಲೆ ನನಗೆ ದುಡ್ಡು ಕಳೀಸಕ್ಕಾಗಲ್ಲ ಅಂತ ಕೆಂಪಣ್ಣಂಗೆ ತಿಳೀಸಿದ್ಯಂತೆ."

" ಹೌದು."

" ಹಂಗಂದರೇನು ? ನಾನೇನ್ಮಾಡ್ಬೇಕು ? "

" ಒಸಿ ಹಿಡಿತವಾಗಿ ಖರ್ಚುಮಾಡಬೇಕು."

" ಹಿಡಿತವಾಗೇ ಮಾಡ್ತಾ ಇರದು. ನಿನ್ನಂಗೆ ಸಿಕ್ಕಾಪಟ್ಟೆ ಸಾಲಾ ಮಾಡ್ತಾ ಇಲ್ಲ."

" ನನ್ನಂಗೇ !—ಹ್ಞೂ—ಏನು ಬಾಳ ದೊಡ್ಡದೊಡ್ಡ ಮಾತಾಡ್ತೀಯಲ್ಲ ? "

" ಹೌದು. ಯಾರ ತಲೇಮೇಲೆ ಕಲ್ಲೆಳೀಬೇಕೂಂತ ಮಾಡಿದೀಯೆ ? ನಿಮ್ವಿಷಯಾ ಎಲ್ಲ ನನಗ್ಗೊತ್ತು."

" ಏನು ಗೊತ್ತೋ ನಿನಗೆ ? "

" ನಿಮ್ಮಿಬ್ಬರಿಗೂ ಹೇಳೋರುಕೇಳೋರ್‍ಯಾರೂ ಇಲ್ಲ. ಇನ್ನೊಂದು ಸ್ವಲ್ಪದಿವಸ ಹಿಂಗೇಬುಟ್ರೆ ನೀವಿಬ್ಬರೂ ಎಲ್ಲಾನೂ ನೆಲಸಮಾಮಾಡ್ಬಿಡ್ತೀರಿ. ನಿಮ್ಮ ಆಟವೇ ಆಟವಾಗ್ಹೋಗಿದೆ."

" ಲೇ. ಯಾರ್ಲೇ ನಿನಗೆ ಮಾತುಕಲಿಸ್ದೋರು ? ಒಸಿ ಗ್ಯಾನವಾಗಿ ಮಾತಾಡು."

" ಸಾಕು ನಿಲ್ಸಪ್ಪ, ನನ್ನ ಬಾಯ್ಲ್ಯಾಕೆ ಕೆಟ್ಟಮಾತಾಡಸ್ತೀಯೆ !"

ಈ ಧಾಟಿಯಲ್ಲಿ ಮಾತು ಬೆಳೆದು ರಂಪವಾಗಿಹೋಯಿತು. ಮಲ್ಲೇಶನ ಬಾಯಲ್ಲಿ ಬರಬಾರದ ಮಾತುಗಳು ಬಂತು. ತಾಯಕ್ಕನ ನಾಲಿಗೆ ಒಣಗಿ

ಹೋಯಿತು. ಅವಳಿಗೆ ತಾವು ತಾಯಿ-ಮಗಳಿಬ್ಬರೂ ಕೆರೆ, ಭಾವಿ ಹುಡುಕಿಕೊಳ್ಳಬೇಕೆನ್ನಿಸಿತು. ಮಲ್ಲೇಶನಲ್ಲಿ ಅಸಹ್ಯವಾದ ಮನುಷ್ಯನೊಬ್ಬನನ್ನು ಕಂಡು ತಾಯಕ್ಕ ಮುಖ ಹಿಂಡಿಕೊಂಡಳು. ಅವನ ಮಾತುಗಳಿಂದ ಅವಳೂ ಭಂಡಬಿದ್ದು "ನಾನ್ಹಂಗೇಯೆ. ನೀನೇನ್ಮಾಡ್ಕತೀಯೋ ಮಾಡ್ಕೊಹೋಗು" ಎಂದಳು. ಮಲ್ಲೇಶ ಉರಿದು ಕೇಳಿದನು. "ನನಗೀಗ ದುಡ್ಡು ಬೇಕು. ಎಲ್ಲಾದರೂ ಮಾಡಿ ತಂದುಕೊಡು." ತಾಯಕ್ಕ ತಿರುಗಿನೋಡಲಿಲ್ಲ. ಹಾಗೆಯೇ ಹೇಳಿದಳು "ಒಂದು ಬುಡಗಾಸಿಲ್ಲ. ನೀನೋದ್ರೆ ಏಷ್ಟು ಬುಟ್ಟರೆಷ್ಟು?" ಮಲ್ಲೇಶ ಹಲ್ಲುಕಡಿಯುತ್ತಲೇ ಅರಚಿದ "ನೀನು ನನ್ನ ಭಾಗದ ಮೃತ್ಯು. ನಿನ್ನ ಮೊಖ ನೋಡಕ್ಕೆ ಮನಸಾಗೋದಿಲ್ಲ. ನೀನು ಆಸ್ತೀನೆಲ್ಲಾ ಪಟೇಲನಿಗೇ ಕೊಟ್ಟು ಅವನ ಮನೆ ಎಂಜಲಿಗೆ ನಿಂತ್ಕೋ. ನಾನಂತೂ ನಿನ್ನ ಮನೇಗೆ ಬರದಿಲ್ಲ. ಇನ್ನು ನಾನಾಯಿತು, ನನ್ನ ಹಣೇ ಬರಹವಾಯಿತು."

ಮಲ್ಲೇಶ ಮಾತಿಗೆ ತಕ್ಕಹಾಗೆ ನಿಲ್ಲಲೇ ಇಲ್ಲ. ಮಧ್ಯಾಹ್ನದ ಬಸ್ಸಿಗೇ ಮೈಸೂರಿಗೆ ಹೊರಟುಬಿಟ್ಟನು. ಹೀನಾಮಾನವಾಗಿ ಅವನ ಬಾಯಲ್ಲಿ ಆಡಿಸಿಕೊಂಡಿದ್ದ ತಾಯಕ್ಕ ಅವನನ್ನು ತಡೆಯಲು ಹೋಗಲಿಲ್ಲ. ಪುಟ್ಟ ತಾಯಿಗೆ ಏಕೋ ತಾನೂ ಮಲ್ಲೇಶನಂತೆಯೇ ಹೊರಟುಹೋಗಬೇಕೆನ್ನಿಸಿತೇ ಹೊರತು ಮಲ್ಲೇಶನನ್ನು ತಡೆಯಲು ಮನಸ್ಸಾಗಲಿಲ್ಲ. ತಾಯಕ್ಕನಿಗೆ ಒಬ್ಬಳೇ ಎಲ್ಲಿಯಾದರೂ ಕುಳಿತು ಬಹಳ ಗಟ್ಟಿಯಾಗಿ ಅತ್ತು ಬರಬೇಕೆನ್ನಿಸಿತ್ತು. ಹೀಗೆ ಮನೆಯನ್ನು ದುಃಖದ ಮಡಿಲಿನಲ್ಲಿ ಬಿಟ್ಟು ಮಲ್ಲೇಶ ನಡೆದನು. ತೆಂಕಳ್ಳಿಯನ್ನು ತಲಪುವವರೆಗೆ ಅದೇಕೋ ಅವನ ಕಣ್ಣಿನಲ್ಲಿಯೂ ಎರಡು ಬಾರಿ ನೀರು ಒತ್ತರಿಸಿ ಬಂದಿತ್ತು.

ಮೈಸೂರಿಗೆ ತಲುಪಿ ಅವನು ರೂಮಿನ ಬಾಗಿಲನ್ನು ಕಂಡಾಗ ದೀಪ ಹಚ್ಚಿತ್ತು. ಬಾಗಿಲು ತೆಗೆದಾಗ ಬಾಗಿಲ ಸಂದಿನಿಂದ ಒಂದು ಕಾಗದ ಅವನ ಮುಂದೆ ಬಂದು ಬಿದ್ದಿತು. ದೀಪ ಹಾಕಿ ಕಾಗದವನ್ನು ಬಿಡಿಸುತ್ತಾ ಪೆಟ್ಟಿಗೆಯಮೇಲೆ ಕುಳಿತನು. ಕಾಗದ ವಿಶಲನದು.

" ನಾನು ಊರಿಗೆ ಬರುವ ದಿವಸವೇ ನೀನು ರೂಮಿಗೆ ಬೀಗ ಹಾಕಿಕೊಂಡು ಎಲ್ಲಿಗೆ ಹೊರಟುಬಿಟ್ಟಿಯೋ ತಿಳಿಯದು. ದಿನಕ್ಕೆರಡು ಬಾರಿ ಬಂದು ನಿನ್ನ ರೂಮಿನ ಬಾಗಿಲು ನೋಡಿಕೊಂಡು ಹೋಗುವುದೇ ಕೆಲಸವಾಗಿತ್ತು. ನೀನು ಈ ಕಾಗದ ಕಂಡಕೂಡಲೇ ನಮ್ಮ ಮನೆಯ ಬಳಿಗೆ ಬಂದು ನನ್ನನ್ನು ಕಾಣು."— ವಿಠಲ್.

ಪುನಃ ಮಂಡೀಪೇಟೆಯವರೆಗೆ ಹೋಗುವಷ್ಟು ಉತ್ಸಾಹ ಮಲ್ಲೇಶನಲ್ಲಿರಲಿಲ್ಲ. ಅವನ ಹೊಟ್ಟೆ ಅವನನ್ನು ಆಗಲೇ ಪೀಡಿಸುತ್ತಿತ್ತು. ಅದರ ಶಮನಕ್ಕೆ ಚನ್ನವೀರಮ್ಮನ ಹೊರತು ಮತ್ತಾರ ಆಶ್ರಯವೂ ಪ್ರಯೋಜನಕಾರಿಯಾಗಿರಲಿಲ್ಲ. ಚನ್ನವೀರಮ್ಮನನ್ನು ನೆನೆಸಿಕೊಂಡರೆ ತುಂಬಾ ಭಯವಾಗುತ್ತಿತ್ತು. ಹಾಸಿ ಮಲಗಿಬಿಡೋಣವೆಂದುಕೊಂಡನು. ಹೊಟ್ಟೆಯು ಮತ್ತಷ್ಟು ಚುರ್ರೆಂದಿತು.

ಚನ್ನವೀರಮ್ಮನನ್ನು ಹುಡುಕಿಕೊಂಡು ಹೊರಟೇಹೊರಟನು. ಮಗಳನ್ನು ಅಳಿಯ ಕಳುಹಿಸಿಕೊಡಲಿಲ್ಲವೆಂಬ ರೇಗಿನಲ್ಲಿ ಸಿಡಿಯುತ್ತಿದ್ದ ಚನ್ನವೀರಮ್ಮ ಮಲ್ಲೇಶನ ಮುಖವನ್ನು ನೋಡಿ ಮತ್ತಷ್ಟು ಬಿಸಿಯಾದಳು. ಆದರೂ ಮಲ್ಲೇಶನಿಗೆ ಚನ್ನವೀರಮ್ಮನ ಯಾವ ಹೂತೂ ಬಿಸಿ ಮುಟ್ಟಿಸಲಾರದೇ ಇದ್ದವು. ಕೈಕಾಲು ತೊಳೆದು ತಾನೇ ನೇರವಾಗಿ ತಳಿಗೆಗಳನ್ನಿಡುತ್ತಿದ್ದ ಗೋಡೇಬೀರುವಿನಿಂದ ಒಂದು ತಟ್ಟೆಯನ್ನೆಳೆದುಕೊಂಡು ಕುಳಿತ. ಚನ್ನವೀರಮ್ಮ ಆಗುವುದೇ ಇಲ್ಲವೆಂದು ಹಟ ಹಿಡಿದಳು. ಸದ್ದಿಲ್ಲದೇ ಮಲ್ಲೇಶ ಕುಳಿತೇ ಇದ್ದನು. ಆ ಹೊತ್ತಿಗೆ ಸರಿಯಾಗಿ ಸದಾಶಿವನೂ ಬಂದು ಪಕ್ಕದಲ್ಲೇ ಕುಳಿತು ಊಟಮಾಡತೊಡಗಿದನು. ಅವನಿಗೆ ಬಡಿಸುತ್ತಿದ್ದ ಚನ್ನವೀರಮ್ಮ ಮಲ್ಲೇಶನ ಮಾತುಗಳನ್ನಾಡುತ್ತಿದ್ದಳೇ ವಿನಃ ಅವನ ಬಟ್ಟಲ ಕಡೆಗೆ ಬರುತ್ತಿರಲಿಲ್ಲ. ಊರಿಗೆ ಹೋಗಿದ್ದು ಬಂದಮೇಲೂ ದುಡ್ಡನ್ನು ಹೊರಕ್ಕೆ ತೆಗೆಯದೇ ತಟ್ಟೆ ಹಾಕಿಕೊಂಡು ಕುಳಿತಿದ್ದ ಆ ಭೂಪನ ಕೆಚ್ಚನ್ನು ಬಗೆಬಗೆಯಾಗಿ ವರ್ಣಿಸಿದಳು.

ಮಲ್ಲೇಶ ಚಟ್ಟನೆ ಎದ್ದು " ಮ್ಮೋ! ಯಾಕೆ ಸುಮ್ನೆ ಹೊಡ್ಕತೀಯೇ. ನಾಳೇ ನಿನ್ನ ದುಡ್ಡು ತಂದು ಬಿಸಾಕಿಬಿಡ್ತೀನಿ. ಅನ್ನಾ ಅಸ್ನಾಂತ

ಸಾಯ್ಬೇಡ" ಎಂದು ಹೊರಟ. ಚನ್ನವೀರಮ್ಮನಿಗೆ ಅವನ ಆ ಮಾತುಗಳಿಂದ ಅವನನ್ನು ಪೊರಕೆಯಿಂದ ಹೊಡೆಯಬೇಕೆನ್ನುವಷ್ಟು ಸಿಟ್ಟುಬಂದಿತೇ ವಿನಃ ಅವನು ಬರಿಯ ತಟ್ಟೆಯನ್ನು ಬಿಟ್ಟು ಎದ್ದುಹೋದುದರ ಬಗ್ಗೆ ಮರುಕ ಮೂಡಲಿಲ್ಲ. ಸದಾಶಿವನೂ ಅದನ್ನೇ ಪ್ರೋತ್ಸಾಹಿಸಿದನು. ಅವನ ದುಡ್ಡಿಗೆ ತನ್ನ ಜವಾಬ್ದಾರಿ ಕಳೆದು ಬಹಳ ದಿನಗಳಾಯಿತೆಂದೂ ಹೇಳಿ ಹೋದನು.

ಮಲ್ಲೇಶನಿಗೆ ವಿಠಲನ ಮನೆಯ ಕಡೆಗೆ ಹೋಗುವ ಮನಸ್ಸಾಯಿತು. ಅದರಲ್ಲಿ ಎಳ್ಳಷ್ಟೂ ಸಂಕೋಚವೆನಿಸಲಿಲ್ಲ. ಸಾಮಾನ್ಯವಾಗಿ ವಿಠಲ ಯಾವಾಗಲೂ ಮಲ್ಲೇಶನನ್ನು ಮನೆಯಕಡೆಗೆ ಬರಹೇಳುತ್ತಿರಲಿಲ್ಲ. ವಿಠಲನಿಗೆ ಆರೋಗ್ಯ ತಪ್ಪಿರಬಹುದೇ ? ಎಂಬ ಆಲೋಚನೆ ಬಂದಿತು. ಅದು ಅವನನ್ನು ಬಹಳವಾಗಿ ಹೆದರಿಸಿತು. ಚನ್ನವೀರಮ್ಮನಲ್ಲಿ ಗಂಡಸಿನ ಮಾತುಗಳನ್ನಾಡಿಬಂದಾಗಿತ್ತು. ವಿಠಲನೂ ಹಾಸಿಗೆ ಹಿಡಿದಿದ್ದರೆ ಆ ಮಾತುಗಳನ್ನು ಉಳಿಸಿಕೊಳ್ಳುವುದು ಹೇಗೆ ಎಂದು ಪೇಚಾಡಿಕೊಂಡನು.

ವಿಠಲನ ಮನೆ ಹನ್ನೆರಡು ಮೈಲಿ ದೂರವಿದ್ದಂತಿತ್ತು. ಮನೆ ಸಿಕ್ಕಿದಾಗ ಒಂಭತ್ತು ಗಂಟೆಯ ಸಮೀಪವಿರಬಹುದು. ಮನೆಯ ಮುಂದಿನ ಹಜಾರದ ದೀಪವು ಆರಿಹೋಗಿತ್ತು. ಆದರೂ ಒಳಗಿನ ದೀಪಗಳೆಲ್ಲ ಉರಿಯುತ್ತಿದ್ದುದರಿಂದ ಮಲ್ಲೇಶನಿಗೆ ಕೂಗುವ ಧೈರ್ಯ ಬಂದಿತು. "ಯಾರು ?" ಎಂದು ಬಿರುಸಾಗಿ ಯಾರೋ ಬಂದು ಹಜಾರದ ದೀಪ ಹಾಕಿ ಕೇಳಿದರು.

"ವಿಠಲ್ ಇಲ್ಲವೇ ?"

"ಏನು ಬೇಕಾಗಿತ್ತು ? ನೀವು ಯಾರು ?"

"ನಾನವನ ಸ್ನೇಹಿತ, ಮಲ್ಲೇಶ ಅಂತ."

"ವಿಠಲ್ ಯಾಕೀಗ, ಇಷ್ಟು ಹೊತ್ತಿನಲ್ಲಿ ? ಇಷ್ಟು ಹೊತ್ತಿನಮೇಲೆ ಅವನೆಲ್ಲಿಗೂ ಬರೊಲ್ಲ. ಇದೆಲ್ಲ ಕೆಟ್ಟ ಪದ್ಧತಿಗಳು. ಒಳ್ಳೇ ಸ್ನೇಹ! ಒಳ್ಳೇ ಪದ್ಧತಿಗಳು !"

ಅಷ್ಟೆಂದು ಬಿಟ್ಟು, ಬಂದಿದ್ದವರು ಬಾಗಿಲನ್ನೂ ತೆಗೆಯದೇ ಒಳಕ್ಕೆ ಹೊರಟುಹೋದರು. ಮಲ್ಲೇಶನಿಗೆ ಮುಖ ಮೂರು ಕಾಸಿನಗಲವಾಯಿತು

ಹಾಗೂ ಇನ್ನೊಂದುಗಳಿಗೆ ವಿಠಲನು ಬರಬಹುದೆಂದು ಕಾದುನೋಡಿ ನಿರಾಶನಾದನು. ಇನ್ನು ಹೆಚ್ಚುಹೊತ್ತು ಅಲ್ಲಿಯೇ ನಿಂತಿದ್ದರೆ ಇನ್ನೇನಾದರೂ ಬೈಗಳು ಸಿಕ್ಕಬಹುದೆಂದು ಅಲ್ಲಿಂದ ಕಾಲ್ತೆಗೆದನು. ಅವರಿಂದ ಹಾಗೆನ್ನಿಸಿಕೊಳ್ಳಲು ಅಷ್ಟುದೂರ ಬಂದಹಾಗಾಗಿತ್ತು. ರೂಮಿಗೆ ಹೋಗಿ ಸೇರುವೆನೋ ಇಲ್ಲವೇಇಲ್ಲವೋ ಎನ್ನಿಸಿತು.

ಸುಮಾರು ನೂರುಗಜ ದಾಟಿರಬೇಕು. ಹಿಂದಿನಿಂದ ವಿಠಲ ಸರಸರನೆ ಬಂದು ಮಲ್ಲೇಶನ ಅತಿಹತ್ತಿರಕ್ಕೆ ಬಂದಾಗ ಸದ್ದುಮಾಡಿದನು. ಹಿಂದಿರುಗಿ ವಿಠಲನನ್ನು ಕಂಡು ಮಲ್ಲೇಶನಿಗೆ ಹೋದಪ್ರಾಣ ಮರಳಿ ಬಂದಂತಾಯಿತು. ಒಮ್ಮೆಗೇ ಹೊಟ್ಟೆ ತುಂಬಿದಂತಾಯಿತು.

" ವಿಠಲ್ ! ಒಳ್ಳೇಕೆಲಸ ಮಾಡಿದೆ. ಮನೇಹತ್ತಿರಕ್ಕೆ ಬರ್ತ್ಲೇಳಿ ಒಳಗೆ ಅಡಗಿಬಿಟ್ಟಿದ್ದ್ಯಲ್ಲ—ಅದ್ಯಾರು ಹೊರಕ್ಕೆ ಬಂದು ನನಗೆ ಪೂಜೆಮಾಡಿದವರು ?"

" ನಮ್ಮದೊಡ್ಡಪ್ಪ. ಹೋಗ್ಲೀಬಿಡು. ಮನಸ್ಸಿಗೇನೂತಿಳ್ಕೋಬೇಡ. ಊರಿಗ್ಯಾವಾಗಬಂದೆ ? "

" ಬಂದತಕ್ಷಣ ನಿನ್ನ ಚೀಟಿ ನೋಡ್ಕೊಂಡು ಬಂದೇಪ್ಪಾ "

" ಈಗ ಹೊತ್ತಾಗ್ಹೋಗಿದೆ. ನಾಳೆ ಹೇಗಾದರೂ ಮಾಡಿ ನಿನ್ನೋಡ್ತೀನಿ."

" ಹೇಗಾದರೂ ಮಾಡಿ ?"

" ಹ್ಞೂ ಮಲ್ಲೇಶ. ಮನೆಬಿಟ್ಟು ಕದಲೋದೇ ಭಾಳ ಕಷ್ಟವಾಗಿದೆ. ನೀನು ನನಗೆ ಹೇಳದೇ ಕೇಳದೆ ಊರಿಗ್ಹೋಗೋಹೊತ್ತಿಗೇ ಇಷ್ಟೊಂದು ಪಂಚಾಯ್ತಿ."

" ಇದೇನೋಪ್ಪ ನನಗೊಂದೂ ಅರ್ಥವಾಗಿಲ್ಲ."

" ನಾಳೆದಿನ. ನಾನು ಬರ್ತ್ಲೀ "

" ವಿಠಲ್ !"

" ಏನು ಮಲ್ಲೇಶ ?"

" ಊರಿಂದ ಬಂದಾಗ್ಲಿಂದ ಕಾಫೀನೂ ಕುಡ್ದಿಲ್ಲ. ಬಾ ಕುಡಿಯೋಣ"

" ಈಗ ಟೈಮಿಲ್ಲಪ್ಪಾ. ಏನು ? ಊರಿಂದ ಬೇಕಾದಷ್ಟು ಹಾರಿಸ್ಕೊಂಡು ಬಂದಿರೋಹಾಗಿದೆ ?"

" ಇಲ್ಲಾ ವಿಠಲ್ ಒಂದು ಬಿಡಿಗಾಸೂ ಸಿಕ್ಕಲಿಲ್ಲ. ಜಗಳಾ ಆಡ್ಕೊಂಡು ಬಂದಿದ್ದಾಯ್ತು. ಚನ್ನವೀರಮ್ಮನ ಹತ್ತಿರ ಊಟವೂ ಸಿಕ್ಕಲಿಲ್ಲ. ನೀನು ಸಿಕ್ಕೇ ಸಿಕ್ತೀಯೋಂತ ಬಂದೆ."

" ಅಯ್ಯೋ ಆತರದಲ್ಲಿ ಶರಟು ತಗಲಿಸ್ಕೊಂಡು ಬಂದೆ ಮಲ್ಲೇಶ್. ಮನೇಗೆ ಹೋದರೆ ತಿರುಗಾ ಬರೋಹಾಗಿಲ್ಲ. ಏನ್ಮಾಡೋದು ?........ಹಾ ........ಬಾಯಿಲ್ಲಿ ಹತ್ತಿರದಲ್ಲಿ ಹೋಟಲಿದೆ ಗುರ್ತಿನವನದು............"

ಸಮೀಪದ ಹೋಟಲಿನವನು ವಿಠಲನಿಗೆ ಬೆಳಗಿನತನಕ ಹನ್ನೆರಡಾಣೆಯಷ್ಟು ಸಾಲನಿಲ್ಲಿಸಿಕೊಳ್ಳಲು ಒಪ್ಪಿದುದು ಹೆಚ್ಚೆ? ಮಲ್ಲೇಶನ ಹೊಟ್ಟೆಯು ತುಂಬಿದಂತಾಯಿತು. ಹೊಟ್ಟೆ ತುಂಬಿದಮೇಲೆ ಮಲ್ಲೇಶನಿಗೆ ಸ್ವಾಭಿಮಾನ ಹಿಂದಿರುಗಿ, ತಲೆತಗ್ಗಿಸುವಂತೆ ಮಾಡಿತು. ವಿಠಲನಿಗದು ಸಾಮಾನ್ಯವಾಗಿದ್ದರೂ ಮಲ್ಲೇಶನಿಗೆ ಬಹಳ ದೊಡ್ಡದೊಂದು ಘಟನೆಯಾಯಿತು. ವಿಠಲ ಹೊರಡುತ್ತೇನೆಂದು ಹೇಳಿ ಮಲ್ಲೇಶ ಕಾಫಿ ಮುಗಿಸುವುದರೊಳಗೆ ಹೊರಟು ಹೋದನು. ಕಾಫಿ ಮುಗಿದಮೇಲೆ ಮಲ್ಲೇಶ ಹೊಟೇಲಿನ ಕ್ಯಾಷಿಯರ್ ಎದುರು ತಲೆತಗ್ಗಿಸಿಕೊಂಡು ಹೊರಗೆ ಬಂದನು. ಅವನಿಗೆ ಹೊಟೇಲಿನವನೂ ತನ್ನ ಸ್ಥಿತಿಯನ್ನರಿತು ಅವಮಾನಿಸುತ್ತಿದ್ದಂತಿತ್ತು.

ವಿಠಲ ಆತುರದಲ್ಲಿ ಮನೆಗೆ ಹೊರಟುಹೋಗಿದ್ದನು. ಮಲ್ಲೇಶ ಅವನೊಡನೆ ಊರಿನಲ್ಲಾದುದನ್ನೆಲ್ಲಾ ವಿವರವಾಗಿ ಮಾತನಾಡಿ ಚನ್ನವೀರಮ್ಮನ ದುಡ್ಡಿನ ವಿಷಯವನ್ನೂ ಅವನಲ್ಲಿ ಪ್ರಸ್ತಾಪಿಸಬೇಕೆಂದುಕೊಂಡಿದ್ದನು. ಯಾವುದಕ್ಕೂ ಅವಕಾಶವಾಗಲಿಲ್ಲ. ಹೊಟ್ಟೆ ತುಂಬಿದುದೊಂದೇ ಲಾಭವಾಗಿತ್ತು. ಹೊಟ್ಟೆಯ ಚಿಂತೆಯಾದಮೇಲೆ ಚಪಲ ಅವನನ್ನೆದುರಿಸಿತು. ಸಿಗರೇಟಿಗೆ ಕಾಸಿರಲಿಲ್ಲ. ಬಸ್ಸಿಗೆ ಕೊಟ್ಟು ಉಳಿದಿದ್ದ ಒಂದಾಣೆಯಲ್ಲಿ ಬೀಡಿ ತೆಗೆದುಕೊಂಡಿದ್ದರೆ ಒಳ್ಳೆಯದಾಗಿತ್ತೆಂದುಕೊಂಡನು. ಮಂಡೀಪೇಟೆ ಹಲ್ಲಾದಿಂದ ಮಾರ್ಕೆಟ್ಟಿಗೆ ಬರುವವರೆಗೂ ಏನೂ ಮಾಡುವಂತಿರಲಿಲ್ಲ. ಮಾರ್ಕೆಟ್ಟಿನ ಎದುರಿನಲ್ಲಿದ್ದ ತನ್ನ ಮಾಮೂಲಿನ ಬೀಡಿಅಂಗಡಿಯವನು ಸಧ್ಯ ಇನ್ನೂ ಬಾಗಿಲುತೆಗೆದುಕೊಂಡೇ ಇದ್ದುದರಿಂದ ಮಲ್ಲೇಶ ಬದುಕಿದ.

ಪುನಃ ಮಾರನೆಯ ದಿನ ಮಧ್ಯಾಹ್ನ ಹನ್ನೆರಡುಗಂಟೆಯಸಮಯಕ್ಕೆ ವಿಠಲ ಅವನ ರೂಮಿಗೆ ಬರುವವರೆಗೂ ಮಲ್ಲೇಶನಿಗೆ ಏನೂ ಇರಲಿಲ್ಲ. ಆಡಿದ ಮಾತಿಗೆ ತಪ್ಪದೇ ವಿಠಲನು ಬಂದನು.

ವಿಠಲ ಎಂದಿನಂತೆ ಗೆಲುವಾಗಿರಲಿಲ್ಲ. ಅವನ ಮುಖದಲ್ಲಿ ಇರುತ್ತಿದ್ದ ಬೆಳಕೇ ಇರಲಿಲ್ಲ. ಬಂದವನೇ "ಉಸ್ಸೆ"ನ್ನುತ್ತಾ ಗೋಡೆಗೆ ಒರಗಿಕೊಂಡು ಕುಳಿತ. ಪದ್ಧತಿಪ್ರಕಾರ ಸೈಕಲ್ಲು ತಂದಿರಲಿಲ್ಲ. ಮಾಮೂಲಿಗೆ ವಿರುದ್ಧವಾಗಿ ಲುಂಗಿ ಸುತ್ತಿ ಬಂದಿದ್ದ. ಮಲ್ಲೇಶನಿಗೆ ಇವೆರಡೂ ತುಂಬಾ ಕುತೂಹಲಕ್ಕೆ ಕಾರಣವಾಯಿತು. ಅವುಗಳ ಬಗ್ಗೆ ಪ್ರಶ್ನೆಗಳನ್ನು ಹಾಕುವುದಕ್ಕೆ ಮುಂಚೆ ತಾನೇ ಅವಸರದಲ್ಲಿ ಗುಜರಾಯಿಸಿಕೊಳ್ಳಬೇಕಾದ ವಿಷಯಗಳಿದ್ದುದರಿಂದ ತಡವಾಯಿತು.

ಮಲ್ಲೇಶನ ಅಹವಾಲನ್ನೆಲ್ಲಾ ವಿಠಲ ಸಹಾನುಭೂತಿಯಿಂದ ಕೇಳಿದ್ದಾಯಿತು. ಚನ್ನವೀರಮ್ಮನಿಗೆ ಸಧ್ಯಕ್ಕೆ ಅರ್ಧ ಮೊಬಲಗನ್ನು ಕೊಡೋಣವೆಂದು ವಿಠಲ ಒಪ್ಪಿಕೊಂಡನು. ದುಡ್ಡಿನ ವಿಷಯದಲ್ಲಿ ತನ್ನ ಕೈಲಾಗುವ ಸಹಾಯವೆಲ್ಲವನ್ನೂ ಮಾಡುವುದಾಗಿ ವಿಠಲನಿಂದ ಭರವಸೆ ಬಂದಮೇಲೆ ಮಲ್ಲೇಶನ ಎದೆ ಹಗುರವಾಯಿತು. ತನ್ನ ಕುತೂಹಲದ ಆ ಎರಡು ವಿಷಯಗಳ ಪ್ರಸ್ತಾಪವನ್ನು ಮಲ್ಲೇಶ ನಗುನಗುತ್ತಾ ಕೇಳಲವಕಾಶವಾಯಿತು.

ವಿಠಲ ದೊಡ್ಡದೊಂದು ನಿಟ್ಟುಸಿರುಬಿಟ್ಟನು. ಅವನ ಮುಖ ಬಿಗಿದುಕೊಂಡಿತು. "ಎಲ್ಲಾ ಗೊತ್ತಿದ್ದವನ ಹಾಗೇನೇ ಕೇಳಿಬಿಟ್ಟಿದ್ದೀಯೆ ಮಲ್ಲೇಶ ಆದರೂ ಹೇಳ್ತೀನಿ. ನೀನು, ನಾನು ಬೆಂಗಳೂರಿಗೆ ಹೋಗಿದ್ದು ಬರೋದ್ರೊಳಗೆ ಊರಿಗೆ ಹೊರಟುಹೋದೆ. ನಾನು ನಿನ್ನ ರೂಮಿಗೆ ಎರಡುಸರ್ತಿ ಬಂದುಹೋದೆ. ನೀನು ಸಿಗಲಿಲ್ಲ. ನನಗೆ ಒಂಟಿಯಾಗಿರೋಕ್ಕೆ ನಿನ್ನಾ-ನನ್ನಾ ಸ್ನೇಹವಾದ ದಿವಸದಿಂದ ಬಲುಭಯ. ನೀನು ಬರೋವರ್ಗೂ ಓಡಾಡಲೇಬಾರದು, ಮನೇಲೆ ಇದ್ದುಬಿಡಬೇಕು, ಸ್ಕೂಲಿಗೂ ಹೋಗೋದೂ ಬೇಡ ಅಂತಿದ್ದೆ. ಆದರೆ ಸ್ಕೂಲಿಗೆ ಹೋಗದೇ ಇದ್ದರೆ ಮನೇಲಿ ಏನಾದರೂ ಅಂತಾರಲ್ಲ ಅಂತ ಹೋಗಿದ್ದೆ. ಮಾಮೂಲಿನ ಹಾಗೆ ಯಾವ ಪಿರಿಯಡ್ಡಿಗೂ ಚಕ್ಕರ್ ಹಾಕಲಿಲ್ಲ. ಕ್ಲಾಸಿನ ಹುಡುಗರಿಗೆಲ್ಲ ಆಶ್ಚರ್ಯವಾಗಿತ್ತು.

ಸ್ಕೂಲು ಬಿಟ್ಟತಕ್ಷಣ ನೇರವಾಗಿ ಮನೆಗೆ ಹೊರಟು ಹೋಗೋಣಾಂತ ಹೊರಟೆ. ದಾರಿಯಲ್ಲೇ ಅಪಶಕುನದ ಬೆಕ್ಕಿನ ಹಾಗೆ ಸದಾಶಿವ ಸಿಕ್ಕಿ ಮಾತನಾಡಿಸಿದ. ನಾನು ಬೇಗ ಅವನಿಂದ ಬಿಡುಗಡೆ ಮಾಡಿಕೊಂಡು ಹೊರಟೆ. ಹೋಗುತ್ತಿದ್ದಹಾಗೇ ಸದಾಶಿವನ ಯೋಚನೆ. ಅವನ ಸಹ ವಾಸದಿಂದ ನನಗಾದ ಅನುಭವದ ನೆನಪು ಬಂತು. ನನ್ನ ಬುದ್ಧೀಗೆ ಬಲ ಸಾಲದೂಂತ ಕಾಣುತ್ತೆ ಮಲ್ಲೇಶ. ನಾನು ಮಾಡ್ತಾ ಇರೋದು ತಪ್ಪು ತಪ್ಪೂಂತ್ಲೇ ಹೇಳ್ಕೋತಾ ತಪ್ಪು ಮಾಡೇಬಿಡ್ತೀನಿ.

ಮಾರ್ಕೆಟ್ಟಿನಿಂದಾಚೆ ಪೋಸ್ಟ್ ಆಫೀಸಿನ ಎದುರಿಗೆ ಒಬ್ಬ ನಿಂತಿದ್ದ. ಅವನ ಪರಿಚಯ ಸದಾಶಿವನ ಮುಖಾಂತರ ನನಗಾಗಿತ್ತು. ಅವನ ವಿಷಯ ವೆಲ್ಲ ಗೊತ್ತಿದ್ದ ನನಗೆ ಅವನ ಮುಖವನ್ನು ಕಂಡೊಡನೆಯೇ ಮೈನಡುಗಿತು. ಅವನು ನಮಸ್ಕಾರ ಅಂದ. ನನಗಿಷ್ಟವಿಲ್ಲದಿದ್ದರೂ ನನ್ನ ಕೈ ಅವನಿಗೆ ಉತ್ತರ ಕೊಟ್ಟಿತು. ಅವನಿಗೆ ಅದರಿಂದ ನನ್ನ ಜೀವಾಳ ಗೊತ್ತಾಯಿತೋ ಏನೋ ? ನಾನು ಮುಂದೆ ಹೊರಟುಹೋಗಿದ್ದರೂ ಚಪ್ಪಾಳೆ ತಟ್ಟಿದ. ನಾನು ಹಿಂದಿರುಗಿ ನೋಡದೇ ಇರಬಹುದಾಗಿತ್ತು. ನೋಡಿದೆ. ದಯವಿಟ್ಟು ಬನ್ನಿ ಸ್ವಲ್ಪ ಅನ್ನೋಹಾಗೆ ಅಭಿನಯಮಾಡ್ತಾ ಇದ್ದ. ಬೇಡ ಬೇಡ ಅಂತ್ಲೆ ಇಳಿದೆ. ಅವನ ಮಾತಿನ ಬಲೇಗೆ ಸಿಕ್ಕಿಬಿದ್ದೆ. ಅವನು ಕರೆದಕಡೆ ಹೋದೆ.

ಹುಡುಗಿ ಕುಳ್ಳಿ. ರಾಧೆ ಅಂತ ಹೆಸರಂತೆ. ಅವಳು ಹೇಳಿದ್ದೂ ಹದಿ ಮೂರು ವರ್ಷ ನಾನು ಊಹಿಸಿದ್ದೂ ಅಷ್ಟೆ ! ಕೆಂಡದ ಬಣ್ಣಕ್ಕಿದ್ದಳು.

ನಾನು ಬೇಕಂತಲೇ ದುಡ್ಡು ಹತ್ತಿರಿಟ್ಟುಕೊಂಡಿರಲಿಲ್ಲ. ಪುನಃ ಬರ್ತೀನಿ, ಅಂತಹೇಳಿ ಮನೆಗೆ ಬಂದೆ. ಆಗಲೂ ನನಗೆ ಒಂದುಮನಸ್ಸಿತ್ತು ಬರದೇ ಇದ್ದುಬಿಡುತ್ತೇನೆಂದು ಆ ಮನಸ್ಸಿಗೆ ಸಮಾಧಾನ ಹೇಳಿದೆ. ಅದರೆ ರಾಧೆ ಮನೆಯವರು ಹೇಳಿದ್ದ ಒಂದು ಮಾತು ನನ್ನ ತಲೆಯಿಂದಾಚೆಗೆ ಹೋಗಿರಲಿಲ್ಲ. ನಮ್ಮೋರೊಬ್ಬರು ಸಕತ್ ಖಾಯಿಲೆಯಾಗಿ ಆಸ್ಪತ್ರೇಲವ್ರೆ. ಅವರಿಗೆ ಔಷಧಿ ತರಕ್ಕೆ ಕಾಸಿಲ್ಲ' ಎಂದು ಅವರು ಡಾಕ್ಟರ್ ಅಕ್ಷರದ ಒಂದು ಚೀಟಿ ತೋರಿಸಿದ್ದರು.

ನಾನು ಕೆಟ್ಟೆ. ಅಂದರೆ ಮನೆಗೆ ಹೋಗಿ ಬಹಳ ಹೊತ್ತಾದಮೇಲೂ ಹಿಂದಿರುಗಿ ರಾಧೆಮನೆಗೆ ಬಂದೇಬಿಟ್ಟೆ. ಔಷಧಿಗೆ ದುಡ್ಡು ! ಪಾಪ !!

ರಾತ್ರಿ ಮನೆಗೆ ಹೋಗಿ ಊಟಮಾಡಿ ಮಲಗಿದಮೇಲೆ ಸಿಟ್ಟೆ ಬಂದಂತಾಯಿತು. ತಕ್ಷಣ ಎಚ್ಚರವೂ ಆಯಿತು. ಬಾಯೆಲ್ಲ ಬಿಸಿಯಾಗಿತ್ತು. ಸ್ವಲ್ಪವೇ ಹೊತ್ತಿನಲ್ಲಿ ಮೈಯೆಲ್ಲಾ ಬಿಸಿಯಾಯಿತು. ಬೆಳಗಿನಝಾವದವರೆಗೆ ಅಸಾಧ್ಯಜ್ವರ ಬಂದು ಹೊರಳಾಡಿಸಿತು. ಇಲ್ಲ-ಇಲ್ಲ ಹೊರಳಾಡುವುದಕ್ಕೂ ಅವಕಾಶ ಕೊಡದೇ ಮಿಸುಕಾಡಿಸಿತು.

ಮನೆಯಲ್ಲಿ ಜ್ವರ ಎಂದು ತಿಳಿದುಕೊಂಡಿರುವಾಗಲೇ ಸರಿಮಾಡಿಕೊಂಡುಬಿಡಬೇಕೆನ್ನಿಸಿ ನಾನೇ ಡಾಕ್ಟರ ಬಳಿಗೆ ಹೋದೆ.—

ಮಲ್ಲೇಶ ಬೆದರಿದನು. ಅವನಿಗೆ ಎಲ್ಲವೂ ಅರ್ಥವಾಗಿತ್ತು. ವಿಠಲ ಎಂಥಾ ಸಡಿಲದ ಬುದ್ಧಿಯವನು ಎಂದುಕೊಂಡನು. ಹೀಗೇ ಮುಂದುವರಿದರೆ ಅವನ ಸ್ನೇಹ ತನ್ನನ್ನು ಏನುಮಾಡುವುದೋ ಎನ್ನಿಸಿತು. ಆದರೆ ವಿಧಿಯಿಲ್ಲ. ವಿಠಲನ ಸ್ನೇಹವನ್ನು ತಾನಾಗಿ ನಿರಾಕರಿಸುವ ಸ್ಥಿತಿಯಲ್ಲಿ ಮಲ್ಲೇಶನಿರಲಿಲ್ಲ. ವಿಠಲನು ಮಾಡುತ್ತಿದ್ದ ನಾನಾಸಹಾಯಗಳಿಂದ ಮಲ್ಲೇಶ ಕಟ್ಟಲ್ಪಟ್ಟಿದ್ದನು. ಮುಂದೆಯೂ ವಿಠಲನೇ ಅವನಿಗೆ ದಿಕ್ಕಾಗಿರಬೇಕಾದ ಪರಿಸ್ಥಿತಿಯನ್ನು ಮಲ್ಲೇಶ ಕಿರೀಕಾಟೆಯಿಂದ ತಂದುಕೊಂಡಿದ್ದನು.

ಅಂದು ಚನ್ನಪೀರಮ್ಮನ ಬಾಕಿಯಲ್ಲಿ ಅರ್ಧ ದುಡ್ಡನ್ನಾದರೂ ತಲುಪಿಸುವ ಏರ್ಪಾಡಾಗಬೇಕಿತ್ತು. ರೂಮಿನ ಬಾಡಿಗೆಯವನಿಗೆ ಸಮಾಧಾನ ಹೇಳಬೇಕಾಗಿತ್ತು. ಆಗಲೇ ಒಂದು ಗಂಟೆಯ ಸಮಯವಾಗಿ ಹೊಟ್ಟೆ ತನ್ನ ಕಡೆಗೆ ಅವನ ಗಮನವನ್ನು ಎಳೆಯುತ್ತಿತ್ತು. ವಿಠಲ ಸಿಗರೇಟನ್ನು ಜೇಬಿನಿಂದ ತೆಗೆದನು. ಆ ಹೊಗೆಯನ್ನೇ ಮಲ್ಲೇಶ ಹೊಟ್ಟೆಗೆ ಕಳುಹಿಸಿ ಸ್ವಲ್ಪ ವಾಯಿದೆ ಹೇಳಿಸಿದ್ದಾಯಿತು.

ವಿಠಲ ಸಿಗರೇಟು ತೆಗೆಯಲು ಜೇಬಿಗೆ ಕೈಹಾಕಿದಾಗ ಅವನಿಗೆ ಅಲ್ಲಿದ್ದ ವಸ್ತುಗಳ ನೆನಪಾಗಿ ಸಿಗರೇಟಿನೊಡನೆ ಅದನ್ನೂ ಹೊರತೆಗೆದನು. ಅವೆಲ್ಲ "ಇಂಜೆಕ್ಷನ್ ಟ್ಯೂಬು" ಮತ್ತು ಡಿಸ್ಟಿಲ್ಡ್ ವಾಟರ್ ಟ್ಯೂಬುಗಳು. ಅವುಗಳನ್ನು ಭದ್ರವಾಗಿ ಮಲ್ಲೇಶ ತನ್ನ ಬಳಿಯಿಟ್ಟುಕೊಂಡಿರಬೇಕೆಂದು

ವಿಠಲನ ಕೋರಿಕೆಯಾಯಿತು. ಅದನ್ನು ಆಜ್ಞೆಯಂತೆ ಮಲ್ಲೇಶ ತೆಗೆದು ಕೊಂಡನು.

"ಈ ವಿಷಯ ಯಾರಿಗೂ ಹೇಳಬೇಡ ಮಲ್ಲೇಶ" ಎಂದು ವಿಠಲ ಕಟ್ಟುಮಾಡಿದನು. ಮಲ್ಲೇಶ 'ಜೀ ಹೂಜೂರ್' ಎಂದುದು ಬರಿಯ ತಮಾಷೆ ಮಾತ್ರವಾಗಿರಲಿಲ್ಲ.



೧೨

ಪುಟ್ಟತಾಯಿಯೊಂದಿಗೇ ತನ್ನ ಭಾಗದ ಶನಿ ಹೋಯಿತೆಂದು ಮಾದೇವೂವಿನ ಭಾವನೆ. ಅವನನ್ನೀಗ ಹೇಳುವವರಿಲ್ಲ ಕೇಳುವವರಿಲ್ಲ. ಅವನು ಮಾಡಿದ ಕೆಲಸಗಳೆಲ್ಲ ತಪ್ಪು ಎಂದು ಅಳುವವರಿಲ್ಲ. ಮೂರು ತಿಂಗಳ ಕಾಲ ಅವನಿಗೆ ಯಾವುದರ ಕೊರತೆಯೂ ಕಾಣಲಿಲ್ಲ. ಚಿಕ್ಕಲಿಂಗ ಪ್ಪನವರ ಸಾಲವೆಲ್ಲ ತೀರಿಹೋಯಿತು. ಅವನೊಬ್ಬ ವ್ಯವಸಾಯಗಾರ ನೆಂಬುದಕ್ಕೆ ಸೂಚಕವಾಗಿದ್ದ ಅವನ ಪಾಲಿನ ಅಡ್ಡಾಳದೊತ್ತಿನ ತೋಟ ಕೈಬಿಟ್ಟುಹೋಗಿ ನಾಲ್ಕು ತಿಂಗಳುಗಳಾಗಿದ್ದವು. ಚಿಕ್ಕಲಿಂಗಪ್ಪನವರಿಗೆ ಸೇರಿದಮೇಲೆ ಅದರ ರೂಪೇ ಬದಲಾಯಿಸಿಹೋಗಿತ್ತು. ನೀರಂಜೀ ಮರದ ಸಾಲಿನ ಮಧ್ಯೆ ಈಗೊಂದು ಸಣ್ಣ ತಗಡಿನ ಮನೆಯಿತ್ತು. ಅದರಲ್ಲಿ ಕ್ರೂಡ್, ಎಣ್ಣೆಯ ನೀರೆತ್ತುವ ಎಂಜಿನ್ನೊಂದಿದ್ದು ದಿನಬಿಟ್ಟುದಿನ ಆರಾರು ಗಂಟೆಯ ಹೊತ್ತು ಶಬ್ದಮಾಡುತ್ತಿತ್ತು.

ಅದು ಕಿವಿಗೆ ಬಿದ್ದಾಗ ಮಾದೇವೂವಿನ ಅಪ್ಪ ಅಣ್ಣಂದಿರ ಹೊಟ್ಟೆ ಯುರಿದು ಹೋಗುತ್ತಿತ್ತು. ಮಾದೇವೂವಿಗೆ ಅದು ಲೆಕ್ಕಕ್ಕೇ ಬರುತ್ತಿರ ಲಿಲ್ಲ. ಅದರ ತಪ್ಪನ್ನೆಲ್ಲಾ ಅವನು ಪುಟ್ಟತಾಯಿಯ ಮೇಲೆ ಹಾಕು ತ್ತಿದ್ದನು. 'ಆ ಗರತಿಯ ಮಗಳು ನನ್ನ ಮನೆಗೆ ಬಂದು ತೊಳೆದುಬಟ್ಟು ಹೊಂಟೋದ್ಲು' ಎನ್ನುತ್ತಿದ್ದನು. 'ನಿನ್ನ ಪಾಡೇನಾ?' ಎಂದು ಯಾರಾ ದರೂ ಕೇಳಿದರೆ 'ನನಗೇನಾ? ಸಾಯೋವರ್ಗೂ ಸಾಕ್ಕಳೋ ಅಷ್ಟು ಜನ ಸೇಯಿತಗಾರನ್ನ ಸಂಪಾದನೆ ಮಾಡಿವ್ನಿ'ಎನ್ನುತ್ತಿದ್ದ. ಆಗ ಜನ ನಗುತ್ತಿ ದ್ದರು. ಅದನ್ನವನು ಗಮನಿಸುತ್ತಲೇ ಇರಲಿಲ್ಲ.

ಅವನಿಗೆ ಉಳಿದಿದ್ದ ಐಶ್ವರ್ಯವೆಂದರೆ ಅವನ ಭಾಗದ ಮನೆ. ಅದಕ್ಕ ವನು ಪ್ರವೇಶಿಸುತ್ತಿದ್ದುದೇ ಅಪರೂಪ. ಹೆಂಡತಿಯನ್ನು ಬಿಟ್ಟಂತೆಯೇ ಅದನ್ನೂ ಬಿಟ್ಟುಕೊಟ್ಟಿದ್ದ. ಹುಡುಗಿ ಚನ್ನಮ್ಮನೋ ಇಲ್ಲ ಅವಳ ತಮ್ಮನೋ ತನ್ನ ಮನೆಯ ತುಂಡುಗೋಡೆಯ ಹಜಾರಕ್ಕೆ ನುಗ್ಗಿರುವುದನ್ನು ಕಂಡಾಗ ಅವರನ್ನು ಗದರಿಸಿ ಅಟ್ಟುತ್ತಿದ್ದುದುಂಟು. ಆ ಕಾಲದಲ್ಲಿಯಾದರೂ

ಮನೆಯ ಆ ಭಾಗ ತನ್ನದು ಎಂಬ ಆತ್ಮೀಯತೆ ಕಾಣಬರುತ್ತಿತ್ತು. ಪುಟ್ಟತಾಯಿಯ ವಿಷಯದಲ್ಲಿ ಮಾತ್ರಾ ಅವನಲ್ಲಿ ಯಾವ ವಿಧವಾದ ಆಸಕ್ತಿಯೂ ತೋರಿಬರುತ್ತಿರಲಿಲ್ಲ.

ಕೆಟ್ಟುಹೋದ ತಮ್ಮನನ್ನು ಹಾಗೆಯೇ ಬಿಟ್ಟರೆ, ಪ್ರಪಂಚ ಏನಾದ ರೆಂದುಕೊಳ್ಳಲಿ ಎನ್ನಬಹುದು ಆದರೆ ದೇವರು, ಪಾಪ, ಪುಣ್ಯಗಳ ಮಾತು ನೆನಪಿಗೆ ಬಂದಾಗ ಅಣ್ಣಂದಿರಿಗೆ ಬಹಳ ನೋವಾಗುತ್ತಿತ್ತು. ಅವರಪ್ಪ ಮಲ್ಲಪ್ಪನಿಗೆ ಪುಟ್ಟತಾಯಿಯ ಪ್ರಕರಣದಿಂದೀಚೆಗೆ ಬುದ್ಧಿಯೇ ಕೆಟ್ಟು ಹೋಗಿ ಅವನು ಎಲ್ಲರ ಮೇಲೂ ಹುಚ್ಚುಹುಚ್ಚಾಗಿ ಬೀಳಲು ಬರುತ್ತಿದ್ದನು. ಅವನ ಮೂಲಕ ಮಾದೇವೂವಿನ ಸಂಬಂಧವನ್ನು ಕೂಡಿಸಿಕೊಳ್ಳಲು ಪ್ರಯತ್ನಪಡುವಂತೆಯೇ ಇರಲಿಲ್ಲ. ಅವನಿಗೆ ಮಾದೇವೂವನ್ನು ಬೈಯ್ಯುವುದೇ ಹದಿನೆಂಟು ಗಂಟೆಯ ಕೆಲಸವಾಗಿ ಹೋಗಿತ್ತು.

ದೊಡ್ಡಣ್ಣ, ಮನಸ್ಸುಮಾಡಿ ಒಂದು ದಿನ ತಮ್ಮನನ್ನು 'ಅಡ್ಡಾಳ'ದ ಹತ್ತಿರ ಹಿಡಿದನು. ಇಬ್ಬರೂ ಒಂಟಿ ಒಂಟಿಯಾಗೇ ಇದ್ದು ಸಂಧಿಸಿದ್ದದ್ದು. ದೊಡ್ಡಣ್ಣ ಮಾತನಾಡಿಸಬಹುದೆಂದು ಮಾದೇವು ಖಂಡಿತ ತಿಳಿದಿರಲಿಲ್ಲ. ಅವನ ಬಾಯಿಂದ ಬಂದ 'ಮಾದೇವೂ!' ಎಂಬ ಮೂರಕ್ಷರದ ಸ್ವರ ಮಾದೇವೂವಿನ ಮೇಲೆ ಮಾಯದ ಪರಿಣಾಮವನ್ನುಂಟುಮಾಡಿತು. ಅವಿಧೇಯತೆಯನ್ನೇ ತೋರಿಸಬೇಕೆಂದಿದ್ದ ಮಾದೇವೂವಿನ ಛಲವನ್ನು ಅದಾವುದೋ ಶಕ್ತಿ ಒತ್ತಿಹಿಡಿದು ಅವನನ್ನು ಅಣ್ಣನನ್ನು ಹಿಂಬಾಲಿಸಲು ಪ್ರೇರಿಸಿತ್ತು.

ಕಾಲುಹಾದಿಯಿಂದ ದೂರವಾಗಿ ಜಮೀನಿನೊಳಕ್ಕೆ ನಡೆದು ಹೋಗಿ ಅಣ್ಣ ಹೇಳಿದನು. 'ಮಾದೇವೂ.....ಒಸಿ ನಿನ್ಕೂಟೆ ಮಾತ್ಗಳಾಡಬದೆ. ಆಡೂ ಅಂದ್ರಾಡ್ತಿನ್ನಿ'

'ಊ'

'ನೀನು ಮುಂದಕ್ಕೇನು ಮಾಡವೇ ಅಂತಿದೀಯೆ!'

'ಏನ್ಮಾಡದು. ಇಂಗೇ.... ಇರದು'

'ಜನ ನಮ್ಮಟ್ಟ ಕತೆ ನೋಡ್ಕಂಡು ಆಡ್ಕಂಡು ನಗತಾ ಅವ್ರೆ ಮಾದೇವು. ನಿನಗೆ ಅನುಬೋಗಾ ಸಾಲದು. ನಾಏಳ್ದಂಗೆ ಕೇಳ್ತೀಯಾ?'

'ಪಾಲಾಗೋಗದಲ್ಲಣ್ಣ. ಇನ್ನು ಕೇಳ್ಡ್ರೇನಾ ಬುಟ್ಟರೇನಾ ?'

"ಇಲ್ಲಾ ಮಾದೇವೂ ಈಗ್ಲೂ ಏನೂ ಆಗಿಲ್ಲ. ಪುನ ಒಂದಾಗವೆ ಬಾ —ಪುಟ್ಟತಾಯೀನ....'

'ಅಣ್ಣ....ಅವಳ ಸುದ್ದಿ ಆಡಬೇಡ. ನಾನಿಲ್ಲಿ ನಿಂತ್ಕಳದೇ ಇಲ್ಲ'

'ಬೇಡ ಓಗ್ಲೀಬುಡು. ಪುಟ್ಟತಾಯಿಬೇಡವೇ ಬೇಡಅಂತ ಆದ ಕಾಲಕ್ಕೆ ಇನ್ನೊಂದು ಲಗ್ನ ಮಾಡ್ತೀವಿ ನೀನು ಒಟ್ಟನಟ್ಟೇಗೆ ಬಂದ್ಬುಡು'

'ಅದೆಲ್ಲ ಆಗದಿಲ್ಲ. ನಿಮ್ಮ ಸಂಸಾರಕ್ಕೂ ನನಗೂ ಸರಿಬೀಳದಿಲ್ಲ'

'ಇಲ್ಲ ಮಾದೇವೂ....ನಿನ್ನ ಕಂಡರೆ ಯಾರ್ಗೂ ವೈಮನಸಿಲ್ಲಾಯ್ಯ'

'ಅವರೆಲ್ಲ ಒಳ್ಳೆಯೋರೆ....ನಾನೇ ಕೆಟ್ಟೋನಲ್ಲ ?'

'ನಾವಂಗಂದ್ಕಂಡಿದ್ದರೆ ಈಗ ನಿನ್ನ್ಯಾಕೆ ಮಾತಡಿಸ್ಕಂಡು ಬತ್ತಿದ್ದೇ ಮಾದೇವು ?'

'ನಿಮಗೆ ಇರಕ್ಕೆ ಹಟ್ಟಿ ಸಾಲ್ದು. ನನ್ನ ಪಾಲನ್ನೂ ಸೇರಸ್ಕಂಡ್ರೆ ಸಾಕಾಯ್ತದೆ ಅದಕ್ಕೆ!'

ಅಣ್ಣನಿಗೆ ಮುಖದಮೇಲೆ ಒದ್ದಂತಾಯಿತು. ಒಂದು ಗಳಿಗೆ ಅವನಿಗೆ ಮಾದೇವೂವನ್ನು ಏನು ಮಾಡಬೇಕೆಂಡು ತೋರಲಿಲ್ಲ. ಸುಟ್ಟುಬಿಡುವವನಂತೆ ತಮ್ಮನನ್ನೇ ದುರುಗುಟ್ಟಿ ನೋಡಿ ಆ ಜಾಗದಿಂದ ಕಾಲ್ತೆಗೆದನು. ಮಾತನ್ನು ಮುಂದುವರಿಸಲು ಹೇಸಿಗೆಯಾಯಿತು. ತಮ್ಮನ ಮೇಲೆ ತಂದುಕೊಂಡಿದ್ದ ಪ್ರೀತಿಯೆಲ್ಲಾ ಮತ್ತೆ ವಿಷವಾಗಿ ನಿಂತಿತು.

ಮಾದೇವೂಗೆ ತನ್ನ ಅಣ್ಣನ ವರ್ತನೆಯೇ ವಿಚಿತ್ರವೆನ್ನಿಸಿತು. ಮಾದೇವು ಅಣ್ಣನನ್ನು ಕೆಣಕಬೇಕೆಂದು ಆ ಮಾತನ್ನು ಸತ್ಯವಾಗಿಯೂ ಆಡಿರಲಿಲ್ಲ. ಅವನಿಗೆ ಸಧ್ಯಕ್ಕೆ ಹಣ ಬೇಕಾಗಿತ್ತು ಮಾತು ಹಾಗೆಯೇ ಮುಂದುವರಿದರೆ ತಾನು ತನ್ನ ಪಾಲಿನ ಮನೆಯನ್ನು ಮಾರಿಬಿಡಬೇಕೆಂದಿರುವ ವಿಷಯವನ್ನು ಅಣ್ಣನಿಗೆ ಹೇಳಬೇಕೆಂದಿದ್ದನು. ಅಣ್ಣಂದಿರ ಹತ್ತಿರ ಇತ್ತೀಚೆಗೆ ಎಳ್ಳುಮಾರಿದ ಇನ್ನೂರು ರೂಪಾಯಿಗಳ ಗಂಟಿದೆಯೆಂಬ ವಿಷಯ ಮಾದೇವೂಗೆ ತಿಳಿದಿತ್ತು. ಇವನ ಪಾಲಿನ ಮನೆಯನ್ನು ಬೇರೆ ಯಾರೂ ಕೊಂಡುಕೊಳ್ಳುವ ಹಾಗಿರಲಿಲ್ಲ. ಎಂದಿದ್ದರೂ ಅದನ್ನು

ಮಾದೇವೂವಿನ ಅಣ್ಣಂದಿರೇ ತೆಗೆದುಕೊಳ್ಳಬೇಕಾಗಿತ್ತು. ಅದಲ್ಲದೇ ಮಾದೇವೂಗೆ ದುಡ್ಡಿನ ದರದು ವಿಶೇಷವಾಗಿತ್ತು.

ಹಾಲಿನ ಬಟ್ಟಮ್ಮನಿಗೆ ನೂರು ರೂಪಾಯಿ ಸಾಲಕೊಡುತ್ತೇನೆಂದು ಈ ಸಾಹುಕಾರ ಮಾದೇವು ಒಪ್ಪಿಕೊಂಡು ಬಹಳ ದಿನವಾಗಿತ್ತು. ತೋಟವನ್ನು ಚಿಕ್ಕಲಿಂಗಪ್ಪನವರಿಗೆ ಕ್ರಯಕ್ಕೆ ಬರೆದು ಅವರಿಂದ ನಗದಾಗಿ ನೂರೈವತ್ತು ರೂಪಾಯಿಗಳನ್ನು ಪಡೆದ ದಿನ ಅವಳಿಗೆ ಆ ದುಡ್ಡನ್ನು ಕೊಡೋಣವೆಂದಿದ್ದು ಕೊಡಲಾಗಿರಲಿಲ್ಲ. ಒಂದಾನೊಂದು ಕಾಲದಲ್ಲಿ ತಾನು ಕೊಡಬೇಕಾಗಿದ್ದ ಹಾಲಿನ ಬಾಕಿಗೆ ಬೀದಿರಂಪಮಾಡಿದ ಬಟ್ಟಮ್ಮ ತನ್ನನ್ನೇ ಸಾಲಕೇಳುವ ಹಾಗಾದಳಲ್ಲ ಎಂಬ ದೊಡ್ಡಸ್ತಿಕೆಗೆ ಬಲಿಬಿದ್ದು ಮಾದೇವು ಅವಳಿಗೆ ಹಣವನ್ನು ಕೊಡಲೊಪ್ಪಿದ್ದದ್ದು. ಅವನ ತೂತುಗೈ ಅದಕ್ಕೆ ಅವಕಾಶವೇ ಕೊಟ್ಟಿರಲಿಲ್ಲ.

ಹೆಂಡತಿ ಓಡಿಹೋದ ತಿಂಗಳ ಮೇಲೆ ಬಟ್ಟಮ್ಮ ಇನ್ನೊಂದು ಆಸೆಯನ್ನು ತೋರಿಸಿದ್ದಳು ಅವನಿಗೆ. ತೆಂಕಳ್ಳಿಯಲ್ಲಿ ಬಟ್ಟಮ್ಮನ ದೂರದ ಸಂಬಂಧಿಕಳೊಬ್ಬಳಿದ್ದಳಂತೆ. ಅವಳಿಗೊಬ್ಬಳು ಲಗ್ನಕ್ಕೆ ಯೋಗ್ಯವಾಗಿದ್ದ ಮಗಳು. ಆ ಹುಡುಗಿಯನ್ನು ಮಾದೇವೂಗೆ ಕೊಡಿಸುವುದಾಗಿ ಬಟ್ಟಮ್ಮ ಅವನಿಗೆ ಆಸೆ ಹುಟ್ಟಿಸಿದ್ದಳು.

ಆಸ್ತಿಯಿಲ್ಲದ, ಹಿರಿಯರ ವಿಶ್ವಾಸವಿಲ್ಲದ, ಯಾವುದೂ ಉದ್ಯೋಗವಿಲ್ಲದ 'ಸೋಕಿ'ಯು ಹುಡುಗನೊಬ್ಬನಿಗೆ ಓಡಿಹೋದ ಹೆಂಡತಿ ಜೀವಂತಳಾಗಿರುವಾಗಲೇ ಬೇರೊಂದು ಹುಡುಗಿ ಸಿಕ್ಕ ಬೇಕಾಗಿದ್ದರೆ ಏಳು ಜನ್ಮದಲ್ಲೂ ಪುಣ್ಯವನ್ನೇ ಮಾಡಿರಬೇಕು ಆತ. ನೂರು ರೂಪಾಯಿ. ಅದೂ ಸಾಲ ರೂಪವಾಗಿದ್ದು ಹಿಂದಕ್ಕೆ ಬರುವ ಹಣ! ಅದರಿಂದ ಇಷ್ಟೊಂದು ಅಮೋಘವಾದ ಪ್ರತಿಫಲ ಸಿಕ್ಕುವುದಿದ್ದರೆ ಬಿಡಲಾಗುವುದೇ? ಮಾದೇವು ಹೆಣ್ಣನ್ನು ನೋಡಬೇಕೆಂದು ಬಟ್ಟಮ್ಮನ ಬೆನ್ನು ಹತ್ತಿದನು ಅವಳು ನೂರು ರೂಪಾಯಿ ತನ್ನ ಕೈಗೆ ಬೀಳುವವರೆಗೂ ತಾನು ಗುಜ್ಜಗೆರೆಯನ್ನು ಬಿಟ್ಟು ಅಲುಗುವ ಹಾಗಿಲ್ಲವೆಂದು ಹಟತೊಟ್ಟಿದ್ದಳು.

ಅವನ ಪಾಲಿನ ತೋಟದ ಬಾಬ್ತು ಹಣವೆಲ್ಲ 'ಚೆಲ್ಲಾಪಿಲ್ಲಿ' ಯಾಗಿ ಹೋದಮೇಲೆ ಮಾದೇವ್ರೂ ಬಟ್ಟವ್ಮನಿಗೆ ಬರಿಗೈ ತೋರಿಸಿ ಹೇಳಿದ್ದ 'ನನ್ನತ್ರ ಈಗೊಂದು ಕಾಸೂ ಇಲ್ಲ. ನನ್ನ ಪಾಲಿನ ಅಟ್ಟೆ ಒಂದದೆ. ಅದರಲ್ಲಿ ನನಗಿರಕ್ಕಿಷ್ಟವೇ ಇಲ್ಲ. ಯಾರಾದರೂ ತಕಳೋರಿದ್ರೆ ಕೊಟ್ಟು ಬುಡಬೇಕೂಂತ ಮಾಡಿವ್ನಿ ಆ ಹಣದಲ್ಲಿ ನಿನ್ನ ಹಣ ಕೊಡ್ತೀನಿ' ಎಂದು ಬಟ್ಟವ್ಮನಿಗೆ ಅವನ ಮನೆ ಏನಾದರೇನು ತನಗೆ ಸಾಲ ಸಿಕ್ಕುವ ವಿಷಯ ದಲ್ಲಿ ಭರವಸೆಯಂತೂ ಸಿಕ್ಕಿದಹಾಗಾಯಿತು.

ತನಗೂ ದೊಡ್ಡಣ್ಣನಿಗೂ ಈಚೆಗೆ ಆದ ಸಂಭಾಷಣೆಯನ್ನು ಮಾದೇವ್ರೂ ಬಂದು ಬಟ್ಟವ್ಮನಿಗೆ ವರದಿಮಾಡಿದನು. ಮಾತು ಬಂದಿದ್ದರೆ ತನ್ನ ಅಣ್ಣನನ್ನೇ ಮನೆಯ ಕ್ರಯದ ಬಗ್ಗೆ ವಿಚಾರಿಸುತ್ತಿದ್ದನೆಂದೂ ಹೇಳಿ ದನು ತನ್ನ ಅಣ್ಣಂದಿರ ಬಳಿ ಸಧ್ಯದಲ್ಲಿ ನಗದು ಹಣವಿರುವುದೆಂಬ ಸೂಚನೆಯನ್ನು ಮಾದೇವ್ರೂ ಕೊಟ್ಟಮೇಲೆ ಬಟ್ಟವ್ಮನಿಂದ ಸುಮ್ಮನಿರ ಲಾಗಲಿಲ್ಲ.

ಅವಳೇ ಮಾದೇವ್ರೂ ಮನೆಯನ್ನು ಕೊಟ್ಟು ಬಿಡಬೇಕೆಂದಿರುವ ಸಮಾಚಾರವನ್ನು ಅವನ ಅಣ್ಣಂದಿರಿಗೆ ಮುಟ್ಟಿಸಿದಳು. ಶಂಭು ಗೌಡ್ರು, ಗುರುಕಾರ್ರು ಎಂದು ಒಬ್ಬಿಬ್ಬರ ಹೆಸರನ್ನು ಹೇಳಿದಳು. ಮನೆಯ ಹಿಂದಿನ ಹಿತ್ತಲನ್ನು ಮಾಡಿಕೊಂಡಿದ್ದ ಶಂಭುಗೌಡರ ಹೆಸರಿನಿಂದ ಮಾದೇವ್ರು ಅಣ್ಣಂದಿರಿಗೆ ಹೆದರಿಕೆಯಾಯಿತು. ಅವರು ಬಟ್ಟವ್ಮನನ್ನೇ ರಾಯ ಭಾರಕ್ಕೆ ಬಿಟ್ಟರು. ಅವಳು ಆ ಕೆಲಸವನ್ನು ಅಸಾಧ್ಯವೆಂದು ಹೇಳುತ್ತಾ ಅದರಿಂದ ತನ್ನಂಥ ಒಂಟಿಹೆಂಗಸಿನಲ್ಲಿ ಊರಿನ ಮುಂದಾಳುಗಳ ಹಗೆತನ ಬರುವುದೆಂದು ಗೊಣಗಿದಳು. ಆದರೂ ಆ ವ್ಯಾಪಾರವನ್ನು ಮೂನ್ನೂರು ರೂಪಾಯಿಗೆ ಕುದುರಿಸಿದವಳು ಅವಳೇ.

ಅಲ್ಲಿಗೆ ಮಾದೇವ್ರೂಗೆ ಗುಜ್ಜಗೆರೆಯಲ್ಲಿ ರಕ್ತ ಸಂಬಂಧೀಕರ ಋಣ ವೊಂದು ಜಾತಾ ಮಿಕ್ಕೆಲ್ಲಾ ಋಣಗಳೂ ಹರಿದಂತಾಯಿತು. ಬಟ್ಟವ್ಮ ನಿಗೆ ಕೊಟ್ಟು ಉಳಿದ ಸುಮಾರು ನೂರೈವತ್ತು ರೂಪಾಯಿಗಳೇ ಅವನ ಸರ್ವಸ್ವವಾಗಿತ್ತು. ಅವನ ಮನೆಯಲ್ಲಿದ್ದ ಕೆಲವು ಪೆಟ್ಟಿಗೆ ಪಾತ್ರೆಗಳನ್ನು

ತಂದು ಬಟ್ಟಮ್ಮನ ಮನೆಯಲ್ಲೇ ಹಾಕಲಾಗಿತ್ತು. ಅಲ್ಲಿಂದಾಚೆಗೆ ಮಾದೇವೂಗೆ ಬಟ್ಟಮ್ಮನ ಮನೆಯೇ ಮನೆಯಾಯಿತು. ಅವನಿಗೆ ಈಗ ಬಿಡುಗಡೆಯಾದಂತಾಗಿತ್ತು. ಅವನಿಗೆ ತಮ್ಮಪ್ಪನ ಮನೆಯ ಬಾಗಿಲನ್ನು ದಾಟಿ ಒಳಗೆ ಹೋಗುವುದಕ್ಕೆ ಬಹಳ ಬೇಸರವಾಗಿತ್ತು. ಈಗ ಅದಿಲ್ಲ. ಮನೆ, ಹೊಲ, ಹಣ ಇವೆಲ್ಲ ದೇವರು ಕೊಡಬೇಕಾದ ಪದಾರ್ಥಗಳು. ಮನಸ್ಸು ನೆಮ್ಮದಿಯಾಗಿದ್ದರೆ ಅದೇ ಐಶ್ವರ್ಯವೆನ್ನುತ್ತಿದ್ದನು ಮಾದೇವು.

ಮಾದೇವೂ ಬಟ್ಟಮ್ಮನಿಗೆ ಕೊಟ್ಟದ್ದ ಮಾತು ನೀರವೇರಿದಂತಾಗಿತ್ತು. ಬಟ್ಟಮ್ಮನ ಪಾಲಿನವಾಗ್ದಾನ ಹಾಗೇ ನಿಂತಿತ್ತು. ಮಾದೇವೂವಿನ ಈ ರೀತಿಯ ಒಂಟಿಬಾಳು ಪ್ರಾರಂಭವಾಗಿ ಆಗಲೇ ಎಂಟು ತಿಂಗಳು ತುಂಬುವುದರಲ್ಲಿತ್ತು. ಅವನು ಆ ಬಗ್ಗೆ ಬಟ್ಟಮ್ಮನಲ್ಲಿ ಎಷ್ಟು ವಿಧವಾಗಿ ಮಾತನಾಡುತ್ತಿದ್ದರೂ ಅವಳೂ ಯಾವ ಮಾತನ್ನೂ ತಿಳಿಯದವಳಂತೆ ಸ್ವಲ್ಪ ದಿನ ಸುಮ್ಮನಿದ್ದಳು. ಎಂತಹ ಹುಡುಗಿಯನ್ನಾಗಲಿ ಇಂತಹ ಮನುಷ್ಯನಿಗೆ ಹೇಗೆ ಗಂಟು ಹಾಕುವ ಪ್ರಯತ್ನ ಮಾಡುವುದೆಂದು ಅವಳು ಬಹಳ ಯೋಚನೆ ಮಾಡುತ್ತಿದ್ದಳು. ಇಂತಹ ಸಂಬಂಧಗಳನ್ನು ಕುದುರಿಸಿದರೂ ಸಾರ್ಥಕವೋ ಇಲ್ಲವೋ ಎಂಬ ಅನುಮಾನ ಅವಳಲ್ಲಿ.

ಆದರೆ ಅವನು ಬಿಡಬೇಕಲ್ಲ. ತನ್ನಲ್ಲಿ ಇರುವ ನೂರುರೂಪಾಯಿಗಳು ಖರ್ಚಾಗಿ ಬಿಡುವುದರಲ್ಲಿ ಹೆಣ್ಣನ್ನು ನೋಡಿಬಿಡಬೇಕೆಂದು ಅವನ ಆತುರ. ಪುಟ್ಟತಾಯಿಯಿಂದ ಹಾಳಾದ ತನ್ನ ಮಾನ ಮರ್ಯಾದೆ ಆಸ್ತಿಪಾಸ್ತಿಗಳೆಲ್ಲ ಹೊಸ ಹೆಣ್ಣಿನ ಕಾಲುಗುಣದಿಂದ ಎರಡರಷ್ಟಾಗಿ ಹಿಂದಕ್ಕೆ ಬರುವುದೆಂಬ ಬಲವಾದ ನಂಬಿಕೆ ಅವನಲ್ಲಿತ್ತು. ಗಂಟು ಕರಗುತ್ತಿದಂತೆಲ್ಲಾ ಅವನ ಪೀಡೆ ಬಟ್ಟಮ್ಮನಿಗೆ ಹೆಚ್ಚತೊಡಗಿತು. ಗಾದೆಯಲ್ಲ—ನಿಜವಾಗಿಯೂ ಎಂಟೆನ್ಮ್ಮೆ ಕರೆಯುತ್ತಿದ್ದ ಬಟ್ಟಮ್ಮನಿಗೆ ಮಾದೇವೂ ಜೊತೆಯಲ್ಲಿ ತೆಂಕಳ್ಳಿಯವರೆಗೆ ಹೋಗಿ ಒಂದು ದಿನ ಕಳೆಯುವಷ್ಟು ವಿರಾಮ ಇರಲೇ ಇಲ್ಲ. ಅವನ ನೂರುರೂಪಾಯಿಗಳನ್ನೇ ಹಿಂದಿರುಗಿಸಿ ಬಿಡೋಣವೆನ್ನುವಷ್ಟು ಕೋಪ ಬರುತ್ತಿದ್ದರೂ ತಡೆದುಕೊಂಡಿದ್ದಳು. ತನ್ನ ಮನೆಯ 'ಚಲೂಗೆ' ಯಲ್ಲೇ ಭಾವಿಯಿಂದ ನೀರು ಸೇದಿ ತನ್ನ ಮನೆಯ ದೊಡ್ಡ ತಪ್ಪಲೆಗೇ

ತುಂಬಿಕೊಂಡು ಒಂದೊಂದಾಗಿ ತನ್ನೆಂಟೆಮ್ಮೆಯನ್ನೂ ತೊಳೆಯುತ್ತಿದ್ದ ಮಾದೇವೂವಿನ ಮೇಲೆ ಒಂದೇ ಬಾರಿಗೆ ಕೋಪಿಸಿಕೊಳ್ಳಲು ಮನಸ್ಸೊಪ್ಪುತ್ತಿರಲಿಲ್ಲ.

ಕೊನೆಗೆ ಊರಮನೆಗಳ ಮನೆವಾರ್ತೆಗಳಿಗೆ ತಲೆಹಾಕುತ್ತಿದ್ದ ಹೆಣ್ಣಿಗ ದ್ಯಾವ, ಮಾದೇವೂಗೆ ಜ್ಞಾಪಕ ಬಂದು ಸಮಸ್ಯೆ ಬಗೆಹರಿಯಿತು. ದ್ಯಾವನಿಗೆ ಇದು ತನ್ನ ಕೆಲಸ ಇದು ಇನ್ನೊಬ್ಬರದೆಂಬ ಬೇಧವೇ ಇರಲಿಲ್ಲ. ಅವನಿಗೆ ಕಡಲೇ ಕಾಯಿ, ಟೀ, ಹೊಗೇಸೊಪ್ಪು ಇಷ್ಟನ್ನು ಒದಗಿಸಿಬಿಟ್ಟರೆ ಆ ದಿನದ ಇಪ್ಪತ್ನಾಲ್ಕು ಗಂಟೆಯ ಅವನ ಸೇವೆಯೂ ಒದಗಿಸಿದವರಿಗೆ ಮೀಸಲಾಗುತ್ತಿತ್ತು. ಇದಲ್ಲದೇ ಅವನಿಗೆ ಒಪ್ಪಿಸುವ ಕೆಲಸ ಹೆಂಗಸರು ಮಾಡವಂತಹುದಾದರೆ ಅವನಿಗಿನ್ನೂ ಸೊಗಸು. ಮಾದೇವೂ ಅವನ ಕೈಗೆ ಹನ್ನೆರಡಾಣೆ ಹಾಕಿ ಅವನನ್ನು ತಂದು ಬಟ್ಟಕ್ಕನ ಮನೆಯ ಒಂದು ದಿನದ ಆಡಳಿತಕ್ಕೆ ಬಿಟ್ಟನು. ಹೆಣ್ಣಿಗ ದ್ಯಾವ ಕಳ್ಳನಲ್ಲವೆಂಬುದು ಊರಿಗೇ ತಿಳಿದಿದ್ದ ವಿಷಯವಾದ್ದರಿಂದ ಬಟ್ಟಮ್ಮನೂ ಮಾತನಾಡುವಂತಿರಲಿಲ್ಲ. ದ್ಯಾವ ಎಮ್ಮೆಗಳನ್ನು ನೋಡಿಕೊಂಡು, ಹಾಲನ್ನು ಕರೆದು, ನರಶೀಪುರದ ಹೋಟಲಿನವನಿಗೂ ಊರಿನವರ ಮನೆಗಳಿಗೂ ಹಂಚಿ, ಉಳಿದುದನ್ನು ಹೆಪ್ಪು ಹಾಕಿಡಲು ಒಪ್ಪಿಕೊಂಡನು. ಬಟ್ಟಮ್ಮ, ಮಾದೇವೂ ಒಡನೆ ತೆಂಕಳ್ಳಿಗೆ ಹೊರಡಲೇ ಬೇಕಾಯಿತು.

ದಾರಿಯಲ್ಲಿ ಮಾದೇವೂ ಬಟ್ಟಮ್ಮನಿಂದ ಹೆಣ್ಣಿನ ವಿಷಯಗಳನ್ನು ತಿಳಿಯಲು ಮುಖ್ಯವಾದ ನೂರಾರು ಪ್ರಶ್ನೆಗಳನ್ನು ಹಾಕಿ ಸುದ್ದಿಯನ್ನೆಳೆದು ಕೊಳ್ಳುತ್ತಿದ್ದನು.

ಹೆಣ್ಣಿನ ತಾಯಿ, ಬಟ್ಟಮ್ಮನ ದೂರದ ಸಂಬಂಧಿಯೂ ತೌರೂರಿನವಳೂ ಆದ ಮಾದಮ್ಮನೆಂಬುವವಳು. ಅವಳು ತೆಂಕಳ್ಳಿಗೆ ಮದುವೆಯಾಗಿ ಬಹಳ ಕಷ್ಟಪಟ್ಟಳು. ಅವಳಗಂಡ ಅವಳನ್ನು ಸರಿಯಾಗಿ ಬಾಳಿಸಲಿಲ್ಲ. ಅದರ ಮೇಲಿನ ಹಟಕ್ಕೆ ಅವಳು ಗಂಡನ ಮನೆಯನ್ನು ಬಿಟ್ಟರೂ ತೆಂಕಳ್ಳಿಯಲ್ಲೇ ಇದ್ದುಕೊಂಡು ಕೂಲಿನಾಲಿ ಮಾಡಿ ತನ್ನ ಒಬ್ಬಳೇ ಮಗಳನ್ನು ಸಾಕಿದ್ದಳು. ಅಂತಹ ಹೆಂಗಸರನ್ನು ಕಂಡರೆ ಎಲ್ಲ

ರಿಗೂ ಹುಡುಗಾಟ. ಅವಳ ಹುಡುಗಿಗೆ ಸುಮಾರು ಹದಿನೈದು ವರ್ಷವಿರಬಹುದು. ಸ್ವಲ್ಪ ಕಪ್ಪು. ನೋಡಲು ಬಹಳ ಚೆನ್ನಾಗಿದ್ದಾಳೆ. ಹೆಸರು ಗೌರಿ. ಅವಳ ತಂದೆ ಈಗಲೂ ಅದೇ ಊರಿನಲ್ಲೇ ಇದ್ದಾನೆ. ಆದರೆ ಇವರವರಿಗೆ ಸಂಬಂಧವಿಲ್ಲ. ಹುಡುಗಿಯ ತಾಯಿ ತನ್ನ ಸ್ವಂತ ಕಷ್ಟದಿಂದ ಅಷ್ಟಗಲ ಹೊಲ ಮನೆಗಳನ್ನು ಮಾಡಿಕೊಂಡಿದ್ದಾಳೆ. ಯಾರು ಏನು ಬೇಕಾದರೂ ಅನ್ನಲಿ ಬಟ್ಟೆಮ್ಮನ ಮನೆತನ 'ಸೇಸ್ಟ'ವಾದದ್ದು.

ಇಷ್ಟು ಬಟ್ಟೆಮ್ಮನಿಂದ ತಿಳಿದು ಬಂದ ವಿಷಯ. ಯಾರು ಏನು ಬೇಕಾದರೂ ಅನ್ನಲಿ ಮನೆತನ 'ಸೇಸ್ಟ'ವಾದದ್ದು ಎನ್ನುವ ಮಾತನ್ನು ಬಟ್ಟೆಮ್ಮ ಅದೆಷ್ಟೋ ಬಾರಿ ಅಂದಿದ್ದಳು. ತೆಂಕಳ್ಳಿಯ ಬೂರುಗದ ಕಟ್ಟೆಯ ಹತ್ತಿರವೂ ಕೊನೆಯದಾಗಿ ಮತ್ತೊಮ್ಮೆ ಹೇಳಿದಳು.

ಊರೊಳಕ್ಕೆ ಪ್ರವೇಶವಾಯಿತು. ದಾರಿಕಾಣದ ಮಾದೇವೂ ಬಟ್ಟೆಮ್ಮನ ಹಿಂದೆ ನಡೆದ. ದಾರಿಯಲ್ಲಿ ಅವನಿಗೆ ಸಿಕ್ಕಿದ ಮುಖಗಳಾವುವೂ ಅವನಿಗೆ ಗುರುತು ಸಿಕ್ಕದವು. ಇಲ್ಲ—ಒಂದೇ ಒಂದು ವ್ಯಕ್ತಿಯ ಗುರುತು ಸಿಕ್ಕಿತು ತೆಂಕಳ್ಳಿಯ ಪಂಡಿತಪ್ಪ! ಆತನನ್ನು ಮಾದೇವು ತನ್ನ ಮದುವೆಯಲ್ಲಿ ಕಿರೀಕಾಟೆಯಲ್ಲಿ ನೋಡಿದ್ದ ಜ್ಞಾಪಕ ಬಂದಿತು. ಬಹುಶಃ ಅದು ಪಂಡಿತಪ್ಪನ ಮನೆಯೇ ಇರಬೇಕು. ಜಗುಲಿಯ ಮೇಲೆ ಇನ್ನೊಬ್ಬನೊಡನೆ ಮಾತನಾಡುತ್ತ ಕುಳಿತಿದ್ದಂತೆ ಮಾದೇವೂವನ್ನು ಕಂಡನು. ಅವನಿಗೂ ಇವನ ಗುರುತುಸಿಕ್ಕಿರಬೇಕು. ಗೌರವವಾಗಿ ಮಾದೇವೂವನ್ನು ಕಂಡು "ಬಂದ್ರೇಳಿ?" ಎಂದು ಕೇಳಿದನು. ಮಾದೇವೂ ಕೂಡ "ಊ ಕಣಿಸ್ವಾಮ್ಯೋ" ಎಂದು ತಲೆ ಕೆರೆದು ಮುಂದಕ್ಕೆ ಹೋದನು. ಪಂಡಿತಪ್ಪನ ಜೊತೆಯಲ್ಲಿದ್ದವನನ್ನು ಕಂಡು ಬಟ್ಟೆಮ್ಮ 'ಬಿರಬಿರನೆ' ಹೊರಟುಹೋಗಿದ್ದಳು. ಆಗಲೇ ಅವಳಿಗೆ ಹೆಣ್ಣಿನ ಮನೆ ಸಿಕ್ಕಿಬಿಟ್ಟಿತ್ತು.

ಹೆಣ್ಣಿನ ಮನೆಯ ಎದುರಿನ ಮನೆಯ ಜಗುಲಿಯ ಮೇಲೆ ನಾಲ್ಕಾರು ಜನರು ಕುಳಿತಿದ್ದರು. ಮಾದೇವೂ ಹೆಣ್ಣಿನ ಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ಅವರಲ್ಲಿ ಕೆಲವರು ನಕ್ಕಂತೆಯೂ ಮತ್ತೆ ಕೆಲವರು ಅದನ್ನು ತಡೆದಂತೆಯೂ ಮಾದೇವೂಗೆ ಭಾಸವಾಯಿತು. ಅದನ್ನು ಲೆಕ್ಕಿಸದೇ

ಒಳಕ್ಕೆ ಹೊರಟುಹೋದನು. ಹೆಣ್ಣಿನ ಮನೆಯೊಳಗೆ ಬೀಡೀ ಹತ್ತಿಸಿ ಕುಳಿತಿದ್ದ ಯಾರೋ ಗಂಡಸು ಮಾದೇವು ಒಳ ಸೇರುತ್ತಿದ್ದಂತೆಯೇ ಎದ್ದು ಹೊರಬಂದನು.

ರಾತ್ರಿ ಹೊಸನೆಂಟರಿಗೆ ಬಿಸಿಯೂಟವಾಗುವುದರಲ್ಲಿ ಸಾಕಷ್ಟು ಗೌರಿಯ ಮೆರವಣಿಗೆ ನಡೆದಿತ್ತು. ಗೌರಿ ಎತ್ತರವಾಗಿ ದಪ್ಪವಾಗಿ 'ಮೆತ್ತಿ ಹಾಕಿದಂತೆ' ಇದ್ದ ಹದಿನಾರು ಹದಿನೇಳು ವರ್ಷದ ಹುಡುಗಿ. ಅವಳ ಓರೆ ನೋಟದ ಬೆಡಗನ್ನು ನೋಡಿ ಮಾದೇವೂಗೆ ಅರೆಕ್ಷಣ ಅವಳೊಡನೆ ತನ್ನ ಮದುವೆಯಾಗಿಯೇ ಹೋಗಿದೆಯೋ ಎನಿಸುತ್ತಿತ್ತು.

ಕೋಣೆಯಲ್ಲಿ ಬಟ್ಟಮ್ಮ ಮಾದಮ್ಮ ಇಬ್ಬರೂ ಬಾಲ್ಯದ ಮಾತುಗಳನ್ನಾಡಿಕೊಳ್ಳುತ್ತಾ ಕುಳಿತಿದ್ದಾಗ ಮಾದೇವೂ ಕುಳಿತಿದ್ದ ಹಜಾರದಲ್ಲಿ ಆರುಬಾರಿ ಗೌರಿಯ ಓಡಾಟವಾಗಿತ್ತು. ಅವನು ಬಾ ಎಂದು ಕರೆದಿದ್ದರೆ ನಾಚಿಕೊಂಡು ಬಂದು ಹತ್ತಿರ ಕುಳಿತುಕೊಳ್ಳುತ್ತಿದ್ದಳೋ ಏನೋ. ಅಂತಹ ಮನಸ್ಸಾಗುವುದಕ್ಕೆ ಮುಂಚೆ ಯಾರೋ ಬಂದು ಮಾದೇವೂನ ಹೆಸರು ಹಿಡಿದು ಕೂಗಿದರು. ಅವನು ಎದ್ದು ಹೊರಗೆ ಬಂದ. ಬಂದಿದ್ದವನು ತನ್ನ ಅಪ್ಪನ ಭಾವನ ಮನೆಯವನೆಂದು ಮಾದೇವ ಊಹಿಸಿದ್ದ. ಆದರೆ ಮರಿದೇವರ ಮನೆಯ ಕಡೆಯವನಲ್ಲ. ಪಂಡಿತಪ್ಪನ ಕಡೆಯವನು.

ಪಂಡಿತಪ್ಪನು ಮಾದೇವೂಅನ್ನು ಬರಮಾಡಿಕೊಂಡನು. ಜಗುಲಿಯಮೇಲೆ ಕುಳ್ಳಿರಿಸಿಕೊಂಡು ಬಿಸಿಬಿಸಿಯಾದ ಒಂದು ಲೋಟ ಟೀ ಕೊಡಿಸಿದನು. ಎಲೆ ಅಡಿಕೆಯ ತಟ್ಟೆಯನ್ನು ಪಂಡಿತಪ್ಪನ ಮಗಳು ತಂದಿಟ್ಟು ಹೋದಳು. ಮಾದೇವೂ ಆ ಹುಡುಗಿಯ ಹೆಸರನ್ನು ಕೇಳಿದನು. ಅದು ನಾಚಿಕೊಂಡು ಹೇಳದೇ ಮನೆಯೊಳಕ್ಕೆ ಓಡಿಯೇ ಬಿಟ್ಟಿತು. ಅವಳಿಗೆ ಸುಮಾರು ಹತ್ತುಹನ್ನೊಂದು ವರ್ಷವಿದ್ದಿರಬಹುದು. ಆ ಮಸಿ ಕಟ್ಟಿದ್ದ ಲಾಂದ್ರದ ಬೆಳಕಿನಲ್ಲಿಯೇ ಆ ಹುಡುಗಿ ಅವನ ಕಣ್ಣಿಗೆ ಬಹಳ ಚೆಲುವೆಯಾಗಿ ಕಂಡಳು. ಪಂಡಿತಪ್ಪನೇ ತಮ್ಮ ಮಗಳ ಹೆಸರು ಚಂದ್ರಮ್ಮ ಎಂದು ಹೇಳಿದರು. ಮಾದೇವೂಗೆ ಅದೇನೋ ಆ ಹುಡುಗಿಯ ಮುಖದ ಕಳೆ ಬಹಳ ದಿನಗಳವರೆಗೂ 'ನೆಪ್ಪಿ'ನಲ್ಲಿರುವಂತೆ ತೋರಿತು.

ಅವನು ಅದೇ ಗುಂಗಿನಲ್ಲಿರುವಾಗ ಪಂಡಿತಪ್ಪ ಕೆಮ್ಮಿ ಮಾತನಾಡಲು ಗಂಟಲನ್ನು ಸರಿಮಾಡಿಕೊಂಡಿದ್ದು ತಿಳಿಯಿತು. ಅವನನ್ನು ಪಂಡಿತಪ್ಪ ಕರೆಸಿದ್ದ ಕಾರಣವೇ ಗೊತ್ತಿಲ್ಲದಿದ್ದುದರಿಂದ ಮಾದೇವೂ ಅವರ ಬಾಯನ್ನೇ ನೋಡುತ್ತ ಕುಳಿತನು. ಪಂಡಿತಪ್ಪ ಮೊದಲು ಮಾಡಿದನು.

" ನಾಯೇನೋ ಒಂದು ವಿಷಯ ಕೇಳಿದೆ. ಅದು ಸಟಿಯೋ ದಿಟವೋ ಅಂತ ತಿಳ್ಕಳವೇ ಅಂತ ನಿಮ್ಮನ್ನ ಕರೀಸ್ದೆ ಮಾದೇವಪ್ಪ ! ನೀವು ಮಾದಮ್ಮನ ಹುಡುಗಿ ಗೌರೀನೇನೋ ನೋಡಕ್ಕೆ ಬಂದಿದೀರಂತೆ ನಿಜವಾ ?"

" ಐ ಅಂಗೇನಿಲ್ಲ........ಆದ್ರೂ ಏನ್ಮಾಡ್ಲೀ ಸುತ್ತಾಮುತ್ತ್ನೋರ ಬಲ ವಂತಕ್ಕೆ ?"

"ಛೆ ! ಛೆ !! ಅದರಲ್ಲಿ ತಪ್ಪೇನೂ ಇಲ್ಲ. ಹುಡುಗೀ ಬಡವರದಾದ್ರೂ ರೂಪು ಪರವಾಗಿಲ್ಲ. ಆದರೆ ಸ್ವಲ್ಪ ನಯ ಕಡಿಮೆ. ಹೆಂಗಸರ ಸಂಸಾರ, ಪರವಾಗಿಲ್ಲ, ಆಗಬಹುದು. ನೂರುಸುಳ್ಳು ಹೇಳಿ ಒಂದುಮದುವೇ ಮಾಡ್ಸು ಅಂತ. ನೀವೇನೂ ತಿಳ್ಕಳಲ್ಲ ಅಂದ್ರೆ ಒಂದು ಮಾತ್ಹೇಳ್ತೀನಿ "

" ಏಳಿ ಪರವಿಲ್ಲ ಏಳಿ "

" ನಿಮ್ಮ ಮೊದಲನೇ ಹೆಂಡತೀಗೆ ಇದು ಯಾವ ಲೆಕ್ಕದಲ್ಲೂ ತಗಲ ದಿಲ್ಲ."

" ಅವಳ ಮಾತಾಡಬೇಡಿ ಸ್ವಾಮ್ಯೋ........ಇದೋ ನಾನು ಎದ್ದೆ."

" ಬೇಡಿ ಬೇಡಿ ಕೂತ್ಕಳ್ಳಿ....ಇನ್ನೊಂದು ಮಾತು. ನೀವು ನಮ್ಮೂರಿಗೆ ಬಂದಾಗ ನನ್ನ ಜೊತೇಲಿ ಒಬ್ಬ ಕೂತಿದ್ನಲ್ಲ ಅವನ್ನ ನೋಡಿದ್ರ್ಯಾ "

"ನೋಡ್ದಿ—ಅದೇ ಆ ಕರೀಕಂಬಳಿ........"

" ಹೂ........ಅವನೇ. ಅವನ್ಯಾರು ಅಂತೀರಿ ? ಆ ಮಾದಮ್ಮನ ಗಂಡ. ಮದುವೆಯಾದಗಂಡ. ಆದರೆ ಗೌರಮ್ಮ ಅವನ ಮಗಳಲ್ಲ."

" ಹಾ! ನಿಜವಾ ! "

"ಅದೂ ಇರ್ಲಿ ಅದು ಹುಡುಗೀ ತಪ್ಪೇನೂ ಅಲ್ಲ! ಆದರೆ ಅದರಲ್ಲಿ ಒಂದು ಸೂಕ್ಷ್ಮ. ಮಾದಮ್ಮನ ಹಟ ಏನಿತ್ತು ಗೊತ್ತಾ ? ತನ್ನ ಮದುವೆಯಾದ ಗಂಡನೆದುರಿಗೇ ಇಂಥಾ ಬಾಳು ಬಾಳಬೇಕೂಂತ"

"ಸರಿ....ಅದಕ್ಕೆ...."

"ಇನ್ನೇನೂ ಇಲ್ಲ ಮಾದೇವಪ್ಪ ಸಾಳೆ....ನಿಮ್ಮ ಪುಟ್ಟತಾಯೀನೂ ನಿಮ್ಮ ಕಣ್ಣೆದುರ್ಗೆ ಹಿಂಗೇ ಮಾಡಿದ್ರೆ ನಿಮುಗ್ಹೆಂಗಿರ್ತದೆ ?"

"ಅವಳನ್ನ ಜೀವಸಹಿತ ಬುಟ್ಟೇನಾ ?"

"ಅವಳ ಜೊತೆಗಾರ ನಿಮಗಿಂತ ಒರಟಾಳಾಗಿದ್ರೆ !"

ಇದುವರೆಗೂ ಮಾದೇವೂಗೆ ಆ ಚಿತ್ರ ಸಿಕ್ಕಿರಲಿಲ್ಲ. ಅದರೂ ಅವನು ಅಲ್ಲಿರಲಾರದೆ ಎದ್ದುನಿಂತ. ಪಂಡಿತಪ್ಪ ಅವಸರ ಅವಸರವಾಗಿ ಹೇಳಿದರು "ಮಾದೇವಪ್ಪ, ದುಡುಕಿಬುಡಬೇಡಿ. ನಮ್ಮೂರಲ್ಲೇ ನಿಮ್ಮ ನೆಂಟರವ್ರೆ ಅವರ್ನೆಲ್ಲಾ ಸರಿಯಾಗಿ ಕೇಳ್ಕಂಡು ಮುಂದಲ ಕೆಲಸಾಮಾಡಿ. ಅಂಗಲ್ದೇ ಪುಟ್ಟತಾಯೀ ವಿಸಯಾನೇ ಆಲೋಚ್ನೆ ಮಾಡೋ ಅಂಗಿದ್ರೆ ನನ್ನ ಹತ್ರಕ್ಕೆ ಪುನ ಬನ್ನಿ. ಸರಿಮಾಡವೆ."

ಮಾದೇವೂ ಜುಟ್ಟುಕೊಡವಿ ಗಂಟುಹಾಕಿಕೊಂಡು 'ನಾನೊಯ್ತೀನಿ ಸ್ವಾಮಿ' ಎಂದುಬಿಟ್ಟು ಮಾದಮ್ಮನ ಮನೆಯಕಡೆ ನಡೆದುಬಿಟ್ಟನು. ಇದೇ ಮಾತುಗಳನ್ನು ಅವನ ಊರಿನಲ್ಲೇ ಯಾರಾದರೂ ಅವನೆದುರಿನಲ್ಲಿ ಆಡಿದ್ದರೆ ರಾದ್ಧಾಂತಮಾಡದೇ ಬಿಡುತ್ತಿರಲಿಲ್ಲ. ಪರಸ್ಥಳ, ವಿಧಿಯಿರಲಿಲ್ಲ 'ಪುಟ್ಟತಾಯೀ ಯೋಚ್ನೇನೇ ಮಾಡೋಅಂಗಿದ್ರೆ !—ಹೇ ! ಎಂತಾ ಆಗ್ದಹೋಗ್ದ ಮಾತು. ಗೌರಿ....ಮಾದಮ್ಮನ ಕತೆ ! ಹೊಟ್ಟೇಕಿಚ್ಚಿನ ಕತೆಯೊ ........ಇಲ್ಲ ನನ್ನಂತಾ ಗತಿ ಇಲ್ದೇ ಇರೋನಿಗೆ ಸರಿ ಅಂತಾ ಬಟ್ಟಮ್ಮನೇ ಗೌರೀನ ಹುಡುಕಿ ಹೇಳಿದ್ದಳೋ !.... ನಾನು ಹೆಣ್ಣಿನಟ್ಟ ನುಗ್ಗಿದ್ದಂಗೆ ಅದ್ಯಾಕೆ ಆ ಎದುರುಜಗಲೀಲಿದ್ದೋರು ನಕ್ಕರು. ಪಂಡತಪ್ಪ ಯಾಕೆ ಸುಳ್ಳೇಳ್ತನೆ ? ಆ್ಞ........ನನ್ನೆದರ್ಗೆ ಪುಟ್ಟತಾಯಿ ಇನ್ನೊಬ್ಬರ ಜೊತೇಲಿ ! ........ ಪಾಪಪಾಪ !........ ಆದ್ರೂಯಾರಗ್ಗೊತ್ತು?

ರಾತ್ರಿ ಬಹಳಹೊತ್ತು ಮಾದೇವೂಗೆ ಇದೇ ಯೋಚನೆಯಲ್ಲಿಯೇ ಕಳೆಯಿತು. ಅವನು ಮಲಗಿದ್ದುದು ಬೀದಿಯ ಬಾಗಿಲಿನ ಹತ್ತಿರದ ನಡುವೆ ಯಲ್ಲಿ. ಹೆಂಗಸರೆಲ್ಲ, ಅಡಿಗೆಯಮನೆಯ ಮುಂದಿನ ತಡಿಕೆಕಟ್ಟಿದ ಹಜಾರ ದಲ್ಲಿ. ಮಾದೇವೂ ಪಂಡಿತಪ್ಪನ ಯೋಚನೆ ಮಾಡುತ್ತಿದ್ದ .ಹಾಗೆಯೇ ಮಧ್ಯೆಮಧ್ಯೆ ಗೌರಿ ಕೆಮ್ಮುತ್ತಿದ್ದುದೂ ಕೇಳಿಸುತ್ತಿತ್ತು. ಒಂದು ಬಾರಿ ಮಾದೇವೂ ಕೂಡ ಕೆಮ್ಮಿನೋಡಿದ. ಅದಕ್ಕೂ ಕೆಮ್ಮಿನಿಂದಲೇ ಉತ್ತರ ಬಂದು ಅದು ನಿಜವಾದ ಕೆಮ್ಮಲ್ಲವೆಂದು ತಿಳಿದುಬಂತು. ಅವನಿಗೆ ಮೈ ಬಿಸಿಯಾಗಿಹೋಯಿತು. ಮೈಯಿನ ಬಿಸಿ ಹೆಚ್ಚುತ್ತಿದ್ದಂತೆ, ಅದೇಕೋ ಛಳಿಯೂ ಮೊದಲಾಯಿತು. ಅಲ್ಲಿಗೆ ಗೌರಿಯ ಸಂಬಂಧ ಮುಗಿದಂತಾ ಯಿತು. ಇವರ ಸಹವಾಸ ಬೇಡವೆನ್ನಿಸಿತವನಿಗೆ- ಬೆಳಿಗ್ಗೆ ಉಪಚಾರ ವಾಗಿಯೇ ಮಾತನಾಡಿ ಮಾದಮ್ಮನ ಮನೆಯಿಂದ ಪಾರಾದನು.

ಆದಿನ ರಾತ್ರಿ ಕಾಣಿಸಿಕೊಂಡಿದ್ದ ಅವನಮೈಯ್ಯಿನಬಿಸಿ ಏಕೋ ಆರಿಯೇ ಇರಲಿಲ್ಲ. ಮಾದೇವೂಗೆ ಗುಜ್ಜಗೆರೆ ತಲುಪುವವರೆಗೆ ಬಹಳ ಸುಸ್ತಾಗಿ ಹೋಯಿತು. ಬಟ್ಟಮ್ಮನ ಮನೆಯೊಳಗೆ ಪಟ್ಟಾಗಿ ಜಾಡಿಹೊದ್ದು ಮಲ ಗಿಯೇ ಬಿಡಬೇಕಾಯಿತು. ಸಾಯಂಕಾಲದ ಹೊತ್ತಿಗೆ ಮೈಬೆವರಿತು. ಊಟ ಸೇರಿರಲಿಲ್ಲ. ಅವನಿಗೆ ಆಗಿದ್ದುದರಲ್ಲಿ ಒಂದು ಮುದ್ದೆ ' ಹಿಟ್ಟೆಕ್ಕ'ಲು ಬಟ್ಟಮ್ಮ ಸಿದ್ಧವಾಗಿದ್ದಳೇ ಹೊರತು, ಅವನಿಗೋಸ್ಕರವೆಂದು ಗಂಜೀ, ಕಾಫಿ ಕಾಯಿಸಿಕೊಡುವುದು ಅವಳಿಗೆ ಬೇಕಿರಲಿಲ್ಲ.

ದಿನಬಿಟ್ಟುದಿನ ಜ್ವರ ಛಳಿ ಬರುವುದಕ್ಕಾರಂಭವಾದಮೇಲೆ ಅವನಲ್ಲಿ ಬೇಜಾರುಬಂದು ಬಟ್ಟಮ್ಮ ಅವನ ಆರೋಗ್ಯವನ್ನು ಮಲ್ಲಪ್ಪನ ಮನೆಯವ ರಿಗೆ ತಿಳಿಸುವುದಾಗಿ ಹೇಳಿದಳು. ಅದು ಮಾದೇವೂಗೆ ಇಷ್ಟವಿರಲಿಲ್ಲ. ಆ ಮಾತಿನಿಂದ ಬಟ್ಟಮ್ಮನಿಗೆ ತಾನು ಅವಳ ಮನೆಯಲ್ಲಿರುವುದು ಇಷ್ಟವಿಲ್ಲ ವೆಂಬುವುದು ಅವನಿಗೆ ತಿಳಿದಂತಾಗಿತ್ತು. ಅಂದಿನಿಂದ ಅವನು ತನ್ನ ಹೆಚ್ಚು ಹೊತ್ತನ್ನು ಚಾವಡಿಯಲ್ಲಿ ಮಲಗಿ ಕಳೆಯುತ್ತಿದ್ದನು. ಹೆಣ್ಣಿಗ ದ್ಯಾವನದೇ ಅವನಿಗೆ ಶುಶ್ರೂಷೆ.

ಮಾದೇವೂ ಬಳಿಯಿದ್ದ ದುಡ್ಡು ಕೇವಲ ಎಪ್ಪತ್ತು ರೂಪಾಯಿಗಳು. ಅದು ದಿನಕ್ಕೆ ಎಂಟು ಆಣೆ, ಒಂದು ರೂಪಾಯಿಗಳಂತೆ ಕರಗತೊಡಗಿದ್ದಂತೆ ಅವನ ಮೈಬಲ ಕುಗ್ಗುತ್ತಿದ್ದಂತೆ ತೋರಿತು. ಹೇಳುವವರು ಕೇಳುವವ ರಿಲ್ಲದೇ ಚಾವಡಿಯಲ್ಲಿ ಜ್ವರದಿಂದ ಕಾಯುತ್ತಾ ಬಿದ್ದಿರುವಾಗ ಮಾದೇವೂಗೆ ಯೋಚನೆ ಬರುತ್ತಿತ್ತು. ಪಂಡಿತಪ್ಪನ ಮಾತುಗಳು ಮತ್ತೆಮತ್ತೆ ನೆನಪಿಗೆ ಬರುತ್ತಿತ್ತು. ದಿನೇದಿನೇ ಸವೆದುಹೋಗುತ್ತಿದ್ದ ದುಡ್ಡಿನ ಗಂಟು ಅವನನ್ನು ಎಚ್ಚರಿಸುತ್ತಿತ್ತು. ಪುಟ್ಟತಾಯಿಯು ಮನೆಬಿಟ್ಟು ಹೋದುದೇಕೆ? ಎಂಬ ಪ್ರಶ್ನೆಗೆ ಉತ್ತರವನ್ನು ಕೊಡುತ್ತಿತ್ತು. ಜ್ವರವು ಹಿಂಸಿಸುತ್ತಿತ್ತು. ಪಂಡಿತಪ್ಪ ಆಗಾಗ್ಗೆ ಅವನ ಮನಸ್ಸಿಗೆ ಬಂದು “ ಪುಟ್ಟತಾಯೀ ವಿಸಯಾನೆ ಆಲೋಚ್ನೆ ಮಾಡೋಹಂಗಿದ್ರೆ ನನ್ನ ಹತ್ರಕ್ಕೇ ಪುನಾ ಬನ್ನಿ, ಸರಿಮಾಡವೆ ” ಅಂದುಅಂದು ಹೋಗುತ್ತಿದ್ದನು. ಮಾದೇವೂ ಸ್ವಾಭಿಮಾನದ ಮನುಷ್ಯ.

ಇಲ್ಲದಿದ್ದರೆ ಅವನ ಆ ಅನಾರೋಗ್ಯ ಪರಿಸ್ಥಿತಿಯಲ್ಲಿ ನೇರವಾಗಿ ಮನೆಗೆ ಹೋಗಿದ್ದರೆ ಅಣ್ಣ ಅತ್ತಿಗೆಯರು ಓಡಾಡಿಕೊಂಡು ಮಾಡುತ್ತಿದ್ದ ರೆಂಬುದು ಅವನಿಗೂ ಗೊತ್ತಿತ್ತು. ಹಾಗೆ ಮಾಡಬಹುದಾಗಿತ್ತು. ಅವನು ಎಂದಿಗೂ ಅದಕ್ಕೆ ಮನಸ್ಸುಮಾಡುತ್ತಿರಲಿಲ್ಲ. ಬೇಡ—ಪುಟ್ಟತಾಯನ್ನೇ ಪುನಃ ಕರೆಚರೆ ಬರುತ್ತಾಳೋ ಇಲ್ಲವೋ ಎಂಬ ಸಂಶಯ. ತಾನೇ ಹೋಗಿ ಕರೆಯುವುದೆಂದರೆ ಎಂತಹ ಅವಮಾನದ ವಿಷಯ. ಅಥವಾ ಬಂದರೂ ಕರೆದುತರುವುದೆಲ್ಲಿಗೆ ? ಹೇಗೋ ಮಾಡಿದರಾಯಿತು. ಒಬ್ಬನೇ ಹೋಗು ವುದು ಹೇಗೆ ? ಪುಟ್ಟತಾಯಿಯನ್ನು ಕರೆತರುವುದೇ ಸರಿಯೋ ?

ಪಂಡಿತಪ್ಪ ಮನಸ್ಸಿಗೆ ಬಂದ. “ ನನ್ನ ಹತ್ತಿರಕ್ಕೆ ಬನ್ನಿ ; ಸರಿ ಮಾಡವೇ ” ಅಂದ. ಆರು ದಿನಗಳ ಯೋಚನೆಯನಂತರ ಮಾದೇವೂ ಒಂದು ಬೆಳಿಗ್ಗೆ ಎದ್ದು ನೇರವಾಗಿ ತೆಂಕಳ್ಳಿಗೆ ನಡೆದ.

“ ಆವತ್ತಿಗೆ ಈವತ್ತಿಗೆ ಶಾನೆ ಇಳಿದೋಗಿದೀರಿ ಮಾದೇವಪ್ಪ. ಯಾಕೆ ಹುಸಾರು ತಪ್ಪೋಗಿತ್ತೇನು ? ನೀವು ಯಾವತ್ತಾದರೂ ಒಂದು ಜಿನ ಬತ್ತೀರಿ ಅಂತ ನನಗೆ ಗೊತ್ತಿತ್ತು. ಆದರೆ ಇಸ್ಟುಬೇಗ ಬತ್ತರೆ ಅಂತಿರ್ನಿಲ್ಲ ” ಎಂದನು ಪಂಡಿತಪ್ಪ.

"ಮೂರರ ಚಳಿ ಬಂದು ಬಾಳ ಇಂಸೆ ಮಾಡ್ಬುಡ್ತುಕಣಿ ಸ್ವಾಮಿ" ಎಂದ ಮಾದೇವೂ.

"ಓ ಗೊತ್ತಾಯ್ತು. ಅದರಿಂದಲೇ ನೀವು ಇಷ್ಟುಬೇಗ ಬಂದದ್ದು. ಇನ್ನೂ ಬೇಗ ಬಂದಿದ್ರೆ ಕೈಗೆ ಔಷಧಿ ಕಟ್ಟಿ ಒಂದೇ ದಿನದಲ್ಲಿ ಸರಿಮಾಡಿ ಬುಡ್ತಿದ್ನಲ್ಲ ನಾನು!" ಎಂದು ಪಂಡಿತಪ್ಪ ತನ್ನ ಪೌರುಷವನ್ನು ಹೇಳಿ ಕೊಂಡನು. ಹಾಗೂ ಆದಿನ ಮಾದೇವೂಗೆ ಯಾವುದೋ ಒಂದು ಭಸ್ಮ ಕೊಟ್ಟು ನೀರು ಕುಡಿಸಿದನು.

ಅದೇ ದಿನ ರಾತ್ರಿ ಮಾದೇವೂ ತಾನು ಬಂದಿದ್ದ ಉದ್ದೇಶ ಹೇಳಿ, ತನ್ನ ಜೊತೆಯಲ್ಲಿ ಪಂಡಿತಪ್ಪನನ್ನೂ ಕಿರೀಕಾಟಿಗೆ ಕರೆದನು. ಪಂಡಿತಪ್ಪ ನಕ್ಕು ಹೇಳಿದನು "ಸಧ್ಯ ಆ ಹುಡುಗೀನ ಕರೀಸ್ಕಳಕ್ಕೆ ಒಪ್ಪಿದ್ರಲ್ಲ, ಅದೇ ದೊಡ್ಡದು ಮಾದೇವಪ್ಪ. ಇನ್ನುಳಿದ ಕೆಲಸಾನೆಲ್ಲ ನನಗೆ ಬುಡಿ, ಅವರಾಗೇ ನೀವು ಏಳಿದ ಕಡೇಗೆ ಕರ್ಕಂಡು ಬಂದು ಬುಡೋ ಅಂಗೆ ಮಾಡ್ತೀನಿ" ಎಂದರು. ಮಾದೇವೂಗೆ ಎದ್ದು ಕುಣಿದುಬಿಡಬೇಕೆನ್ನಿಸುವಷ್ಟು ಸಂತೋಷ ವಾಯಿತು. ಪಂಡಿತಪ್ಪ ಮತ್ತೆ ಗಂಭೀರವಾಗಿ ಹೇಳಿದರು "ಆದರೆ........ ಎಲ್ಲೀಗೆ ಕರೀಸ್ಕತೀರಿ ಮಾದೇವಪ್ಪ?"

ಮಾದೇವೂ ತಲೆ ಕೆರೆದುಕೊಂಡನು. ಮೌನವಾಗಿ ಒಂದಷ್ಟುಹೊತ್ತು ಯೋಚಿಸಿದನು. "ಎಲ್ಲಿಗೆ? ಎಲ್ಲಿಗೆ?" ಕೊನೆಗೆ ಹೇಳಿದನು. "ಮೊದಲು ಅವರ ಮನಸ್ಸು ಎಂಗದೆ ನನಗೊಂದೊಸಿ ತಿಳಿದೇಳಿ ಪಂಡಿತರೆ. ನಾನು ಎಲ್ಲೀಗೇ ಅನ್ನದ್ನ ಒಂದು ವಾರದೊಳಗೆ ನಿಮಗೆ ತಿಳಿದ್ಹೇಳ್ತೀನಿ" ಎಂದನು. ಆ ಸಮಸ್ಯೆಯನ್ನೂ ಪಂಡಿತಪ್ಪನೇ ಬಿಡಿಸಿಕೊಟ್ಟನು. "ಒಂದ್ಕೆಲ್ಸ ಮಾಡಿ. ನಾನು ಕಿರೀಕಾಟೀಗೆ ಹೋಗಿ ನಿಮ್ಮನ್ನ ಅವರು ಅಲ್ಲೀಗೇ ಕರೀಸ್ಕಳೋ ಅಂಗೆ ಏರ್ಪಾಡು ಮಾಡ್ತೀನಿ. ನೀವು ಬಹಳ ಬಲವಂತ ಮಾಡಿದಮೇಲೆ ಅಲ್ಲೀಗೆ ಬಂದಹಾಗೆ ಬರಬೇಕು. ಅಂಗಂತ ನೀವು ಕಿರೀಕಾಟೀಲೇ ಉಳ್ಕಂಡು ಬಿಡೋ ಮನಸ್ಮಾಡ್ಬಾರ್ದು. ಗುಜ್ಜಗೇರೇಲಿ ಏನಾದರೂ ಒಂದು ದಾರಿ ಹಿಡಿದು ಸಂಸಾರ ಮಾಡಿ ತೋರಸ್ಬೇಕು. ಅದೇ ನಿಮ್ಮ ಹಟಕ್ಕೆ ತಕ್ಕ ಕೆಲ್ಸ."

ಮಾದೇವೂಗೆ ಪಂಡಿತಪ್ಪ ದೇವರಂತೆ ಕಂಡನು. ಅವನ ಬಾಯಿಂದ ಬರುತ್ತಿದ್ದ ಮಾತೆಲ್ಲವೂ ವೇದವಾಕ್ಯಗಳಾಗಿತ್ತು. ಹಾಗೇ ಗುಜ್ಜಗೆರೆಯಲ್ಲಿ ತನಗೆ ಯಾವುದೋ ಒಂದು ದಾರಿ ತೆರೆದಿದೆ ಎಂದು ಅವನಿಗೆ ಭರವಸೆಯೂ ಬರುತ್ತಿತ್ತು. ಮೊದಲು ಹೆಂಡತಿ, ಆಮೇಲೆ ಮನೆ, ಆಮೇಲೆ ಉದ್ಯೋಗ ಎಂದುಕೊಂಡನು.

ಮಾದೇವೂ ಗುಜ್ಜಗೆರೆಗೆ ಹೊರಟ ದಿನವೇ ಪಂಡಿತಪ್ಪ ಕಿರೀಕಾಟೆಗೆ ಹೊರಟನು.

ಪಂಡಿತಪ್ಪ ಸುತ್ತುಮುತ್ತಿನ ಎಲ್ಲಾ ಊರುಗಳಿಗೂ ಸಾಮಾನ್ಯವಾಗಿ ಹೋಗಿಬರುತ್ತಿದ್ದ ಆಸಾಮಿ. ರೋಗಿಗಳಿರಲಿ ಇಲ್ಲದಿರಲಿ ಓಡಾಡುತ್ತಿದ್ದುದು ಅವನ ಪದ್ಧತಿ. ಅವನು ಕಿರೀಕಾಟೆಗೆ ಬಂದದ್ದೂ, ನೀರಿನ ನೆವ ಮಾಡಿ ಕೊಂಡು ತಾಯಕ್ಕನ ಮನೆಗೆ ಬಂದದ್ದೂ ಯಾರಿಗೂ ಆಶ್ಚರ್ಯವನ್ನುಂಟು ಮಾಡಲಿಲ್ಲ. ತಾಯಕ್ಕನಿಗೂ. ತಾಯಕ್ಕ ನೀರು ತಂದು ಕೊಟ್ಟು ಯೋಗ ಕ್ಷೇಮ ವಿಚಾರಿಸಿದಳು. ಪಂಡಿತಪ್ಪ ತಾನು ಶಂಖಭಸ್ಮ ಕೊಟ್ಟು ಅವಳ ಹೊಟ್ಟೆಯನೋವನ್ನು ಗುಣಪಡಿಸಿದ ಲಾಗಾಯ್ತಿನಿಂದ ಕತೆ ಹೇಳಿಕೊಂಡು ಬಂದನು. ತಾಯಕ್ಕ ದುಃಖಿಸಿದಳು.

ಮಗನು ಜಗಳವಾಡಿಕೊಂಡು ಮೈಸೂರಿಗೆ ಹೊರಟುಹೋಗಿರುವುದನ್ನೂ, ಎಲ್ಲಿದ್ದಾನೆ ಎನ್ನುವುದನ್ನೇ ತಿಳಿಯದಿರುವುದನ್ನೂ, ಮಗಳು ಮಾಡಿ ಕೊಂಡಿದ್ದ ಅವಿವೇಕವನ್ನೂ ಹೇಳಿಕೊಂಡು ಧಾರಾಳವಾಗಿ ಅತ್ತಳು. ಪಂಡಿತಪ್ಪ ಮಾತಿನಲ್ಲಿ ಬಂದ ಪುಟ್ಟತಾಯಿಯ ವಿಷಯವನ್ನೆತ್ತಿಕೊಂಡು ಮುಂದುವರಿಸಿದನು. "ಐ ಬುಡವ್ವ. ಮಾದೇವಪ್ಪನ್ನ ಒಪ್ಸದೆಷ್ಟೊತ್ತ. ನಾನೊಪ್ಪಿಸಿ ನಿಮ್ಮನೇ ಬಾಕಲತ್ರ ಕರಕಂಡು ಬಂದುಬುಡ್ತೀನಿ. ಅಂದ್ರೆ ಈ ಜಗಳದಲ್ಲಿ ನೀವೇ ಗೆದ್ದೋರಂಗೆ ಮಾತ್ರ ಆಡಕ್ಕಾಗದು ಅಷ್ಟೆ. ಈಚೆಗೆ ಮಾದೇವಪ್ನ ಕಂಡಿದ್ದೆ. ಅವನ್ಗೂ ಈಗ ಕಷ್ಟ-ಸುಖ ಗೊತ್ತಾಗದೆ. ಗುಜ್ಜ ಗೆರೇಲೇ ಏನೋ ಮಾಡ್ಬೇಕೂಂತ ಅವ್ನೆ. ಅದೇನೋ ಏಳಿಬುಡು ತಾಯಕ್ಕ. ನಾಳೇಇಂದ್ಲೇ ಪ್ರಯತ್ನಮಾಡ್ತೀನಿ" ಪದ್ಮಾಸನ ಹಾಕುತ್ತಾ ಪಂಡಿತಪ್ಪ ಹೇಳಿದ.

ತಾಯಕ್ಕ ಹಿಂದೆಮುಂದೆ ನೋಡದೆ ಹೇಳಿದಳು. “ಅಷ್ಟು ಮಾಡ್ಕೊಡಿ ಪಂಡಿತಪ್ಪ. ಪುಟ್ಟ ನಿಮ್ಮ ಎಸರೇಳ್ಕಂಡು ಮನೇದೀಪ ಹಚ್ಚತಳೆ” ಎಂದು ಕೈಮುಗಿದು ಹೇಳಿದಳು. “ಹಂಗಂತ ಅವನ್ನ ಕಳವೇ ಮಾಡಕ್ಕೊಡ್ದು, ಈಗ್ಲೇ ಏಳಿರ್ತೀನಿ. ಅವನು, ತಾನೊಂದು ದಾರೀ ಉಡೀ ಕಳೋಗಂಟಾ ಇಲ್ಲೇ ಬಂದಿರ್ತನೆ” ಎಂದು ಪಂಡಿತಪ್ಪ ಷರತ್ತು ಹಾಕಿದನು. ತಾಯಕ್ಕ “ನೀವೇಳ್ದಂಗೆ” ಎಂದು ಭರವಸೆ ಕೊಟ್ಟಳು.

ಚಿನ್ನದಂತೆ ಹೊಳೆಯುತ್ತಿದ್ದ ಬಟ್ಟಲಿನಲ್ಲಿ ಟೀ ತಂದುಕೊಟ್ಟ ಸಡಗರ ದಲ್ಲಿಯೇ ಪುಟ್ಟತಾಯಿಯ ಅಭಿಪ್ರಾಯವನ್ನು ಪಂಡಿತಪ್ಪ ತಿಳಿದುಕೊಂಡನು. ಪುಟ್ಟತಾಯಿಯ ಕಣ್ಣುಗಳಲ್ಲಿ ಕೃತಜ್ಞತೆಯ ಕಂಬನಿಗಳು ತುಳುಕುವುದರ ಲ್ಲಿದ್ದವು.



“ ಹೆಣ್ಣಿನ ಕಡೆ ಪುರೋಹಿತ ನಾನು ; ಗಂಡಿನ ಕಡೆ ಪುರೋಹಿತ ನೀನು” ಎಂದು ಮಲ್ಲೇಶನಿಗೆ ಹೇಳಿದ್ದ ಅವನು. ಅವನು, ಎಂದರೆ ವಿಠಲನಿಗೆ ಹೆಣ್ಣುಗಳನ್ನೊದಗಿಸುತ್ತಿದ್ದವನು. ಅವನ ಹೆಸರು ‘ಕೀರ್ತಿ’ಯಂತೆ. ಅವನ ಕೀರ್ತಿ ನಿಜವಾಗಿಯೂ ಮೈಸೂರಿನ ಗುಪ್ತ ರಸಿಕವರ್ಗಕ್ಕೆಲ್ಲಾ ಪರಿಚಿತ ವಾಗಿದ್ದದ್ದೆ. ಅವನ ಮಾತಿನಿಂದ ಮಲ್ಲೇಶನಿಗೆ ಅಸಾಧ್ಯ ಕೋಪ ಬಂದಿತ್ತು. ವಿಠಲನು ಜೊತೆಯಲ್ಲಿಲ್ಲದಿದ್ದರೆ ಅವನಿಗೆ ಎರಡೇಟು ಹಾಕಿಯೇಬಿಡುತ್ತಿದ್ದ. ಆದರೆ ವಿಧಿಯಿಲ್ಲ ಆ ಮಾತನ್ನು ಕೇಳಿಕೊಂಡು ವಿಠಲ ಮುಗುಳ್ನಗೆಯನ್ನೇ ಬೀರಿ ಸುಮ್ಮನಾಗಿದ್ದನು.

ಮಲ್ಲೇಶನಿಗೆ ತನ್ನ ಮೇಲೆ ತನಗೇ ಅಸಹ್ಯವಾಯಿತು. ಇನ್ನೊಬ್ಬರ ಮೇಲೆ ಎಂದರೆ ಅದಕ್ಕೆ ಕಾರಣನಾದ ವಿಠಲನಮೇಲೆ ಜೀಹಾಸೆಪಟ್ಟು ಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ವಿಠಲನು ಕರೆದ ಕಡೆಗೆ ಜೊತೆಯಾಗಿ ಹೋಗಲು ನಿರಾಕರಿಸುವಂತಿರಲಿಲ್ಲ. ತಾಯಿಯೊಡನೆ ಜಗಳವಾಡಿಕೊಂಡು ಬಂದ ದಿನದಿಂದ ವಿಠಲನೇ ಮಲ್ಲೇಶನಿಗೆ ತಾಯಿಯಾಗಿದ್ದ. ಮೊಟ್ಟ ಮೊದಲು ಅವನು ಮಲ್ಲೇಶನನ್ನು ತನ್ನ ಸ್ನೇಹಕ್ಕೆ ಕರೆದುದು ತಾನು ದುಷ್ಟ ಚಪಲಗಳಿಗೆ ಬೀಳುವುದನ್ನು ತಡೆಗಟ್ಟಲು. ಆದರೆ ಈಗ ಆ ಸ್ಥಿತಿ ಕೈಮೀರಿ ಹೋಗಿತ್ತು.

ವಿಠಲ ಎಲ್ಲಿಗೆ ಹೋದರೆ ಮಲ್ಲೇಶ ಹಿಂದೆ ಹೋಗಬೇಕಾಗಿತ್ತು. ಹತ್ತಾರು ಜನ ಬೆಡಗಿಯರ ಮನೆಯ ಪರಿಚಯವೂ ಮಲ್ಲೇಶನಿಗಾಯಿತು. ಬೆಡಗಿಯರನ್ನೇ ಪರಿಚಯ ಮಾಡಿಸಿಕೊಡಲೂ ವಿಠಲ ತಯಾರಾಗಿದ್ದ. ಮಲ್ಲೇಶನಿಗೆ ಇನ್ನೂ ಚಳಿ ಸರಿಯಾಗಿ ಬಿಟ್ಟಿರಲಿಲ್ಲ. ರಮಾವಿಳಾಸ ಅಗ್ರ ಹಾರದ ಗಲ್ಲಿಯಲ್ಲಿದ್ದ ಜಲಜ, ನರಸಿಂಹರಾಜ ಮೊಹಲ್ಲಾದ ಶಾಂತಿ ಇವರು ಗಳನ್ನು ಕಂಡಾಗ ಮಲ್ಲೇಶನಿಗೂ ಒಂದು ವಿಧವಾದ ಗೊಂದಲವೇರ್ಪಡು ತ್ತಿತ್ತು. ತನ್ನ ತಾಯಿ ಅಕ್ಕಂದಿರಂತೆ ತನ್ನಲ್ಲೂ ಅಂತಹ ಅವಿವೇಕ ಒಂದಲ್ಲ

ಒಂದು ದಿನ ಕಾಣಿಸಿಕೊಳ್ಳಬಹುದೆಂದು ಆ ನಿರೀಕ್ಷೆಯಲ್ಲಿಯೇ ಇದ್ದನು. ತನ್ನ ತಾಯಿಯ ನೀತಿಯಲ್ಲಿ ಅವನಿಗೆ ಸಂಶಯ ಧೃಢವಾಗಿಹೋಗಿತ್ತು. ಅಕ್ಕನಲ್ಲಿಲ್ಲದೇ ಹೋದರೂ, ಗಂಡನನ್ನು ಬಿಟ್ಟುಬಂದಿದ್ದುದರಿಂದ "ಇವಳೂ ಆ ತಾಯಿಯ ಮಗಳೇ" ಎಂದುಕೊಂಡಿದ್ದನು. ತನ್ನನ್ನೂ ಬಿಟ್ಟುಕೊಳ್ಳುತ್ತಿರಲಿಲ್ಲ. ಜಲಜಳನ್ನು ಕಂಡಾಗ "ನಾನೂ ಆ ತಾಯಿಯ ಮಗನೇ" ಎಂದುಕೊಳ್ಳುವುದನ್ನು ಮರೆಯುತ್ತಿರಲಿಲ್ಲ.

ಅಂತಹ ಜಲಜೆ ಅವಳು. ಅವರ ಸಂಸಾರದ ರೀತಿ, ಅವರ ಮನೆಯಲ್ಲಿ ಓಡಾಡುವ ವ್ಯಕ್ತಿಗಳು, ಮುಂತಾದುವನ್ನು ಗಮನಿಸಿದರೆ ಅವರು ಮರ್ಯಾದಸ್ತರಲ್ಲವೆಂದು ಹೇಳಿಬಿಡಬಹುದಾಗಿತ್ತು. ವಿಠಲನಂತಹವರು ನಾಲ್ಕಾರು ಜನರು ಅವರ ಮನೆಯೊಳಕ್ಕೆ ಧಾರಾಳವಾಗಿ ಹೋಗಿ ಕುಳಿತು ಮಾತನಾಡುತ್ತಿರುತ್ತಿದ್ದರು. ನಡೆಯಬೇಕಾಗಿದ್ದ ಸಮಾರಂಭಗಳೆಲ್ಲವೂ ನಡೆಯುತ್ತಲೇ ಇದ್ದವು. ಸಂಜೆಯ ಹೊತ್ತು ಜಲಜೆ ಮಾಡಿಕೊಳ್ಳುತ್ತಿದ್ದ ಶೃಂಗಾರವನ್ನು ಕಂಡವರು ಅವಳಲ್ಲಿ 'ಲಕ್ಷ' ಇದೆ ಎಂದರೆ ಒಪ್ಪಿಕೊಳ್ಳುವಂತಿತ್ತು. ಆ ಸೌಂದರ್ಯದ ಪ್ರಭೆ ಎಂತಹವರ ಕಣ್ಣನ್ನೂ ಕಿರಿದುಮಾಡಿಸುತ್ತಿತ್ತು. ವಿಠಲನಂತಹವರಿರಲಿ, ಮಲ್ಲೇಶನಂತಹ ಅಳ್ಳೆದೆಯ, ಸ್ವಾಭಿಮಾನದ ಹೊಸ ಯುವಕನೂ ಮರುಳಾಗಿಹೋಗಿದ್ದ. ಜಲಜೆಯೊಬ್ಬಳ ಮನೆಗೆ ಮಾತ್ರ ವಿಠಲನೊಂದಿಗೆ ಹೋಗಲು ಮಲ್ಲೇಶನ ಮನಸ್ಸಿನ ಸಂಪೂರ್ಣ ಅನುಮತಿಯಿತ್ತು. ಕೀರ್ತಿ "ಏನು ಪುರೋಹಿತರೇ ನೀವ್ಯಾಕೆ ಸುಮ್ನೆ ಗಂಡಿನ ಜೊತೇಲಿ ರಮಾವಿಳಾಸ ಅಗ್ರಹಾರಕ್ಕೆ ತಿರಗ್ತೀರಿ?" ಎಂದು ಹಂಗಿಸಿದರೂ ಮಲ್ಲೇಶನಿಗೇಕೋ ಆಗಬೇಕಾದಷ್ಟು ಅವಮಾನವಾಗುತ್ತಲೇ ಇರಲಿಲ್ಲ.

ಆ ಹಾಳು ಜಲಜೆಯೋ ಮನೆಗೆ ಬಂದವರ ಮೈಮೇಲೆಲ್ಲಾ ಏಕರೀತಿಯಾಗಿ ಬಿದ್ದು ಮಾತನಾಡಿಸುತ್ತಿದ್ದಳು. ಎಲ್ಲರನ್ನೂ "ಅಣ್ಣಾ, ಅಣ್ಣಾ" ಎಂದು ಕರೆದು ನೋಯಿಸುತ್ತಿದ್ದಳು. ಅದರಂತೆ ಮಲ್ಲೇಶನನ್ನೂ ಅವಳು ಕೀಡಿಸುತ್ತಿದ್ದಳು. ಒಂದು ದಿನ ಮಲ್ಲೇಶನೆದುರಿಗೇ ವಿಠಲನನ್ನು ಕುರಿತು ಒಂದು ಮಾತನ್ನು ಹೇಳಿದ್ದಳು. "ನಿಮ್ಮಷ್ಟು ಅನುಕೂಲಸ್ಥಿತಿ ಇದ್ದಿದ್ದರೆ

ನಮ್ಮ ಮಲ್ಲೇಶ್–ಅಣ್ಣ ನಿಮಗಿಂತಲೂ ಚೆನ್ನಾಗಿ ಕಾಣ್ತಾ ಇದ್ದರು" ಎಂದ ಅವಳ ಮಾತಿನಿಂದ ಮಲ್ಲೇಶನ ಸಪ್ಪೆಕನಸು ಬಣ್ಣಬಣ್ಣವನ್ನುಟ್ಟು ಮೆರೆಯ ತೊಡಗಿತ್ತು. ಅಂದಿನಿಂದ ಅವನು ತನ್ನ ಅಲಂಕಾರದ ಕಡೆಗೆ ಸ್ವಲ್ಪ ಹೆಚ್ಚು ಗಮನವನ್ನು ಕೊಡತೊಡಗಿದ್ದುದನ್ನು ವಿಠಲನೂ ಗಮನಿಸಿದನು.

ಒಂದು ದಿನ ಮಲ್ಲೇಶ ವಿಠಲನೊಡನೆ ಹೋಗದಿರುವುದಕ್ಕೆ ಯಾವುದೊ ನೆವ ಹೇಳಿ ಅನುಮತಿ ಪಡೆದುಕೊಂಡನು. ತನ್ನ ಅಳತೆಯಿಂದ ಚಿಕ್ಕದು ಮಾಡಿಸಿ ವಿಠಲನೇ ಮಲ್ಲೇಶನಿಗೆ ಕೊಟ್ಟಿದ್ದ ಕೋಟನ್ನು ತೊಳೆಸಿ ಇಸ್ತ್ರಿ ಮಾಡಿಸಿಟ್ಟಿದ್ದನು. ಮುಖಕ್ಷೌರ ಮಾಡಿಕ್ಕೊಂಡು, ತಲೆಯನ್ನು ಚೆನ್ನಾಗಿ ಬಾಚಿ, ಕೋಟು ಹಾಕಿಕೊಂಡು ಬಿಳಿಯ ಬಟ್ಟೆಗಳಿಗೆ ಮೆರಗು ಕೊಡಲೆಂಬಂತೆ ಕಪ್ಪು ಎಕ್ಕಡಗಳನ್ನು ಮೆಟ್ಟಿ ಹೊರಟನು ಜಲಜೆಯ ಮನೆಗೆ. ಅದೇಕೋ ಅವಳನ್ನು ವಿಠಲನು ಜೊತೆಯಲ್ಲಿಲ್ಲದಿದ್ದಾಗ ಒಂದು ದಿನ ಮಾತನಾಡಿಸಬೇಕೆಂದಿದ್ದು ಈ ದಿನ ಗೊತ್ತುಮಾಡಿಕೊಂಡಿದ್ದನು. ವಿಠಲನೂ ಅದೇಕೋ ಆ ಸಂಜೆ ಮಲ್ಲೇಶನಿಗೆ ಹೆಚ್ಚು 'ಗುಂಜಾಯಿಷಿ' ಮಾಡದೆ ರಜ ಕೊಟ್ಟು ಹೋಗಿದ್ದನು.

ಬಹಳ ಆಸೆಯಿಂದ ಮಲ್ಲೇಶನ ಕಾಲುಗಳು ಜಲಜೆಯ ಮನೆಯತ್ತ ನಡೆದವು. ಅಂದು ಅವಳೊಡನೆ ಏನೇನು ಮಾತನಾಡಬೇಕೆಂದಿದ್ದನೋ ಪಾಪ. ಅವಳ ಮನೆ ಸಿಗುವುದಕ್ಕೆ ಮುಂಚೆಯೇ ಜಲಜೆ ಜಟಕದಲ್ಲಿ ಕುಳಿತು ಮುಂದೆಮುಂದೆ ಹೋಗುತ್ತಿದ್ದುದೂ, ಹಿಂದೆಹಿಂದೆ ಸೈಕಲ್ಲಿನಲ್ಲಿ ವಿಠಲ ಹೋಗುತ್ತಿದ್ದುದೂ ಮಲ್ಲೇಶನ ಕಣ್ಣಿಗೆ ಬಿದ್ದಿತು. ವಿಠಲನಿಗೂ ಮಲ್ಲೇಶ ಕಾಣಿಸಿದ್ದಿರಬಹುದು—ಆದರೆ ಬಹಳ ದೂರದಿಂದ. ವಿಠಲ ನೋಡದವನಂತೆ ಹೊರಟುಹೋಗಿದ್ದನು. ಮಲ್ಲೇಶ ನೇರವಾಗಿ ರೂಮಿಗೆ ಹಿಂದಿರುಗಿ ಬಟ್ಟೆಗಳನ್ನೆಲ್ಲಾ ಒರಟಾಗಿ ತೆಗೆದಿಟ್ಟು ಬಿದ್ದುಕೊಂಡನು.

" ಜಲಜೆ, ಎಲ್ಲರಹಾಗಲ್ಲ ಮಲ್ಲು. ಬಹಳ ಬಿಗಿ. ಉಹ್ಞು! ಇಲ್ಲವೇ ಇಲ್ಲ ! " ಎಂದಿದ್ದ ವಿಠಲ ಈದಿನ ಗೆದ್ದುಬಿಟ್ಟನೆಂದು ಮಲ್ಲೇಶ ತನ್ನಲ್ಲಿತಾನೆ ಹೊಟ್ಟೆಯುರಿದುಕೊಂಡನು. ಆದಿನದಮಟ್ಟಿಗೆ ವಿಠಲನಮೇಲೆ ಮಲ್ಲೇಶನಿಗೆ

ಹೊಟ್ಟೆಯಕಿಚ್ಚು ಬಂದಿತು. ಅಷ್ಟಾದರೂ ಮಲ್ಲೇಶನಿಗೊಂದು ಹುಚ್ಚು ಧೈರ್ಯವಿತ್ತು. "ಸಿನಿಮಾಕ್ಕೆ ಹೋದರೆತಾನೆ ಏನು ? ಜಲಜೆಯ ಜೊತೆಯಲ್ಲಿ ಅವಳ ತಾಯಿಯೂ ಹೋಗಿಲ್ಲವೇ ?'' ಎಂದುಕೊಂಡನು. ಅವನ ಮನಸ್ಸಿನಲ್ಲಿ ಜಲಜೆ ಆ ದಿನವೂ ಪರಿಶುದ್ಧಳಾಗಿಯೇ ಉಳಿದಳು.

ಕೆಲವು ದಿನಗಳಾದಮೇಲೆ ವಿಠಲನನ್ನು ಕೇಳಿಯೂ ಕೇಳಿದನು. ವಿಠಲನೂ ನಿಡಿದಾಗಿ ಉಸಿರು ಬಿಟ್ಟು, "ಬಲು ಹಟಮಾರಿ ಹುಡುಗಿ ಜಲಜಾ, ಮಲ್ಲೇಶ. ಅವಳಿಗೇನು ಬೇಕೋ ? ಅವಳ ಮನಸ್ಸಿನಲ್ಲೇನಿದೆಯೋ ಗೊತ್ತೇ ಆಗೊಲ್ಲ" ಎಂದ. ಮಲ್ಲೇಶನಿಗೆ ಅದೇಕೋ ಅವಳಿಗೇನು ಬೇಕು, ಅವಳ ಮನಸ್ಸಿನಲ್ಲೇನಿದೆ ಎಂಬುದು ತನಗೆ ಗೊತ್ತಿರುವಂತೆ ಭಾಸವಾಯಿತು. ತನ್ನೊಬ್ಬನೊಂದಿಗೆ ಅವಳು ಮನಬಿಚ್ಚಿ ಮಾತನಾಡುವಳೆನ್ನಿಸಿತು. ಅವಳು ಎಷ್ಟೋದಿನ ಹಾಗೆ ಮಾತನಾಡುವಾಗ "ನನಗೆ ಐಶ್ವರ್ಯದ ಮಾತೂಂದ್ರೇ ಆಗದು ಮಲ್ಲೇಶ್—ಅಣ್ಣಾ. ನಗನಗತಾ ಇರಬೇಕು. ಕ್ಲೀನಾಗಿ ಡ್ರೆಸ್ ಮಾಡಬೇಕು. ಮನಸ್ಸು ಧಾರಾಳವಾಗಿರಬೇಕು ಅಂತಾವರಿಗೆ ನಾನು ಪ್ರಾಣ ಒಪ್ಪಿಸಿಬಿಡೋಣ ಅನ್ನಿಸುತ್ತೆ" ಎನ್ನುತ್ತ ಇದ್ದದ್ದು ಮಲ್ಲೇಶನಿಗೆ ಜ್ಞಾಪಕ ಬಂದಿತು. ಜಲಜ ಕಾಸಿನ ಸೂಳೆಯಲ್ಲವೆಂಬ ನಿರ್ಧಾರಕ್ಕೆ ಅವನು ಬಂದನು. ಅದನ್ನು ಅವಳ ಬಾಯಿಂದಲೇ ಕೇಳಿಬಿಡಬೇಕೆನ್ನುವ ಚಪಲವೂ ಅವನಿಗೆ ಬಹಳವಾಗಿತ್ತು.

ವಿಠಲನ ನೆಂಟರೊಬ್ಬರ ಮದುವೆಯ ಸಮಯವನ್ನು ಮಲ್ಲೇಶ ಅದಕ್ಕಾಗಿ ಉಪಯೋಗಿಸಿಕೊಂಡನು. ವಿಠಲನನ್ನು ಬಿಟ್ಟು ಒಬ್ಬನೇ ಮನೆಗೆ ಬರಲು ಧೈರ್ಯ ಮಾಡಿದ ಮಲ್ಲೇಶನನ್ನು ಪರೀಕ್ಷೆ ಮಾಡಲೆಂದೋ ಏನೋ ಜಲಜೆ ಅವನೊಂದಿಗೆ ಮಾತಿಗೆ ಕುಳಿತಳು.

"ಮಲ್ಲೇಶ್-ಅಣ್ಣ, ನಿಮ್ಮ ಕ್ರಾಪು ಕಂಡರೆ ನನಗೆ ಹೊಟ್ಟೇಕಿಚ್ಚು. ಬಲಗಡೆ ಅದು ಮೇಲಕ್ಕೆದ್ದು ಬಳುಕಿ ಹಿಂದಕ್ಕೆ ಹೋಗೋದನ್ನ ಕಂಡರೆ, ನಾವು ಹೆಂಗಸರಾಗಿ ಪ್ರಯೋಜನವಿಲ್ಲಾ ಅನ್ಸುತ್ತೆ. ದಯವಿಟ್ಟು ನನಗೋಸ್ಕರ ಒಂದು ಕೆಲಸ ಮಾಡ್ತೀರಾ ?''

" ಏನು ಹೇಳು ಜಲಜಾ "

''ನನ್ನ ಹೊಟ್ಟೇಕಿಚ್ಚಿಗೋಸ್ಕರ ನೀವು ತಲೆ ಬೋಳಿಸ್ಕೊಂಡು ಬಿಡಿ."

" ಆ !........ ಹ್ಞೂ, ಆಗಲಿ. ಅದರಿಂದ ನನಗೂ ಏನಾದರೂ ಪ್ರಯೋಜನವಾಗಬೇಡ್ವೆ ? "

" ಹಾಗೇನು ? ಅದೇನು ಹೇಳಿ ನೋಡೋಣ ನನ್ನಿಂದಾದರೆ ಅಗತ್ಯ ವಾಗಾಗಲಿ.''

'' ಏನೂ ತಿಳ್ಕೊಳ್ಳೊಲ್ಲ........ವೆ ? ''

" ಅದ್ಯಾಕೆ ಹೆದರ್ಕ್ಕೋತೀರಿ. ಏನಿದ್ದರೂ ಮಾತಾಡಿಬಿಡಬೇಕು. ನೀವೇನು ತಿಳ್ಕೊಂಡ್ರೂ ಪರವಾಗಿಲ್ಲ ಅಂತ ನಾನು ನಿಮ್ಮನ್ನ ತಲೇ ಬೋಳಿ ಸ್ಕೊಳ್ಳಿ ಅಂತ—ನನ್ನ ಮನಸ್ಸಿಗೆ ಬಂದದ್ದು—ಹೇಳಿಬಿಡಲಿಲ್ಲವೆ ? ''

'' ಹ್ಞೂ, ಏನಾದರಾಗಲಿ ಹೇಳೇಬಿಡ್ತೀನಿ, ಆ್ಞ.''

" ಹೇಳೀ ಬಿಡಿ."

" ಜಲಜ ನನಗೆ ನಿಮ್ಮನ್ನಕಂಡರೆ ತುಂಬಾ ವಿಶ್ವಾಸ-ಹಾಗೇ ನಿನಗೂ ನನ್ನ ಮೇಲೆ ಪ್ರೀತಿ ? "

" ಪರವಾಗಿಲ್ಲ—ನಡಗಬೇಡಿ....ನನಗೂ ನಿಮ್ಮ ಮೇಲೆ ಪ್ರೀತಿ.... ಇರಬೇಕೂಂತ ಹೇಳ್ತೀರೇನು ? ಅಗತ್ಯವಾಗಾಗಲಿ ಅದಕ್ಕೇನಂತೆ "

" ನಾನು ಬಡವ "

'' ನನಗ್ಗೊತ್ತಿದೆ. ಪ್ರೀತಿವಿಶ್ವಾಸಕ್ಕೂ ಬಡತನಕ್ಕೂ ಸಂಬಂಧವೇ ಇಲ್ಲ ಅಂತ ನಾನು ಹೇಳ್ತಾನೇ ಇದ್ದಿಲ್ವೆ ?"

" ಹಾಗಾದರೆ........ಹಾಗಾದರೆ........''

'' ಓಹೋಹೋ .. .ತಾಳಿ ತಾಳಿ....ಪ್ರೀತಿ ಅಂದರೆ ಹೀಗೆ ಮೈಮೇಲೆ ಬೀಳೋ ಪ್ರೀತಿಯೋ ...ಮಲ್ಲೇಶ್ . ಸ್ವಲ್ಪ ಕೂತ್ಕೊಳ್ಳಿ .. ಕೂತ್ಕೊಳಿ ಸುಧಾರಿಸ್ಕೊಳ್ಳಿ "

" ನೀನೇ ಅಂದ್ಯಲ್ಲ ಜಲಜಾ "

" ಮಲ್ಲೇಶ್ ನನಗೆ ಮಾತಿನಲ್ಲಿ ಮುಚ್ಚು ಮರೆ, ಮಾನ ಮರ್ಯಾದೆಯೆಲ್ಲ ಹೋಗಿ ಬಹಳ ದಿನವಾಗ್ಹೋಯ್ತು. ಇರೋ ವಿಷಯ ಹೇಳಿಬಿಡ್ತೀನಿ ಕೇಳಿ. ಈ ಮೈಮೇಲೆ ಬೀಳೋ ಪ್ರೀತಿಗೇಂತಲೇ ನನ್ನ ಹತ್ತಿರ ಒಬ್ಬಿದಾನೆ. ಅವನ್ನ ಬಿಟ್ಟು ನನ್ನಜೊತೇಲಿ ಇನ್ಯಾರ ಸಂಬಂಧವೂ ಇಲ್ಲ. ಬೇಕಾದಷ್ಟು ಜನ ಹಾತೊರೀತಾಇದಾರೆ. ಕಾರಣವೇ ಇಲ್ದೇ ನನಗೋಸ್ಕರ ಸಿಕ್ಕಾಬಟ್ಟೆ ಖರ್ಚುಮಾಡ್ತಾ ಇರೋರೂ ಇದಾರೆ. ನಾನೂ ಮರ್ಯಾದಸ್ಥಳೂಂತ ಏನೂ ಹೇಳ್ಕೋಳೊಲ್ಲ. ಆದರೆ ನಾನು ಆ ಪ್ರೀತಿಗೆ ಪ್ರತಿಫಲವಾಗಿ ಬಹಳ ದುಬಾರಿಯಾದ ಬೆಲೆ ಪಡೀಬೇಕೂಂತ ಹಟಮಾಡಿಬಿಟ್ಟೀದೀನಿ. ನಿಮ್ಮ ಸ್ನೇಹಿತ ವಿಠಲನಂತಹ ನಾಲ್ಕು ಜನರನ್ನ ಕೊಂಡ್ಕೊಳ್ಳಬಲ್ಲ ಮನುಷ್ಯ ಇದೋ ನೀವು ಕೂತಿರೋ ಕುರ್ಚಿಮೇಲೇ ಕೂತ್ಕೊಂಡು ನಿಮ್ಮಹಾಗೆ ಮೈಮೇಲೆ ಬೀಳೋಕ್ಕೆ ಬಂದಿದ್ದ. ಉಹ್ಞು! ಇನ್ನು ನೀವು ಹೀಗಾಡಿದರೆ ಏನು ಪ್ರಯೋಜನ ಮಲ್ಲೇಶ್. ನಿಮ್ಮ ಕೋಟು, ಬಟ್ಟೆ, ಎಕ್ಕಡ ಮೊದಲ್ಗೊಂಡು ಎಲ್ಲ ವಿಠಲ್‌ದೂ ಅನ್ನೋ ವಿಷಯ ನನಗೆ ಗೊತ್ತು. ಇನ್ಮೇಲೆ ನೀವೇನಾದರೂ ಈ ತರಹಾ ಪ್ರಸಂಗದಲ್ಲಿ ಮಾತಾಡಬೇಕಾಗಿ ಬಂದಾಗ ಮೊದಲು ನೀವು ಉಟ್ಟ ಉಡುಗೆ ನಿಮ್ಮದೆ—ನೀವು ಸಂಪಾದನೆ ಮಾಡಿದ್ದೇ ಅನ್ನೋದ್ನ ಯೋಚಿಸ್ಕೊಂಡು ಮಾತಾಡಿ. ಮಾನವಿಲ್ಲದೇ ಇದ್ದ ಹೆಂಗಸು ಅಂತ ' ಏಕ್‌ದಂ' ಹುಲಿ ಬಿದ್ದಹಾಗೆ ಬಿದ್ದುಬಿಡಬೇಡಿ........"

ಜಲಜೆಯ ಉಪನ್ಯಾಸಕ್ಕೆ ಅವಳ ತಾಯಿಂದ ತಡೆ ಬಂತು. ಅವಳು ತಾಯಿಕರೆದ ಕಡೆಗೆ ಹೋದಳು. ಮಲ್ಲೇಶನ ಆದ್ಯಂತದೇಹ ಬೆವರಿಟ್ಟಿತ್ತು. ಮುಖವನ್ನು ಮಾತ್ರ ಒರಸಿಕೊಂಡು ಕುಳಿತನು. ಜಲಜಾ ಅಷ್ಟಕ್ಕೇ ಅವನನ್ನು ಬಿಟ್ಟುಕೊಡದೇ ಒಳಗಿನಿಂದ ಬರುತ್ತಾ ಒಂದು ಲೋಟ ನೀರನ್ನು ತಂದು ಅವನಿಗೆ ಕುಡಿಸಿದಳು. ಜಲಜಾ ಅಂದು ಅವನ ಮುಖಭಂಗ ಮಾತ್ರ ಮಾಡಿರಲಿಲ್ಲ. ಅವನ ತಣ್ಣಗಾಗಿಹೋಗಿದ್ದ ಆತ್ಮಾಭಿಮಾನವನ್ನು ಪುಟಗೊಳಿಸಿ ಕಳುಹಿಸಿದ್ದಳು. ಮಲ್ಲೇಶ ಜಲಜೆಯ ಮನೆಗೆ ಹೊರಟಾಗ ಅವನೆದೆ ಎಷ್ಟು ಭಾವನೆಗಳಿಂದ ತುಂಬಿತ್ತೋ ಅದರ ಎರಡರಷ್ಟು ಭಾರಹೊತ್ತು ಅಲ್ಲಿಂದ ಹಿಂದಿರುಗಿದನು....

ಕೀರ್ತಿ ಕೊಟ್ಟಿದ್ದ "ಗಂಡಿನಕಡೆ ಪುರೋಹಿತ" ಎಂಬ ಬಿರುದೂ, ಜಲಜೆಯಾಡಿದ 'ನೀವು ಉಟ್ಟ ಉಡಿಗೆ ನಿಮ್ಮದೇ-ನೀವು ಸಂಪಾದನೆಮಾಡಿದ್ದೇ ಅನ್ನೋದನ್ನ ಯೋಚಸ್ಕೊಂಡು ಮಾತಾಡಿ'ಎಂಬ ಮಾತೂ ಮಲ್ಲೇಶನ ವ್ಯಕ್ತಿತ್ವವನ್ನೇ ಹಿಡಿದು ಅಲುಗಾಡಿಸಿದ್ದವು. ಬಾಲ್ಯದಿಂದ ಅಡ್ಡಿ ಆತಂಕಗಳು ಸಾಲದೇ ಸ್ವೇಚ್ಛೆಯಾಗಿ ಬಿಟ್ಟುಕೊಂಡು ಬಂದಿದ್ದ ಅವನ ಮನಸ್ಸನ್ನು ಒಂದುಕಡೆಗೆ ಹಿಡಿದು ಕಟ್ಟಿಹಾಕಿದಂತಾಗಿತ್ತು. ತನಗೇ ತಿಳಿಯದಂತೆ ವಿಠಲನಿಗೆ ಅಧೀನನಾಗಿಹೋಗಿದ್ದ ತನ್ನ ಬಗ್ಗೆ ಅವನಿಗೆ ಅಂದು ತಿರಸ್ಕಾರ ಉಂಟಾಯಿತು.

ಆ ಗಳಿಗೆಯಿಂದಲೇ ತನ್ನ ಮುಂದಿನ ದಾರಿಯನ್ನು ಹುಡುಕತೊಡಗಿದನು. ವಿಠಲನ ಹಂಗಿನಿಂದ ಪಾರಾಗುವ ಉಪಾಯವನ್ನು ಕಂಡುಹಿಡಿಯತೊಡಗಿದನು. ವಿಠಲನ ಮುಖ ಕಾಣುವವರೆಗೂ ಆ ಮನೋಭಾವ ಅವನಲ್ಲಿ ಬಹಳ ದೃಢವಾಗಿ ನಿಂತಿತ್ತು. ರೂಮಿನ ಬಾಗಿಲಲ್ಲಿ ಅವನ ಸೈಕಲ್ಲಿನ ಗಂಟೆಯ ಸದ್ದಾದ ತಕ್ಷಣ ಅದೆಲ್ಲಿ ಹಾರಿತೋ ಕುಳಿತಿದ್ದವನು ಎದ್ದು ಓಡಿಹೋಗಿ ಅವನನ್ನು ಒಳಕ್ಕೆ ಕರೆದನು. ವಿಠಲ ಕಾಫಿಯ ದಿವ್ಯನಾಮವನ್ನೆತ್ತಿ ಮಲ್ಲೇಶನನ್ನೇ ಹೊರಕ್ಕೆ ಕರೆದನು. ಮಲ್ಲೇಶ ಕುರಿಯಂತೆ ತಲೆ ತಗ್ಗಿಸಿ ರೂಮಿಗೆ ಬೀಗ ಹಾಕಿಕೊಂಡು ಅವನನ್ನು ಹಿಂಬಾಲಿಸಿದನು. ಸೊಗಸಾದ ಉಪಹಾರವಾಯಿತು. ಒಂದು ದಿನದ ಗೈರು ಹಾಜರಿಯ ಋಣವನ್ನೆಲ್ಲಾ ವಿಠಲ ತೀರಿಸಿಕೊಳ್ಳುವವನಂತೆ ಖರ್ಚು ಮಾಡಿದನು.

ಎಲ್ಲ ವೈಭವಗಳನ್ನು ಅನುಭವಿಸುತ್ತಲೇ ಮಲ್ಲೇಶ ಸಪ್ಪೆಯಾಗಿ ಕಾಣುತ್ತಿದ್ದನು. ಅವನ ಅಭಿಮಾನಕ್ಕೆ ಆ ಕೂಡಲೇ ವಿಠಲನನ್ನೆದುರಿಸುವ ಚೈತನ್ಯವಿಲ್ಲದೇ ನರಳುತ್ತಿದ್ದಂತಿತ್ತು ಅವನ ಮುಖ. ಅದನ್ನೂ ವಿಠಲನೇ ಬಾಯಿಬಿಟ್ಟು ಕೇಳಬೇಕಾಯಿತು.

"ಯಾಕೆ ಮಲ್ಲೇಶ—ಆರೋಗ್ಯವಾಗಿದೀಯೆ ತಾನೆ? ಋಣಬಾಧೆ ಏನಾದರೂ ಉಂಟೋ?"

"ಆರೋಗ್ಯಕ್ಕೇನು ನಾಲ್ಕು ಜನಕ್ಕೆ ಬೇಕಾದಷ್ಟಿದೆ ವಿಠಲ, ಈ ಋಣ ಬಾಧೇದೇ ಪಂಚಾಯ್ತಿ"

" ಯಾರ ತಗಾದೆ ಮಲ್ಲೇಶ."

ಮಲ್ಲೇಶನ ಬಾಯಿ ನಾಲಿಗೆಯನ್ನು ತಡೆದುಹಿಡಿಯಿತು. ಆದರೂ ಕಷ್ಟಪಟ್ಟು ಮಲ್ಲೇಶ ಆ ಮೂರು ಅಕ್ಷರಗಳನ್ನು ಬಾಯಿಂದ ಈಚೆಗೆ ಕಳಿಸಿಯೇ ಬಿಟ್ಟನು.

" ನಿನ್ನದು.''

" ನನ್ನದು—ಇದೇನೀ ಹೊಸಮಾತು ಮಲ್ಲು! "

" ಹೌದು ವಿಠಲ್, ನಿನ್ನ ಋಣಬಾಧೆ ದಿನದಿನಕ್ಕೆ ಅಗಾಧವಾಗಿ ಬೇಳಿತಾಯಿದೆ. ಅದನ್ನು ತೀರ್ಸ್ಸೋ ಭರವಸೆ ದಿನದಿನಕ್ಕೆ ತಗ್ಗ್ತಾ ಇದೆ."

'' ನೀನು ತೀರಿಸಬೇಕಾದಂತಹ ಋಣ ನನ್ನಿಂದೇನೂ ಆಗಿಲ್ಲ ಮಲ್ಲು ನೀನು ಯಾವುದೋ ಯೋಚನೇಲಿ ಯಾವುದೋ ಮಾತಾಡ್ತಾ ಇದೀಯೆ.''

" ಇಲ್ಲ ವಿಠಲ್, ನನಗೆ ಹಗಲೂ ರಾತ್ರಿ ಇದೇ ಚಿಂತೆಯಾಗಿದೆ. ನನ್ನ ಮುಂದಿನ ಪಾಡೇನು ? ನಿನ್ನ ಉಪಕಾರಕ್ಕೆ ಪ್ರತ್ಯುಪಕಾರ ಮಾಡೋ ಯೋಗ್ಯತೆ ನಾನು ಸಂಪಾದನೇ ಮಾಡ್ದೇಇದ್ರೆ ಬದುಕಿ ಸಾರ್ಥಕವೇನು ಅನ್ನಸ್ತಾ ಇದೆ "

" ಅದೆಲ್ಲಾ ವಿಪರೀತ ಸೂಕ್ಷ್ಮವಾದ ಯೋಚನೆಗಳು ಮಲ್ಲು. ನೀನು ಹಾಗೆಲ್ಲ ತಲೆಕೆಡಿಸಿಕೊಳ್ಳಬೇಡ. ಸುಮ್ಮನಿದ್ದು ಬಿಡು"

'' ಏನು ಸಾಯೋವರ್ಗೂ ನಿನ್ನ ಆಪ್ತಕಾರ್ಯದರ್ಶಿಯಾಗಿಯೇ ?''

" ಹಹಹ....ಹ್ಞೂ .....ಯಾಕಾಗಬಾರದು ?''

" ಅದಕ್ಕೆ ಕೀರ್ತಿ ಏನು ಹೆಸರಿಟ್ಟದ್ದಾನೆ ಗೊತ್ತಲ್ಲ—'ಪುರೋಹಿತ' ಅಂತ."

'' ಎಲ್ಲ ಹಳೇ ಮಾತು ಬಿಡು ಮಲ್ಲು.''

ಮಾತೇನೋ ನಿಂತಿತು. ಆದರೆ ಮಲ್ಲೇಶನ ಮುಖವಂತೂ ಗೆಲುವಾಗಲಿಲ್ಲ. ಅವನ ಮುಖದಲ್ಲಿ ನಗೆ ಮೂಡಿಸಲು ವಿಠಲ ಜಲಜೆಯ ಮಾತನ್ನಾಡಿದನು. ಅಲ್ಲಿಗೆ ಮಲ್ಲೇಶನನ್ನು ಕರೆದನು. ಮಲ್ಲೇಶನ ಮುಖ ಮತ್ತಷ್ಟು ಗಂಭೀರವಾಯಿತು. ಅದರಿಂದ ವಿಠಲನಿಗೂ ಬೇಸರವಾಯಿತು.

ಮಲ್ಲೇಶ ‘ ವಿಠಲ್ ನನಗೊಂದೆರಡು ಮೂರು ದಿವಸ ರಜ ಕೊಡ್ತೀಯಾ ?’ ಎಂದುದಕ್ಕೆ ವಿಠಲ ಸಂತೋಷದಿಂದಲೇ ಒಪ್ಪಿಕೊಂಡನು. ಮಲ್ಲೇಶನು ದುಡ್ಡಿಗೆ ತಲೆ ಕೆರೆಯುತ್ತ ನಿಲ್ಲದಿದ್ದುದರಿಂದ ಮತ್ತೂ ಸಂತೋಷವಾಯಿತು. ವಿಠಲನಿಗೂ ಒಂಟಿಯಾಗಿ ತಿರುಗುವ ಎದೆ ಬಂದಿದ್ದುದು ಅವನು ಸೈಕಲ್ಲನ್ನು ಹತ್ತಿದ ಠೀವಿಯಲ್ಲಿ ಕಾಣುತ್ತಿತ್ತು.

ಮಲೇಶನಿಗೂ ,ಒಂದು ಬಿಡುಗಡೆಯ ನಿಟ್ಟುಸಿರೇ ಹೊರಬಂದಿತು. ಮುಂದಿದ್ದ ಅಂಧಕಾರವು ಅವನ ಪಾಲಿಗೆ ಅಷ್ಟೇನೂ ಭಯಂಕರವಾಗಿ ಕಾಣಲಿಲ್ಲ. ಅವನು ವಿಠಲನ ಹಿಡಿತದಿಂದ ತಪ್ಪಿಸಿಕೊಳ್ಳುವ ಬಗೆಯನ್ನು ಕಂಡುಹಿಡಿದಿದ್ದನು. ಸದಾ ಅಳುಮುಖ ಹೊತ್ತು ಋಣಬಾಧೆ ಮುಂತಾದ ನೀರಸಮಾತುಗಳನ್ನಾಡುತ್ತಿದ್ದರೆ ವಿಠಲ ತಾನಾಗಿಯೇ ತನ್ನಿಂದ ದೂರ ವಾಗಿ ಹೋಗುತ್ತಾನೆ ಎಂಬ ಗುಟ್ಟನ್ನು ತಿಳಿದುಕೊಂಡಹಾಗಾಯಿತು. ಎಲ್ಲ ಕ್ಕಿಂತ ಇನ್ನು ಮುಂದೆ ಹೊಟ್ಟೆ ಬಟ್ಟೆಗೆ ವಿಠಲನ ಕೈಯನ್ನೇ ಕಾಯಕೂಡದು ಕೂಲಿಮಾಡಿದರೂ ಸರಿಯೆ ಎಂಬ ನಿರ್ಧಾರವಿದ್ದುದರಿಂದಲೇ ಮಲ್ಲೇಶನ ಮನಸ್ಸಿಗೆ ಅಷ್ಟು ಹಾಯೆನಿಸಿದ್ದುದು.

ಮನುಷ್ಯನಿಗೆ ನಿರ್ಧಾರಕ್ಕಿಂತ ಹೆಚ್ಚಿನದೇನೂ ಇಲ್ಲವೆಂಬ ಅವನ ಹುರುಪು, ರಾತ್ರಿಯ ಊಟವನ್ನು ಲೆಕ್ಕಿಸಲಿಲ್ಲ. ಮೋಟುಬೀಡಿಗಳ ಹೊಗೆ ಯನ್ನೇ ಆಹಾರವಾಗಿ ಮಾಡಿಕೊಂಡಿದ್ದಾಯಿತು. ಅರ್ಧರಾತ್ರಿಯಲ್ಲಿ ಹಸಿವು ಕಂಡರೂ ಮಲ್ಲೇಶ ಹಲ್ಲುಮುಡಿ ಕಚ್ಚಿ ಸುಮ್ಮನಾದನು. ನಿದ್ದೆ ಬರದೇ ಸ್ವಲ್ಪಹೊತ್ತು ಕಳೆಯಿತು. ಮಾರನೆಯ ಬೆಳಿಗ್ಗೆ ಏನುಮಾಡುವುದೆಂಬು ದರ ಬಗ್ಗೆ ಮನಸ್ಸಿಗೆ ಹಾಕಿದ ಪ್ರಶ್ನೆಗೆ ಉತ್ತರವೇ ಬರಲಿಲ್ಲ, ಬದಲಾಗಿ ಮಾರನೆಯ ದಿನ ಬಂದಿತು.

ಸ್ನಾನಮಾಡಲು ಬೇಸರ. ಒಗೆದ ಬಟ್ಟೆಗಳಿರಲಿಲ್ಲ. ಸ್ನಾನಮಾಡಿ ಬಟ್ಟೆ ಬದಲಾಯಿಸಿದರೆ ತಾನೇ ಪ್ರಯೋಜನವೇನು, ತಿಂಡಿಯೇ ತೀರ್ಥವೇ? ಹೊಟ್ಟೆಯಚಿಂತೆ ! ಪುನಃ ವಿಠಲನ ಕಡೆಗೆ ತುಯ್ಯುತ್ತಿದ್ದ ಮನಸ್ಸು. ಪುರೋಹಿತ!—ಉಟ್ಟಬಟ್ಟೆ ನಿನ್ನದಲ್ಲ !! ಮುಂತಾದ ಮಾತುಗಳು ಬಂದು ಆ ಮನಸ್ಸನ್ನು ತಡೆಯುತ್ತಿದ್ದ ಬಗೆ. ಮಲ್ಲೇಶ ಕಂಗಾಲಾದನು. ಅವನ

ರೂಮಿನ ಮನೆಯವರ ಗಡಿಯಾರ ಕಷ್ಟಪಟ್ಟು ಹತ್ತುಗಂಟೆಯನ್ನು ಬಾರಿಸಿತು. ಇನ್ನು ಎರಡುಮೂರು ದಿನಗಳವರೆಗೆ ರಜ ಬೇಕೆಂದು ಕೇಳಿಕೊಂಡಿದ್ದದ್ದೂ ಮಲ್ಲೇಶನಿಗೆ ಮರೆತುಹೋಗಿದ್ದಿರಬೇಕು. ಇನ್ನೊಂದು ಸ್ವಲ್ಪ ಹೊತ್ತು ರೂಮಿನಲ್ಲೇ ಇದ್ದರೆ ವಿಠಲ ಬಂದರೂ ಬರಬಹುದೆನ್ನಿಸಿತು. ಅವನಲ್ಲಿದ್ದ ದಾಸ್ಯಮನೋವೃತ್ತಿ "ಯಾಕಪ್ಪ ಕಷ್ಟ; ಇದ್ದುಬಿಡು" ಎನ್ನುತ್ತಿತ್ತು. ಅವನಲ್ಲಿದ್ದ ಸ್ವತಂತ್ರಮನೋವೃತ್ತಿ, ಸ್ವಪ್ರಯತ್ನದಿಂದ ಹೊಟ್ಟೆತುಂಬಿಸಿಕೊಳ್ಳುವ ದಾರಿ ಹುಡುಕು ಮಲ್ಲು. ಹಸಿವಿನ ಬೆಳಕಿಲ್ಲದೇ ಹೋದರೆ ಆ ದಾರಿ ಕಣ್ಣಿಗೆ ಬೀಳುವುದೇ ಇಲ್ಲ—ಹಸಿದಿರುವಾಗಲೇ ಪ್ರಯತ್ನಮಾಡು—ರೂಮಿನಿಂದ ಹೊರಗೆ ನಡೆ. ಬೀದಿಬೀದಿ ಅಲೆ ಎನ್ನುತ್ತಿತ್ತು. ಇವೆರಡರ ಮಧ್ಯೆ ಇವೆರಡೂ ಶಕ್ತಿಯ ಮಿಶ್ರಮನೋವೃತ್ತಿಯೊಂದು "ಕಿರೀಕಾಟಿಗೆ ಹೋಗು. ಊಟ ಬಟ್ಟೆಗಾದರೂ ತಾಪತ್ರಯವಿರುವುದಿಲ್ಲ. ಅಲ್ಲಿ ಯಾರಿಗೂ ನೀನು ದಾಸನಾಗಿರಬೇಕಾದ್ದೇನಿಲ್ಲವಲ್ಲ" ಎಂದು ಬೋಧಿಸಿತು.

ಈ ಮೂರು ಯೋಚನೆಗಳ ತಿಕ್ಕಾಟದ ಮಧ್ಯೆ ಮಲ್ಲೇಶನಿಗೆ ತಾನು ತೆಗೆದುಕೊಂಡಿರುವುದು ಮೂರು ನಾಲ್ಕು ದಿನಗಳ ರಜವೆನ್ನುವುದು ನೆನಪಿಗೆ ಬಂದು, ಅವನು ಯಾವೊಂದು ಮನೋವೃತ್ತಿಯ ಕಡೆಗೂ ಓಲದೆರೂಮನ್ನು ಬಿಟ್ಟು ಹೊರಗೆ ಹೋದನು. ಸಂತೇಪೇಟೆಯ ಕಡೆಗೆ ತಿರುಗಿದನು. ಅದೇಕೋ ತನಗಿರುವ ವಿದ್ಯೆಯ ಯೋಗ್ಯತೆಗೆ ಸಂತೇಪೇಟೆಯಲ್ಲಿಯೇ ಯಾವುದಾದರೂ ಕೆಲಸ ಸಿಕ್ಕಬಹುದೆನ್ನಿಸಿತು. ಆ ದೃಷ್ಟಿಯಿಂದ ಆ ಬೀದಿಯಲ್ಲಿ ಒಂದು ದಿನವೂ ಅವನು ಸುಳಿದಿರಲಿಲ್ಲ.

ಒಬ್ಬರ ಮೈಯನ್ನೊಬ್ಬರು ಸೋಕಿಸಿಕೊಂಡು ಓಡಾಡುವಷ್ಟು ಜನ ಸಂದಣಿಯ ಆ ಬೀದಿಯಲ್ಲಿ ಇಷ್ಟು ಜನಕ್ಕೂ ಏನು ಕೆಲಸವೆಂದುಕೊಂಡನು ಮಲ್ಲೇಶ. ಅಲ್ಲಿ ಬೆವರು ಸುರಿಸುತ್ತಾ ಮೂಟೆ ಸಾಗಿಸುತ್ತಿದ್ದವರನ್ನು ನೋಡಿ ಮೈಸೂರಿಗೆಲ್ಲಾ ತಾನೊಬ್ಬನೇ ಸೋಮಾರಿಯೆಂದುಕೊಂಡನು. ಭಿಕಾರಿಗಳ ವೇಶದಲ್ಲಿದ್ದು ಸಾವಿರಾರು ರೂಪಾಯಿಗಳನ್ನು ಕೈಯಲ್ಲಿ ಹಿಡಿದು ಓಡಾಡುತ್ತಿದ್ದವರನ್ನು ನೋಡಿ ಅವರ ಬುದ್ಧಿವಂತಿಕೆಯನ್ನು ಮೆಚ್ಚಿ ಅಸೂಯೆ ಪಟ್ಟನು. ಶಖೆಯಿಲ್ಲದಿದ್ದರೂ 'ಫ್ಯಾನು' ಹಾಕಿ ಕುಳಿತಿದ್ದ ಸ್ಥೂಲ

ಕಾಯರಾದ ಸಾಹುಕಾರರುಗಳನ್ನು ಕಂಡು ಅವರೆಲ್ಲರೂ ತನ್ನಂತಹವರ ಬಳಿಯಲ್ಲಿರಬೇಕಾದ ಹಣವನ್ನೆಲ್ಲಾ ದೋಚಿಕೊಂಡಿರುವ ಕಳ್ಳರೆಂದು ತೀರ್ಮಾನಿಸಿಬಿಟ್ಟನು. ಜನಸಂದಣಿ ಕಳೆಯಿತು.

ಸ್ಕೂಲುಗಳು ಸಿಕ್ಕಿದವು. ಬನುಮಯ್ಯನವರ ಸ್ಕೂಲು, ದಳವಾಯ್ಸ್ ಸ್ಕೂಲುಗಳು. ಆಗಲೂ ಮಲ್ಲೇಶನಿಗೆ ಸಂತೇಪೇಟೆಯವರ ಬುದ್ಧಿವಂತಿಕೆಯನ್ನು ಖಂಡಿತ ಈ ಸ್ಕೂಲುಗಳು ಹುಡುಗರಿಗೆ ಹೇಳಿಕೊಡಲಾರವೆಂದೂ, ತಾನು ಹಾಳಾಬುದೇ ಇಂತಹ ಸ್ಕೂಲುಗಳನ್ನು ನಂಬಿಕೊಂಡೆಂದು ತರ್ಕಿಸಿದನು.

ಮುಂದೆ ಸಾಲಾಗಿ ನಾಲ್ಕು ದೇವಾಲಯಗಳು ಸಿಕ್ಕಿದವು. ಎರಡು ಈಶ್ವರದೇವಾಲಯ, ಒಂದುಹನುಮಂತ, ಒಂದು ವೇಣುಗೋಪಾಲ ಸ್ವಾಮಿಯದು. ಹಸಿದಿದ್ದ ಮಲ್ಲೇಶನಿಗೂ ನಗು ಬಂದಿತು. ಈ ದೇವರುಗಳಿಂದ ತಮಗೆ ಕಲ್ಯಾಣವಾಗುವುದೆಂದು ನಂಬಿ ಜನ ಹೆಜ್ಜೆಗೊಂದು ದೇವಾಲಯವನ್ನು ಕಟ್ಟಿಸಿ ತಮ್ಮ ದುಡ್ಡನ್ನು ಪೋಲುಮಾಡಿಕೊಳ್ಳುತ್ತಾರಲ್ಲ ಎಂದು ಮಲ್ಲೇಶ ಮಹಾಜನರ ಮೇಲೆಯೇ ತನ್ನ ಕನಿಕರವನ್ನು ಮಳೆಗರೆದನು. ಅವನಿಗೆ ದೇವರುಗಳು ಅರ್ಥವಿಲ್ಲದ ಕಲ್ಲುಬೊಂಬೆಗಳಂತೆ ಕಂಡವು. ವೇಣುಗೋಪಾಲಸ್ವಾಮಿಯನ್ನು ಹಾಸ್ಯಮಾಡುವವನಂತೆ, " ಈ ನನ್ನ ಹೊಟ್ಟೆಹಸಿವನ್ನು ಹೋಗಲಾಡಿಸಿದರೆ ನಿನ್ನನ್ನು ನಂಬುತ್ತೇನೆ, ನೋಡೋಣ ಅಡ್ವಾನ್ಸಾಗಿ ಒಂದು ನಮಸ್ಕಾರ ಇಟ್ಕೋ " ಎಂದು ಮನಸ್ಸಿನಲ್ಲಿ ಮಾಡಿಕೊಂಡು ನಮಸ್ಕರಿಸಿದನು.

ಅಲ್ಲಿಂದಾಚೆಗೆ ದೇವಸ್ಥಾನಗಳ ಕಾಟ ಮುಕ್ತಾಯವಾಗಿ ಹೋಟಲುಗಳ ಕಾಟ ಪ್ರಾರಂಭವಾಯಿತು. ಹಳೇಅಗ್ರಹಾರದ ಹೋಟಲುಗಳೆಂದರೆ ದೇಶಕ್ಕೇ ಪ್ರಸಿದ್ಧಿಯಾದವು. ಆದರೆ "ಬಿಟ್ಟಿ" ತಿಂಡಿಕೊಡುವುದರಲ್ಲಿ ಒಂದೂ ಹೆಸರುವಾಸಿ ಪಡೆದಿರಲಿಲ್ಲ. ಯಾವ ಹೊಟೇಲಿನಲ್ಲಿ ದೋಸೆ ಚೆನ್ನಾಗಿದ್ದರೇನು ಬಂತು. ಮಲ್ಲೇಶನನ್ನು ಒಳಕ್ಕೆ ಕರೆದುಕೊಡುವವರು ಯಾರೂ ಇರಲಿಲ್ಲ. ವೇಣುಗೋಪಾಲಸ್ವಾಮಿಯಲ್ಲಿ ಸತ್ವವಿಲ್ಲವೆಂಬುದು ತೀರ್ಮಾನವಾದಂತೆಯೇ ಆಯಿತು ಅವನ ಮಟ್ಟಿಗೆ.

ಅದು ಮುಗಿದಮೇಲೆ ಕಣ್ಣಿಗೆ ಬಿದ್ದದ್ದು ಗಳು, ಬೊಂಬು, ಹುರಿಗಳ ಅಂಗಡಿಗಳು. ಇನ್ನೊಂದು ಸ್ವಲ್ಪಹೊತ್ತು ಹೀಗೆಯೇ ಕಳೆದರೆ ತನ್ನನ್ನು ಕಟ್ಟಿ ಹೊತ್ತುಕೊಂಡು ಹೋಗಲು ಅವುಗಳ ಅಗತ್ಯವಿದೆ ಎಂದು ತಮಾಷೆಯಾಗಿ ಯೋಚಿಸಿಕೊಂಡನು. ಅಂದು ಯಾವುದೋ ಮುಸ್ಲಿಮರ ಹಬ್ಬವಿತ್ತೆಂದು ಕಾಣುತ್ತದೆ. ದೀವಟಿಗೆಯ ಬೀದಿಯಕಡೆಗೆ ಹೆಚ್ಚುಸಂಖ್ಯೆಯಲ್ಲಿ ಹೊಸಬಟ್ಟೆಗಳನ್ನುಟ್ಟು ಸಾಹೇಬರುಗಳು ಹೊರಟಿದ್ದರು. ಅವರ ಉಲ್ಲಾಸವನ್ನು ನೋಡುತ್ತಾ ಅವನಿಗೆ ಹಗ್ಗ, ಬೊಂಬುಗಳ ಮೇಲಿನ ಜ್ಞಾನ ಕಡಿದುಹೋಯಿತು. ಹಬ್ಬವನ್ನಾಚರಿಸುತ್ತಿದ್ದ ಜನರನ್ನು ಕರುಬುತ್ತಾ ಅವರು ಹೊರಟಿದ್ದ ದಾರಿಯಲ್ಲೇ ಹೊರಟನು.

ಅವನು ಆ ಮಾರ್ಗವನ್ನೇ ಹಿಡಿದು ಬಂದಿದ್ದ ಕಾರಣ ಏನೂ ಇರಲಿಲ್ಲ. ಅವನು ರೂಮನ್ನು ಬಿಟ್ಟು ಹೊರಟಿದ್ದೇನೋ "ನೌಕರಿ"ಯನ್ನು ಹುಡುಕುವುದಕ್ಕೆಂದು. ಆದರೆ ಆ ದಾರಿಯಲ್ಲಿ ಅವನಿಗೆಲ್ಲಿ ನೌಕರಿ ಸಿಕ್ಕುತ್ತಿತ್ತೋ ಅವನಿಗೇ ತಿಳಿಯದು ಅಂತೂ ಅಲ್ಲಿಯವರೆಗೆ ಬಂದುದಾಗಿತ್ತು. ಮುಂದಕ್ಕೆ ಹೋದರೂ ಅಷ್ಟೆ; ಹಿಂದಿರುಗಿದರೂ ಅಷ್ಟೆ. ಇಲ್ಲ—ಇಲ್ಲ ಯಾವುದೋ ಜ್ಞಾನದಲ್ಲಿ ಬಂದಿದ್ದ ಅವನು ಕೆಂಪಣ್ಣನಮನೆಯ ಬಳಿಯಿದ್ದನು. ಅವನ "ಖಾಲಿ ಖಾಲಿ"ಯಾಗಿ ತೋರುತ್ತಿದ್ದ ಶ್ವಾಸಕೋಶ ಅದನ್ನು ಜ್ಞಾಪಿಸಿತು. ಕೆಂಪಣ್ಣನ ಬಳಿ ಒಂದು ಬೀಡಿಯಾದರೂ ಸಿಕ್ಕೇಸಿಕ್ಕುತ್ತದೆ ಎಂದುಕೊಂಡು ಅವನ ಮನೆಗೆ ನಡೆದನು. ಆ ಹೊತ್ತಿನಲ್ಲಿ ಅವನು ಮನೆಯಲ್ಲಿರಬಹುದೇ ಇಲ್ಲವೇ ಎಂಬುದನ್ನು ಯೋಚಿಸಲಿಲ್ಲ. ಆದರೆ ಆ ದಿವಸ ಸರ್ಕಾರಿ ರಜವಾಗಿದ್ದು ಕೆಂಪಣ್ಣ ಮನೆಯಲ್ಲೇ ಇದ್ದು ಮಲ್ಲೇಶನಿಗೆ ಬೀಡಿ ಸಿಕ್ಕಿಯೇ ಸಿಕ್ಕಿತು.

ಅದಕ್ಕಿಂತಲೂ ಮುಖ್ಯವಾಗಿ ಕೆಂಪಣ್ಣ ಬಲವಂತಮಾಡಿ ಮಲ್ಲೇಶನನ್ನು ಊಟಕ್ಕೆಬ್ಬಿಸಿದ. ಮಲ್ಲೇಶನಿಗೆ ಬಲು ನಾಚಿಕೆಯಾಯಿತು. ಏಕೆಂದರೆ ಅವನು ಊಟಮಾಡಲು ತಯಾರಾಗಿದ್ದನು. ಬಲವಾದ ಬಲವಂತ ಬಂದಮೇಲೆಯೇ ಮಲ್ಲೇಶ ಮೆಲ್ಲನೆ ಎದ್ದನು. ಕಡಲೇಕಾಳು, ಹಲಸಿನ ಬೀಜ ಹಾಕಿ ಮೇಲೋಗರ ಮಾಡಿತ್ತು. ಮಲ್ಲೇಶ ಏಳುವ ಸೂಕ್ಷ್ಮ

ಕಂಡ ಒಡನೆಯೇ ಕೆಂಪದೇವಿ ಬಲುಬೇಗ ಒಂದು ಪಾವಕ್ಕಿ ಹಾಕಿ ಬಸಿದಿದ್ದಳು. ಆದರೆ ಎಷ್ಟು ಬೇಡವೆಂದರೂ ಕೇಳದೇ ಮಲ್ಲೇಶ ಹಿಟ್ಟನ್ನೇ ಕೇಳಿದನು. ಅದರ ರುಚಿಯ ಬಗ್ಗೆ ಒಂದು ಉಪನ್ಯಾಸ ಕೊಟ್ಟನು. ಬಲು ಸಂಕೋಚದಿಂದ ಕೆಂಪದೇವಿ ಅವನ ಹರಿವಾಣಕ್ಕೆ ಒಂದುಮುದ್ದೆಯನ್ನಿಟ್ಟಳು.

ವೇಣುಗೋಪಾಲಸ್ವಾಮಿಯ ಜ್ಞಾಪಕವೇ ಇಲ್ಲದೆ ಮಲ್ಲೇಶ ಗಬಗಬನೆ ನುಂಗಿದನು. ಸತ್ಯವಾಗಿ ಹೇಳಬೇಕಿದ್ದರೆ ಅವನಿಗೆ ಇನ್ನೂ ಒಂದು ಮುದ್ದೆ ಬೇಕಾಗಿತ್ತು. ಅನ್ನ ಮಜ್ಜಿಗೆಯಾದ ಬಳಿಕ ಕೈತೊಳೆದು ಉಳಿದ ಹೊಟ್ಟೆಗೆಲ್ಲಾ ನೀರನ್ನು ತುಂಬಿದನು. ಆ ನೀರಿಗೆ ಸಕ್ಕರೆ ಹಾಕಿದ್ದಂತಿತ್ತು.

ಊಟ ಮಾಡಿದ ಜಾಗದಲ್ಲೇ ಹರಿವಾಣಗಳನ್ನು ಎತ್ತಿದ ಮೇಲೆ ಕೆಂಪಣ್ಣ ಮಲ್ಲೇಶರು ಮಾತಿಗೆ ಕುಳಿತರು. ಮಲ್ಲೇಶನಿಗೂ ಕೆಲಸವಿರಲಿಲ್ಲ. ಕೆಂಪಣ್ಣನಿಗೆ ಸಂಜೆ ಐದು ಘಂಟೆಯ ಮೇಲೆ ಸಾಹೇಬರ ಮನೆಗೆ ಸ್ವಲ್ಪ ಹೋಗಬೇಕಾಗಿದ್ದಿತು. ಅದನ್ನು ಹೇಳಿದಾಗಲೇ ಕೆಂಪಣ್ಣ 'ತಾಬೇದಾರಿ' ಎಂಬ ಮಾತನ್ನು ಪ್ರಯೋಗಿಸಿದ್ದು.

'ಮಲ್ಲೇಸು, ಈ ತಾಬೇದಾರಿ ಮಾತ್ರ ನಮ್ಮ ಸತ್ರೂಗೂ ಬೇಡಾ. ಆದ್ರೇನು ಮಾಡವೇ ಹಾಳು ಹೊಟ್ಟೆ! ನನಗೂ ಏನಾದರೂ ನಿನ್ನಂಗೆ ಜಮೀನ್‌ಸಮೀನಿದ್ದಿದ್ರೆ ಈ ಮೈಸೂರು ಕಡೆ ತಲೆ ಆಕಂಡು ಮಲೀಕ ತಿರ್‍ಗಿಲ್ಲಾ!'

'ಜಮಾನು–ಸಮಾನು! ಯಾವ ಮಹಾ ಕೆಂಪಣ್ಣ. ನಮ್ಮಂತಾವ್ರಿಗೆ ಇರದೂ ಒಂದೇ ನಿನ್ನಂತಾವರಿಗೆ ಇಲ್ದೇ ಇರದೂ ಒಂದೆ. ನಮ್ಮವ್ವ ಆ ಜಮಾನಿನ ಮೇಲೆ ಕೊಡೋರು ಸಿಕ್ಕವರೇ ಅಂತ ಸಿಕಾಪಟ್ಟೆ ಸಾಲ ಮಾಡ್ಬಿಟ್ಟಿದ್ದಾಳೆ. ಅದ್ಯಾವಾಗ ಅದ್ನೆಲ್ಲಾ ತೀರಿಸಿ ಆ ಜಮಾನುಗಳನ್ನ ನಮ್ಮದು ಅನ್ಕಳದು?'

'ನೀನು ಮೈಸೂರ್‍ನಲ್ಲಿ ಕೂತ್ಕಂಡ್ರೆ ಆವಮ್ಮ ಎಂಗೆ ತೀರ್‍ಸದು ಮಲ್ಲು. ನೀನು ಇವತ್ತು ಮನಸುಮಾಡಿ ಊರಿಗೆ ಹೊಂಟೋಗು. ಇನ್ನೊಂದೆರಡು ವರ್ಸದಲ್ಲಿ ತೀರಿಸ್ಬುಡಬಹುದು.'

'ಇಲ್ಲ ಕೆಂಪಣ್ಣ. ನಾನು ಇಲ್ಲೇ ಇದ್ದೂ ಸಂಪಾದನೆ ಮಾಡಿ ಸಾಲಾ ತೀರಿಸಬೇಕೂಂತ ಮಾಡೀದೀನಿ.'

'ಅದಕ್ಕೆ ನಿನ್ನ ಓದೇ ಮುಗಿದಿಲ್ಲ.'

'ಅಯ್ಯೋ ನನ್ನ ಓದು ಮುಗಿದು ಎಷ್ಟೋ ಕಾಲವಾಯ್ತು ಕೆಂಪಣ್ಣ.'

'ಓ ಅಂಗಾದ್ರೆ ಈಗ ಕೆಲಸ ಉಡುಕ್ತಾ ಇದೀಯೋ ಅನ್ನಪ್ಪ.'

'ಎಲ್ಲಿ ಹುಡುಕ್ಲೀ ಹೇಳು. ಬೀಎ, ಎಮ್ಮೆ ಮಾಡ್ದೋರೇ ಅಲೀತಾ ಇದಾರೆ'

'ಅದ್ಯಾಕೆ ಬಾ-ನಮ್ಮ ಸಾಹೇಬರ ತಾಕ್ಕೆ. ಕರ್ಕಂಡೋಯ್ತೀನಿ. ನಿನ್ನ ಯೋಗ್ತೇಗೆ ತಕ್ಕ ಕೆಲಸ ಸಿಕ್ಕೋಅಂಗೆ ಮಾಡ್ತೀನಿ.'

'ನಿನ್ನ ಮಾತು ನಿಮ್ಮ ಸಾಹೇಬರು ಕೇಳ್ತಾರ ಕೆಂಪಣ್ಣ ?'

'ಕೇಳೀ ಕೇಳ್ತರೆ ಮಲ್ಲು. ಏನೂಂತ ತಿಳ್ಕಂಡಿಧೀಯೆ. ನಮ್ಮ ಸಾಹೇಬರ ಹೆಂಡತಿ ಏನೂ ತಿಳೀದೇ ಇದ್ದ ಅಸಗೂಸು. ಅದರ ಅತ್ರ ಒಂದು ಮಾತು ಏಳಿದ್ರಾಯ್ತು. ಆಗ್ದೇಇದ್ದ ಕೆಲಸವೆಲ್ಲ ಆಯ್ತದೆ.'

'ಯಾಕಾಗಬಾರದು ?' ಎನ್ನಿಸಿತು ಮಲ್ಲೇಶನಿಗೆ. ಪ್ರಯತ್ನಮಾಡಿ ನೋಡೋಣವೆನ್ನಿಸಿತು. ಸಿಕ್ಕಿದ್ದಷ್ಟು ಸಂಬಳ ಸಿಕ್ಕಲಿ. ಪುನಃ ಇನ್ನೊಂದು ಸರಿಯಾದ ಕೆಲಸ ನೋಡಿಕೊಳ್ಳುವವರೆಗೆ ಹೊಟ್ಟೆ ಬಟ್ಟೆಗಾಗಲಿ ಎನ್ನಿಸಿತು. ಕೆಂಪಣ್ಣನ ಮಾತಿಗೆ ಮಲ್ಲೇಶ ಒಪ್ಪಿದನು. ಮಾರನೆಯ ದಿನವೇ ಅರ್ಜಿ ಬರೆದುಕೊಂಡು ಬರುವುದಾಗಿ ಹೇಳಿದನು. ಕೆಂಪಣ್ಣ ಆ ದಿನ ಸಂಜೆಯೇ ಸಾಹೇಬರ ಹೆಂಡತಿಯ ಹತ್ತಿರ ಈ ವಿಷಯ ತಿಳಿಸಿರುವುದಾಗಿ ಮಾತು ಕೊಟ್ಟನು.

ಆ ಉತ್ಸಾಹದಲ್ಲಿ ಮಲೇಶನಿಗೆ ರಾತ್ರಿಯ ಊಟವೂ ಬೇಕಾಗಲಿಲ್ಲ. ಮಾರನೆಯದಿನ ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ತನಗೆ ಬಂದಂತೆ ಬರೆದು ಕೊಂಡಿದ್ದ ಅರ್ಜಿಯನ್ನು ತೆಗೆದುಕೊಂಡು ಕೆಂಪಣ್ಣನ ಮನೆಗೆ ಬಂದನು. ಕೆಂಪದೇವಮ್ಮ ಮಲ್ಲೇಶನಿಗೆ ರಾಗಿರೊಟ್ಟಿಯನ್ನು ಕೊಟ್ಟಳು. ವಿಠಲನು ಕೊಡಿಸುತ್ತಿದ್ದ 'ಮಸಾಲೆ' ಗಳಿಗಿಂತ ಅದು ಎಷ್ಟೋ ರುಚಿಕರವಾಗಿ ತೋರಿತು. ಮೇಲಾಗಿ ಕೆಂಪಣ್ಣನೂ ಸಾಹೇಬರ ಹೆಂಡತಿಗೆ ಎಲ್ಲವನ್ನೂ ಹೇಳಿರು

ವುದಾಗಿಯೂ, ಅವರು ನಿನ್ನೆ ರಾತ್ರಿಯೇ ಆಜ್ಞೆ ಮಾಡಿರುತ್ತಾರೆಂದೂ ಶುಭ ವರ್ತಮಾನವನ್ನು ಕೊಟ್ಟಿದ್ದನು.

ಇಬ್ಬರೂ ಅತಾರಾ ಕಛೇರಿಗೆ ಹೊರಟರು. ಕೆಂಪಣ್ಣನಿಗೂ ತುಂಬಾ ಉತ್ಸಾಹವಿತ್ತು. ತನ್ನ ಹೆಂಡತಿಯ ಊರಿನವನೊಬ್ಬನಿಗೆ ತನ್ನಿಂದ ಉಪಕಾರವಾಗುವುದಲ್ಲ— ತನ್ನ ಹೆಂಡತಿಗೆ ತನ್ನಲ್ಲಿ ಒಂದಷ್ಟು ಗೌರವ ಹೆಚ್ಚುವುದಲ್ಲ ಎಂಬುದೇ ಆ ಉತ್ಸಾಹದ ಮೂಲ. ಅಂತಹಾ ಉತ್ಸಾಹದ ಮಾತುಗಳ ಮಧ್ಯೆ ಮಲ್ಲೇಶ ಕೇಳಿದ ಐದು ರೂಪಾಯಿನ ಸಾಲಕ್ಕೂ ಒಪ್ಪಿಕೊಂಡು ಬಿಟ್ಟನು. ಸಂಬಳ ಬಂದಕೂಡಲೇ ಕೊಡುತ್ತಾನೆ. ಅಲ್ಲಿಯವರೆಗೆ ತನ್ನ ಮನೆಯಲ್ಲಿರುವುದು ಅವನಹತ್ತಿರವಿರಲಿ ಎಂದುಕೊಂಡಿರಬೇಕು ಅವನು.

ಸಬ್ ಡಿವಿಜನ್ ಆಫೀಸಿಗೆ ಎಲ್ಲರಿಗಿಂತ ಮುಂಚೆ ಹೋಗುತ್ತಿದ್ದವನೇ ಕೆಂಪಣ್ಣ. ಅವನು ಹೋಗಿ ಆಫೀಸಿನ ಕಸವನ್ನೆಲ್ಲಾ ತೆಗೆದು ತಾನು ಆಫೀಸಿನ ಎಲ್ಲಾ ಕಾಗದ ಪತ್ರಗಳನ್ನು ಮುಟ್ಟಬಲ್ಲೆನೆಂಬುದನ್ನು ತೋರಿಸಿದನು. ಕೊನೆಗೆ ತನ್ನ ಅಧಿಕಾರ ಪ್ರದರ್ಶನದ ಪರಮಾವಧಿಯಲ್ಲಿ ಮಲ್ಲೇಶನನ್ನು ಸಬ್ ಡಿವಿಜನ್ ಆಫೀಸರು ಕುಳಿತುಕೊಳ್ಳುವ ಪೀಠದಲ್ಲಿ ಕೂರಿಸಿದನು. ಏಕಪ್ರಕಾರವಾಗಿ ಹತ್ತು ನಿಮಿಷಗಳು ಮಲ್ಲೇಶ ಸಬ್ ಡಿವಿಜನ್ ಆಫೀಸರೇ ಆಗಿ ಹೋಗಿದ್ದನು.

ಸುಮಾರು ಒಂದು ಘಂಟೆಯ ಹೊತ್ತಿಗೆ ಸಾಹೇಬರು ಆಫೀಸಿಗೆ ಬಂದರು. ಅವರು ಬಂದ ಮೇಲೆ ಕೆಂಪಣ್ಣ, 'ನಾಯಿಮರಿ'ಯಾಗುತ್ತಾನೆಂದು ಮಲ್ಲೇಶ ತಿಳಿದದ್ದು ಸುಳ್ಳಾಯಿತು. ಅವರು ಬಂದಮೇಲೂ ಕೆಂಪಣ್ಣ ಅಷ್ಟೇ ಸಲೀಸಾಗಿದ್ದನು. ಅವನೊಡನೆ ಸಾಹೇಬರೂ ಅಷ್ಟೇ ಸರಾಗವಾಗಿ ಮಾತನಾಡುತ್ತಿದ್ದರು. ಕೆಂಪಣ್ಣ ಮಲ್ಲೇಶನನ್ನು ಅವರೆದುರಿಗೆ ಕರೆದುಕೊಂಡು ಹೋದನು. ಮಲ್ಲೇಶ ಅರ್ಜಿಯನ್ನು ಅವರ ಕೈಯಿಗೆ ತಲುಪಿಸಿದನು. ಅವರು ಅರ್ಜಿಯ ಇಂಗ್ಲೀಷನ್ನು ನೋಡಿ ದೊಡ್ಡ ಮುಗುಳ್ನಗೆಯೊಂದನ್ನು ಹೊರಸೂಸಿದರು. ಅವರ ಮನಸ್ಸಿನಲ್ಲಿ ಎಲ್ಲವೂ ಹಿಂದಿನ ರಾತ್ರಿಯೇ ತೀರ್ಮಾನವಾಗಿದ್ದುದರಿಂದ ಎರಡೇ ಮಾತಿನಲ್ಲಿ ಮಲ್ಲೇಶನ ಕೆಲಸ ಮಾಡಿ ಕೊಟ್ಟರು.

'ಮಲ್ಲೇಶಯ್ಯ, ನಮ್ಮ ಆಫೀಸಿನಲ್ಲಿ ಅಟೆಂಡರ್ ಕೆಲಸ ಒಂದದೆ. ಅದೂ ಟೆಂಪ್ರರಿ. ಸಂಬಳ ಇಪ್ಪತ್ತೇಳುರೂಪಾಯಿಯಾಗಬೋದು. ಎರಡು ಮೂರು ತಿಂಗಳು ಮಾಡು. ಆಮೇಲೆ ಖಾಯಂ ಮಾಡ್ತವೆ. ಆಗಬೋದಾ' ಎಂದರು.

'ತಮ್ಮ ಇಷ್ಟ' ಎಂದು ಮಲ್ಲೇಶ ತಲೆ ಕೆರೆದ. ಸಾಹೇಬರು 'ನೀನೇನು ಮಾಡಬೇಕು ಅನ್ನದ್ನ- ಕೆಂಪಯ್ಯ ಹೇಳ್ತನೆ' ಎಂದು ತಮ್ಮ ಕೆಲಸದಲ್ಲಿ ತೊಡಗಿದರು. ಕೆಂಪಣ್ಣನ ಕಣ್ಣುಸನ್ನೆಯ ಪ್ರಕಾರ ಮಲ್ಲೇಶ ಹೊರಗೆ ಬಂದನು.

ಮಾರನೆಯ ದಿನ ಬೆಳಿಗ್ಗೆ ಕೂಡ ಮಲ್ಲೇಶನಿಗೆ ಕೆಂಪಣ್ಣನ ಮನೆಯಲ್ಲೇ ಊಟವಾಯಿತು. ಕೆಂಪಣ್ಣನು ಮಾತು ಕೊಟ್ಟಿದ್ದ ರೀತಿಯಲ್ಲಿ ಮಲ್ಲೇಶನಿಗೆ ಐದು ರೂಪಾಯಿಗಳೂ ಸಂದಾಯವಾಯಿತು. ಪುನಃ ಇಬ್ಬರೂ ಹೊರಟರು. ಆದರೆ ಆತಾರಾ ಕಛೇರಿಯ ಕಡೆಗಲ್ಲ. ಮಲ್ಲೇಶನಿಗೆ ಕೆಂಪಣ್ಣ ಹಿಡಿದ ದಾರಿಯನ್ನು ಕಂಡು ಆಶ್ಚರ್ಯವಾಯಿತು.

'ಇದೆಲ್ಲಿಗೆ ಮಲ್ಲಣ್ಣ ! ಕೋರ್ಟಿನ ಕಡೆಗೆ ಹೊರಟರೊಹಾಗೆ ಕಾಣ್ತಾ ಇದೆಯಲ್ಲ.'

'ಊ ಮಲ್ಲೇಸು. ಕೋರ್ಟಿನ ಅತ್ತಿರವೇ ನಮ್ಮ ಸಾಹೇಬರ ಮನೆ ಇರದು.'

'ಅವರ ಮನೆಗ್ಯೊಗ್ಬುಟ್ಟು ಹೋಗಬೇಕೋ.... ಅದ್ಸರಿ ಕೆಂಪಣ್ಣ ನಿಮ್ಮ ಸಾಹೇಬರೂ ನಮ್ಮ ಹಾಗೇನೇ 'ಒಂದದೆ' 'ಮಾಡ್ತವೆ' ಅಂತ ಮಾತಾಡ್ತರಲ್ಲ. ಅವರ್ಯಾವಜನ ? ನಮ್ಮೋರೇನಾ ? '

'ಅಲ್ಲಾ-ಅರಸುಗಳು. ಮಾತುಕತೆ ಆಚಾರಯವಹಾರವೆಲ್ಲಾ ನಮ್ಮಂಗೇ ಅವರದು'

'ಹೆಸರು'

'ಚನ್ನರಾಜೇ ಅರಸ್ ಬುದ್ಧಿಯೋರೂಂತ'

'ಪರವಾಗಿಲ್ಲ. ಜೊರಾಗವ್ರೆ ! ವಯಸ್ಸೇನು ಐವತ್ತೈದಿರಬಹುದಲ್ವೆ?'

'ಐ. ಎಲ್ಬಂತು ! ನಲವತ್ತು-ನಲವತ್ತೊಂದು ಇರಭೋದು. ಆದ್ರೂ

ಏನನ್ಯಾಯಾಂತಿ ಮಲ್ಲೇಸು. ಅವರಿಗೆ ಈಗಿರೋ ಎಂಡ್ತಿಗೆಷ್ಟು ವರ್ಸ ಅಂತೀ ಯೇ ಹದಿನೈದೋ ಹದಿನಾರೋ ಇರಬೇಕು ಅಷ್ಟೆ. ಮೂರನೇ ಲಗ್ನವಂತೆ'

'ಓ.... ನಿನಗೆ ಈಗ ಅವರ್ಮನೇಲಿ ಎಷ್ಟೊತ್ತಿನ ಕೆಲಸ ಅದೆ ?'

'ನನಗೆಂತಾ ಕೆಲಸ? ಅಲ್ಲಿರೋದು ನಿನ್ನ ಕೆಲಸವೇ. ನೋಡ್ದ್ಯಾ ನಿನಗೆ ಏಳದೇ ಮರ್ತ್ತುಬುಟ್ಟಿದ್ದೆ. ನೀನು ಅವರಿಗೆ ಸಬ್ ಡಿವಿಜನ್ ಆಫೀಸ್‌ನ ಅಟೆಂಡ್ರು. ಸಂಬಳ ಸರ್ಕಾರದ್ದು. ಚಾಕರಿ ಸಾಹೇಬರ ಮನೇದು. ಅದಕ್ಕೆ ನಿನಗೆ ಅವರ ಮನೆ ತೋರಿಸಿ, ಮನೆಯವರ 'ಮೊಕಾಬಿಲೆ' ಮಾಡಕ್ಕೇ ನಾನು ಬತ್ತಾ ಇರದು ಅಷ್ಟೆ.'

ಮಲ್ಲೇಶನಿಗೆ ಹೇಗೆಹೇಗೋ ಆಯಿತು. ಸರ್ಕಾರಿ ಸಂಬಳ! ಸಾಹೇಬರ ಮನೆ ಚಾಕರಿ!! ಒಪ್ಪಬೇಕೋ ಬೇಡವೋ. ಇದೆಂಥಾ ಅವಮಾನದ ಕೆಲಸ ? ಆಗುವುದಿಲ್ಲ ಎಂದುಬಿಡೋಣವೇ ? ಕೈಯಲ್ಲಿ ಐದು ರೂಪಾಯಿದೆ ಎಂಬ ಅಹಂಕಾರದಿಂದ ಆಗುವುದಿಲ್ಲವೆಂದುಬಿಟ್ಟರೆ ಅದು ಮುಗಿದಮೇಲೆ ಗತಿ ? ಏನಾದರಾಗಲಿ ಈ ಕೆಲಸ ಬಿಡಬಾರದು ! ಮಲ್ಲೇಶ ಬೇಗ ಒಂದು ನಿರ್ಧಾರಕ್ಕೆ ಬಂದಿದ್ದನು. ಇಪ್ಪತ್ತೇಳು ರೂಪಾಯಿಗಳು ಅವನಿಗೆ ಇನ್ನೂರೆಪ್ಪತ್ತು ರೂಪಾಯಿಗಳಾಗಿತ್ತು.

ಸಾಹೇಬರ ಮನೆ ಸಿಕ್ಕಿತು. 'ನಾಯಿಗಳಿವೆ ಎಚ್ಚರಿಕೆ' ಎನ್ನುವ ಬೋರ್ಡನ್ನು ಕಟ್ಟಿದ್ದ ಗೇಟನ್ನು ಕೆಂಪಣ್ಣ ಮೀಟಿದನು. ಅದು 'ಕಿರ್ರೋ' ಎಂದು ಕೂಗಿಕೊಂಡಿತು. ಪುಟ್ಟದಾದರೂ, ಬಲು ಅಂದವಾಗಿಟ್ಟುಕೊಂಡಿದ್ದ ಬಂಗಲೆ. ಒಂದು ದೊಡ್ಡ ಕರಿಯನಾಯಿ ಇವರಕಡೆಗೆ ಓಡಿಬಂದಿತು. ಕೆಂಪಣ್ಣನನ್ನು ನೋಡಿ ಬಾಲವನ್ನು ಆಡಿಸಿತು. ಮಲ್ಲೇಶನನ್ನು ನೋಡಿ ಮನಸ್ಸಿನಲ್ಲೇ 'ಗರ್' ಎಂದುಕೊಂಡಿತು. ಕೆಂಪಣ್ಣ ನೇರವಾಗಿ ಮನೆಯೊಳಕ್ಕೆನುಗ್ಗಿದನು. ಮಲ್ಲೇಶ ಅವನನ್ನು ಬಹಳ ನಿಧಾನವಾಗಿ ಹಿಂಬಾಲಿಸಿ ಹೋಗಿ ಮನೆಯ 'ವರಾಂಡ'ಕ್ಕೆ ಹತ್ತಿ ನಿಂತುಕೊಂಡಿದ್ದನು.

ಒಳಗಿಂದ ಕೆಂಪಣ್ಣನೊಡನೆ ಮಾತನಾಡಿಕೊಂಡು ಒಂದು ಹುಡುಗಿ ತನ್ನ ಕಡೆಗೆ ಬರುತ್ತಿರುವಂತೆ ಮಲ್ಲೇಶನಿಗೆ ತೋರಿತು. ಅದರ ಸ್ವರ ಮಲ್ಲೇಶನಿಗೆ ಯಾವುದೋ ಒಂದು ರೀತಿಯ ನೆನಪನ್ನು ತಂದಿತು.

ಆ ಹುಡುಗಿ ಒಳಬಾಗಿಲಿನಿಂದ ಹೊರಬಂದು ಎದುರಿಗೆ ನಿಂತಕೂಡಲೇ ಮಲ್ಲೇಶ ಬಿಟ್ಟಕಣ್ಣಿನ ಪ್ರತಿಮೆಯಾದನು. ಬಂದವಳು ಶಾಮವರ್ಣದ ದೊಡ್ಡ ಕಣ್ಣಿನ, ಪುಟ್ಟ ಆಕಾರದ, ಹೊಸ ಯೌವನದ ಹುಡುಗಿ—'ಪಚ್ಚಿ'! ಆಕೆಯೂ ಮಲ್ಲೇಶನನ್ನು ಅರೆಘಳಿಗೆ ನೋಡಿದನಂತರ ಗುರುತು ಹಿಡಿದಳು. ಕೆಂಪಣ್ಣ ಮಾತನಾಡುತ್ತಲೇ ಇದ್ದನು. ಪಚ್ಚಿಯೊಬ್ಬಳಿಗೆ ಆ ಮಾತುಗಳು ಅರ್ಥಂಬರ್ಥ ಅರ್ಥವಾಗುತ್ತಿದ್ದವು. ಮಲ್ಲೇಶನಿಗೆ ಅದರ ಪರಿವೆಯೇ ಇರಲಿಲ್ಲ. ಅವನ ಮೆದುಳು ಬೆಂಕಿಯಲ್ಲಿ ಬಿದ್ದ ಹಕ್ಕಿಯಂತಾಗಿತ್ತು.

ಹೇಗೋ, ಕೆಂಪಣ್ಣನ ಕರ್ತವ್ಯ ಮುಗಿಯಿತು. ಅವನು ಹೇಳಬೇಕಾದುದನ್ನು ಹೇಳಿ ಆಫೀಸಿಗೆ ಹೊರಟುನಿಂತನು. ಮಲ್ಲೇಶ ಮಂಕನಂತೆ ಅವನ ಹಿಂದೆಯೇ ಹೊರಬರುವುದರಲ್ಲಿದ್ದನು. ಕೆಂಪಣ್ಣ ಅವನನ್ನುಅಲ್ಲಿಯೇ ಇರಹೇಳಿ ತಡೆದನು. ಮಲ್ಲೇಶ ನಿಂತಲ್ಲಿಯೇ ನಿಂತನು. ಕೆಂಪಣ್ಣ ಹೊರಟು ಹೋದನು.

ವರಾಂಡದಿಂದ ಮನೆಯೊಳಕ್ಕೆ ಹೋದ ಪಚ್ಚಿಯನ್ನು ಪುನಃ ನೋಡಬೇಕಾದ ಅವಶ್ಯಕತೆಯೂ ಅವನಿಗಿರಲಿಲ್ಲ. ಪಚ್ಚಿ–ಸಾಹೇಬರ ಮೂರನೆಯ ಹೆಂಡತಿ! ಮಲ್ಲೇಶನಿಗೆ ನಂಬಿಕೆ ಸಾಲದಿದ್ದರೂ ನಿಜವಾದ ಸಂಗತಿಯಾಗಿತ್ತು. ತನ್ನ ಮುಂದಿನ ಕರ್ತವ್ಯವೇನೆಂಬುದನ್ನೇ ತಿಳಿಯದೇ ನಿಂತ ಅವನಿಗೆ ದಾರಿ ತೋರಿಸಲು ಒಳಗಿನಿಂದ ಬಂದರು ಕೆಂಪಮ್ಮಣ್ಣಿಯವರು! ಸುಮಾರು ಹತ್ತುಹನ್ನೆರಡು ಗಜ ದೂರದಿಂದಲೇ ಕೆಂಪಮ್ಮಣ್ಣಿಯವರನ್ನು ಕಂಡ ಮಲ್ಲೇಶನಿಗೆ ಹಿಡಿದಿದ್ದ ಭೂತ ಬಿಟ್ಟುಹೋಯಿತು. ಕೆಂಪಮ್ಮಣ್ಣಿಯವರ ಮುಖದಮೇಲಿದ್ದ ಮುಗುಳುನಗೆ ಅವನ ಪಾಲಿಗೆ ಸಾವಿರ ನಾಲಿಗೆಯ ಚಾಟಿಯ ಏಟಾಯಿತು. ಅವರು "ಮಲ್ಲಾ! ಬಾರೋ ಇಲ್ಲಿ" ಎಂದು ಕರೆದರು. ಅದು ಅವನ ಬಾಯಿಗೆ "ಗುಲಾಮ ಬಾಯಿಲ್ಲಿ" ಎಂದಂತಾಯಿತು. ಅವನಿಗೆ ಅಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಕೆಂಪಮ್ಮಣ್ಣಿಯವರ ಮಾತಿಗೆ ಕಿವುಡನಾಗಿ ಗೇಟಿನಕಡೆಗೆ ಓಡಿದನು. ಕರಿಯನಾಯಿಗೆ ಅವನ ಹೆಜ್ಜೆಯ ವೇಗ ರೇಗಿಸಿತೇನೋ ಅದು ಅವನನ್ನು ಅಟ್ಟಿಸಿಕೊಂಡುಬಂದಿತು. ಅಷ್ಟರಲ್ಲಿ ಅವನು ಗೇಟನಿಂದ ಪಾರಾಗಿಹೋಗಿದ್ದನು. ನಾಯಿಗೆ ಗೇಟ

ನಿಂದಾಚೆಗೆ ಹೋಗುವಷ್ಟು ಧೈರ್ಯವಿರಲಿಲ್ಲವೇನೋ ಹಿಂದಕ್ಕೆ ಹೊರಟು ಹೋಯಿತು. ಕೆಂಪಮ್ಮಣ್ಣಿಯವರು ಗಹಗಹಿಸಿ ನಗುತ್ತಾ ಪಚ್ಚಿಗೆ ಏನೋ ಹೇಳಿಕೊಂಡು ಮನೆಯೊಳಕ್ಕೆ ಹೋದುದು ಮಲ್ಲೇಶನಿಗೆ ಎಲ್ಲಿಯೋ ಕೇಳಿ ದಂತಾಯಿತು. ಅವನು ಹಿಂದಿರುಗಿ ನೋಡದೇ ಸನ್ನಿವೇಶದಿಂದ ದೂರ ವಾದನು.

ಅವನಿಗೆ ಈ ಅನುಭವದಿಂದ ಜನ್ಮಾವಧಿ ಇನ್ನೊಬ್ಬರ ಕೈಕೆಳಗಿನ ಸಂಬಳದಿಂದ ಜೀವಿಸಬಾರದೆಂಬ ಸಿದ್ಧಾಂತ ಬಂದುಹೋಯಿತು. ಒಂದೇ ಒಂದು ನಿಮಿಷವಾದರೂ ಕೆಂಪಮ್ಮಣ್ಣಿಯವರಿಗೆ ತಾನು ಆಳಾಗಿ ಹೋಗಿದ್ದೆ ನಲ್ಲಾ ಎಂಬ ಭಾವನೆ ಅವನಲ್ಲಿ ಆಜನ್ಮಪರ್ಯಂತ ಉಳಿಯುವಂತಹ ನೆನಪಾಗಿ ಹೋಯಿತು. ಇದರ ಜೊತೆಗೆ ಕೆಂಪಣ್ಣನ ದಾಕ್ಷಿಣ್ಯ ಬೇರೇ ವೆಚ್ಚವಾಗಿ ಹೋಗಿತ್ತು. ಅವನು ತನ್ನನ್ನು ಎಷ್ಟು ಶಪಿಸಬಹುದು ? ಎಂಬ ಯೋಚನೆ ಬೇರೆ ಅವನನ್ನು ಹಿಂಸಿಸುತ್ತಿತ್ತು.

ಹೇಗೋ ಕೆಂಪಣ್ಣನು ಕೊಟ್ಟಿದ್ದ ಐದು ರೂಪಾಯಿಗಳು ಜೇಬಿನ ಲ್ಲಿತ್ತು. ಅದರಲ್ಲಿ ತಾನಿನ್ನು ಹದಿನೈದು ದಿನಗಳನ್ನು ತಳ್ಳಬಹುದೆಂದು ಕೊಂಡನು. ಅಷ್ಟರೊಳಗೆ ಸ್ವತಂತ್ರವಾದದ್ದೊಂದು ಉದ್ಯೋಗವನ್ನು ಹುಡುಕಿಕೊಳ್ಳಬೇಕೆಂದು ಗಟ್ಟಿಮಾಡಿಕೊಂಡನು. ಆ ಐದು ರೂಪಾಯ ನ್ನೇನೋ ಅವನು ತೀರ್ಮಾನ ಮಾಡಿದ್ದಂತೆ ದಿನಕ್ಕೆ ನಾಲ್ಕಾಣೆಯಂತೆಯೇ ವೆಚ್ಚ ಮಾಡುತ್ತಿದ್ದನು. ಎಂಟು ದಿವಸಗಳು ಸ್ವತಂತ್ರ ಉದ್ಯೋಗ ವೆಂದರೆ ಯಾವುದು ? ಎಂಬುದನ್ನು ಕಂಡುಹಿಡಿದುಕೊಳ್ಳುವುದರಲ್ಲೇ ಕಳೆದು ಹೋಯಿತು. ಇನ್ನುಳಿದ ದಿನಗಳು, ಅವುಗಳು ಎಲ್ಲೆಲ್ಲಿವೆ ಎಂಬುದನ್ನು ಹುಡುಕಿಕೊಂಡು ಹೋಗಿ, ಕೇಳಿ, ತನಗೆ ಅದು ದೊರೆಯಲಾರದೆಂಬುದನ್ನು ತಿಳಿದುಬಂದುದಾಗಿತ್ತು.

ಬಸ್ಸುಗಳಿಗೆ ಜನರನ್ನು ಕರೆದು ಕುಳ್ಳಿರಿಸಿ ಅವರಿಗೆ ಟಿಕೆಟ್ಟುಗಳನ್ನು ಕೊಟ್ಟರೆ ಬಸ್ಸಿನ ಮಾಲೀಕರು ಅವರಿಗೆ ಟಿಕೆಟ್ಟಿನ ಮೊಬಲಗಿನಲ್ಲಿ ರೂಪಾ ಯಿಗೆ ಆರು ಕಾಸಿನಂತೆ ಕಮೀಷನ್ ಕೊಡುತ್ತಾರೆ. ಅದೂ ಒಂದು ಸ್ವತಂತ್ರ ವಾದ ಉದ್ಯೋಗ. ಹುಣಸೂರು ಪಿರಿಯಾಪಟ್ಟಣಗಳಿಗೆ ಹೋಗುತ್ತಿದ್ದ

ಬಸ್ಸಿನ ಮಾಲೀಕರಿಗೆ ಮಲ್ಲೇಶನ ಪರಿಚಯ ಮಾಡಿಕೊಟ್ಟು ಆ ಉದ್ಯೋಗ ವನ್ನು ಕೊಡಿಸಿಕೊಡುತ್ತೇನೆಂದು ಅವನಿಗೆ ಭರವಸೆ ಕೊಟ್ಟವನು ಯಾರು?– ಕೀರ್ತಿ !

ಪರಿಚಯ ಮಾಡಿಕೊಡುವುದಕ್ಕೆ ಯಾರಾದರೇನು ಎಂದುಕೊಂಡನು ಮಲ್ಲೇಶ. ಮಾಲೀಕ ದುಡ್ಡು ಕೊಡುವುದು ತನ್ನ ಕೆಲಸಕ್ಕೇ ಹೊರತು ಕೀರ್ತಿಯ ದಾಕ್ಷಿಣ್ಯಕ್ಕಲ್ಲವೆಂದು ಸಮಾಧಾನ ತಂದುಕೊಂಡು ಅವನ ಹಿಂದೆ ಹೋದನು. ಬಸ್ಸಿನ ಮಾಲೀಕರು ಕೀರ್ತಿಯ ಮಾತಿಗೆ ಬಹಳ ಬೆಲೆ ಕೊಡುವಂತೆ ತೋರಿತು. ಹೋಗಿ ಅವರನ್ನು ಕಂಡತಕ್ಷಣ ಕೆಲಸವಾಯಿತು. ಕೀರ್ತಿಯಷ್ಟು ಕೂಡ ತನಗೆ ಯೋಗ್ಯತೆಯಿಲ್ಲವಲ್ಲ ಎಂದುಕೊಂಡನು ಮಲ್ಲೇಶ.

ದಿನಕ್ಕೆ ಬಸ್ ಏಜೆಂಟಿನ ಕೆಲಸದಲ್ಲಿ ಎಂಟು ಆಣೆ ಹತ್ತು ಆಣೆಗಳಿ ಗೇನೂ ಕಡಿಮೆಯಿರುತ್ತಿರಲಿಲ್ಲ. ಆದರೆ ಬಂದುದೆಲ್ಲವೂ ಅಂದೇ ಖರ್ಚಾಗಿ ಹೋಗುತ್ತಿತ್ತು. ರೂಮಿನ ಬಾಡಿಗೆ ಕಟ್ಟುವುದಕ್ಕೂ ಹಣ ಉಳಿಯುತ್ತಿರ ಲಿಲ್ಲ. ಮಲ್ಲೇಶನಿಗೆ ರೂಮಿಗೆ ಹೋಗುವುದಕ್ಕೂ ಭಯವಾಗಿ ಮೂರು ದಿನಗಳಿಂದ ಆ ಕಡೆಗೇ ಹೋಗಿರಲಿಲ್ಲ. ರಾತ್ರಿಯ ಹೊತ್ತು ಮೈಸೂರಿಗೆ ಬಂದು ತಂಗುತ್ತಿದ್ದ ಬಸ್ಸಿನಮೇಲೇ ಮಲಗಿ ನಿದ್ದೆಹೋಗಿಬಿಡುತ್ತಿದ್ದನು.

ಅದುತಾನೇ ಎಷ್ಟು ದಿನ ಸಾಧ್ಯ ? ಸ್ನಾನ, ಮಡಿಯಬಟ್ಟೆಗಳಿಲ್ಲದೇ ಎಷ್ಟು ದಿನ ಸುಮ್ಮನಿರಬಹುದು ? ಆದಿನ ರಾತ್ರಿ ಬಸ್ಸಿನಲ್ಲಿ ಕಳೆದು ಮಾರ ನೆಯ ಬೆಳಿಗ್ಗೆ ಖಂಡಿತ ರೂಮಿಗೆ ಹೋಗಬೇಕೆಂದುಕೊಂಡಿದ್ದನು. ರಾತ್ರಿ ಸಾಧ್ಯವಾದರೆ ಮಾಲೀಕರಲ್ಲಿ ಹತ್ತು ರೂಪಾಯಿಗಳ ಸಾಲವನ್ನು ಕೇಳ ಬೇಕೆಂದಿದ್ದನು.

ರಾತ್ರಿ 'ಗೇರ್ ಬಾಕ್ಸ'ನ್ನು ಬಿಚ್ಚಿಕೊಂಡು ಮಾಲೀಕರೇ ರಿಪೇರಿ ಮಾಡುತ್ತಿದ್ದರು. ಮುಗಿಸಿದಮೇಲೆ ಡ್ರೈವರ್, ಕಂಡಕ್ಟರ್, ಕ್ಲೀನರ್ ಗಳೆಲ್ಲ ಕಣ್ಮರೆಯಾಗಿದ್ದಾಗ ಕೇಳಿದನು. ಮಾಲೀಕರ ಮೌನ ಅರ್ಧ ಸಮ್ಮತಿಯನ್ನೇನೋ ಸೂಚಿಸಿತು. ಕೈ ತೊಳೆದುಕೊಂಡು ಅವರು ಅವನನ್ನು ಹೊಟೇಲಿಗೆ ಕರೆದುಕೊಂಡು ಕಾಫಿ ಕೊಡಿಸಿ ಒಂದು ಮಾತು ಕೇಳಿದರು.

" ಮಲ್ಲೇಸ್, ನರಸಿಂಹರಾಜಪುರದ ಶಾಂತೀ ಮನೇಗೆ ಯಾವುದೋ ಒಂದು ಹೊಸ ಹಳ್ಳೀಹುಡುಗೀ ಬಂದದ್ಯಂತಲ್ಲ, ಅದು ಹೆಂಗೆ. ನಾಳೀ ವಿಚಾರಿಸ್ಕಂಡು ಬತ್ತೀಯಾ ? "

" ಇದೇನು ಯಜಮಾನರೇ ನನ್ನಹತ್ರ ಹೀಗೆ ಮಾತಾಡ್ತೀರಿ ? ನಾನಂಥಾವನಲ್ಲ ಸ್ವಾಮಿ " ಎಂದೇನೋ ಮಲ್ಲೇಶ ಹೇಳಿ ನಕ್ಕುಬಿಟ್ಟಿದ್ದನು. ಆದರೆ ಮಾಲೀಕರ ಮಾತು ಅವನನ್ನು ಸಂಪೂರ್ಣವಾಗಿ ಸಾಯಿಸಿಬಿಟ್ಟಿತ್ತು.

ಆಗ ರಾತ್ರಿ ಹತ್ತೂವರೆ ಆಗಿಹೋಗಿತ್ತು. ಮಲ್ಲೇಶ ಹೊಟೇಲಿನಿಂದೀಚೆಗೆ ಬಂದು ಬಸ್ಸಿನ ಕಡೆ ಹೋಗದೇ ತನ್ನ ರೂಮಿನ ಕಡೆಗೆ ಹೊರಟನು. ರೂಮಿನ ಬೀದಿಗೆ ತಿರುಗಿಕೊಳ್ಳುತ್ತಿರುವಂತೆ ಪರಕಾಲೀ ಮಠದಲ್ಲಿ ಹನ್ನೊಂದು ಗಂಟೆ ಹೊಡೆದದ್ದೂ ಕೇಳಿಸಿತು ರೂಮಿನ ಬಾಗಿಲಿನ ಹತ್ತಿರ ಯಾರೋ ಕುಳಿತಿದ್ದುದೂ ಕಾಣಿಸಿತು. ಹತ್ತಿರಹೋಗಿ ನೋಡಿದನು.

ತಾಯಕ್ಕ " ಮಲ್ಲೇಸಾ ಕಡಗೂ ಬಂದ್ಯ ನನ್ನ ಕಂದ " ಅಂದಳು.

ಅವಳು ಮೂರು ದಿನಗಳಿಂದ ರೂಮಿನ ಬಾಗಿಲನ್ನು ಕಾಯುತ್ತಿದ್ದುದನ್ನು ಅವನಿಗೆ ಹೇಳಲಿಲ್ಲ ಒಂದೇ ಒಂದು ನಿಟ್ಟುಸಿರಿನಲ್ಲಿ ಆ ಕಷ್ಟವನ್ನು ನಿವಾರಿಸಿಕೊಂಡುಬಿಟ್ಟಳು.



# ೧೪

ಗುಜ್ಜಗೆರೆಯಲ್ಲಿ ಎರಡು ಪಾರ್ಟಿಯಾಗಿದ್ದದ್ದು ಬಹಳ ಹಿಂದಿನ ಮಾತಂತೆ—ಎಂದರೆ ಸುಮಾರು ಮೂವತ್ತು ವರ್ಷಗಳ ಹಿಂದೆ ಎನ್ನುತ್ತಾರೆ. ಈಚೆಗೆ ಚಿಕ್ಕಲಿಂಗಪ್ಪನವರು ದುಡ್ಡುಕಾಸಿನ ವಿಷಯದಲ್ಲಿ, ಆಸ್ತಿಪಾಸ್ತಿಗಳ ವಿಷಯದಲ್ಲಿ ಪ್ರಬಲರಾಗುತ್ತ ಬಂದಹಾಗೆಲ್ಲ, ಊರನ್ನಾಳುವ ಆಸೆ ಅವರಿಗೆ ಬಂದದ್ದು ಸ್ವಾಭಾವಿಕವೇ. ಪರೋಕ್ಷವಾಗಿ ಊರನ್ನು ಕಟ್ಟಿ ಆಳುತ್ತಿದ್ದ ಶಂಭುಗೌಡರಿಗೆ ಚಿಕ್ಕಲಿಂಗಪ್ಪನವರು ತಲೆಬೇನೆಯಾಗತೊಡಗಿದ್ದರು. ಊರಿನಲ್ಲಿ ಯಾರು ಆಸ್ತಿಗಳನ್ನು ಮಾರಿಕೊಂಡರೂ ಶಂಭುಗೌಡರಿಗೇ ಅದು ಬಂದು ನಿಲ್ಲುತ್ತಿದ್ದುದು ಒಂದು ಸಂಪ್ರದಾಯವಾಗಿಹೋಗಿತ್ತು. ವ್ಯಾಪಾರ ದಲ್ಲಿ ಯಾವ ವಿಧವಾದ ಪೈಪೋಟಿಯೂ ಇರುತ್ತಿರಲಿಲ್ಲ. ಈಗ ಪ್ರತಿ ಯೊಂದು ವ್ಯಾಪಾರಕ್ಕೂ ಚಿಕ್ಕಲಿಂಗಪ್ಪನವರು ಎದುರಾಗಿ ನಿಲ್ಲುತ್ತಿದ್ದರು. ಮಾದೇವೂವಿನ ಹಿತ್ತಿಲಿನ ವ್ಯಾಪಾರ ನಡೆದಾಗಿನಿಂದ ಶಂಭುಗೌಡರಿಗೂ ಚಿಕ್ಕಲಿಂಗಪ್ಪನವರಿಗೂ ಮನಸ್ತಾಪ ಮೂಡಿ ಬೆಳೆಯತೊಡಗಿತ್ತು. ಅದು ಅಧಿಕೃತವಾಗಿ ಹೊರಬಂದದ್ದು 'ಓಟಲಿನ ಮಾಂತದೇವರ' ಪ್ರಸಂಗದಲ್ಲಿ.

ಓಟಲು ಮಾಂತದೇವರು ಶಂಭುಗೌಡರ ಒಳಸಂಚಿನ ದೂತನಾಗಿ ದ್ದನು. ಊರಿನ ಸುತ್ತುಮುತ್ತಿನ ಆಸ್ತಿಪಾಸ್ತಿಗಳು ಯಾವುದಾದರೂ ಖರೀದಿಗೆ ಬರುವುದಿದ್ದರೆ ಹೊಟೇಲಿನಲ್ಲಿ ಅದರ ಪ್ರಸ್ತಾಪ ಬರುತ್ತಿತ್ತು. ಮಾಂತದೇವರು ಅದನ್ನು ಶಂಭುಗೌಡರಿಗೆ ಗುಟ್ಟಾಗಿ ತಿಳಿಸಿ, ಸ್ವತ್ತಿನವ ರನ್ನೂ ಅವರನ್ನೂ ರಹಸ್ಯವಾಗಿ ಸೇರಿಸಿ, ವ್ಯಾಪಾರ ಕುದುರಿಸಿ, ಕಾಗದ ಪತ್ರಗಳನ್ನು ಮಾಡಿಸಿಬಿಡುತ್ತಿದ್ದನು. ಇವನ ಈ ಸೇವೆಯಿಂದ ತಮಗೆ ನಷ್ಟವಾಗುವ ಪರಿಸ್ಥಿತಿ ಬರುವವರೆಗೂ ಚಿಕ್ಕಲಿಂಗಪ್ಪನವರು ಅದನ್ನು ಲೆಕ್ಕಿಸದೇ ಇದ್ದರು. ಚಿಕ್ಕಲಿಂಗಪ್ಪನವರು ತಮ್ಮ ಮನೆಯ ಮಗ್ಗುಲು ಮನೆಯ ವ್ಯಾಪಾರವನ್ನು ಮಾಡುತ್ತಿದ್ದಂತೆಯೇ ಮನೆಯವರಿಗೆ ಇನ್ನೂರು ರೂಪಾಯಿಗಳ ಆಸೆಯನ್ನು ತೋರಿಸಿ ಮಾಂತದೇವರು ಆ ಮನೆಯನ್ನು ಶಂಭುಗೌಡರಿಗೆ ಮಾಡಿಸಿಕೊಟ್ಟುಬಿಟ್ಟಿದ್ದನು. ಅಂದಿನಿಂದ ಚಿಕ್ಕಲಿಂಗಪ್ಪ

ನವರ ಮನಸ್ಸಿನಲ್ಲಿ ಬೆಂಕಿ ಹೊತ್ತಿದ್ದು ಅದು ಮಾಂತದೇವರ ಮನೆಯನ್ನು ಸುಟ್ಟುಬಿಡಲು ಹೊಂಚುಹಾಕುತ್ತಿತ್ತು.

ಅದಕ್ಕೆ ಶಾಂತರಾಜಯ್ಯ ಅವರಿಗೆ ದಾರಿ ಹುಡುಕಿಕೊಟ್ಟನು. ಮಾಂತದೇವರು ಕೀಳುಜಾತಿಯವರಿಗೂ ಕಚ್ಚಿಕೊಂಡು ಕುಡಿಯಲು ಹಿತ್ತಾಳೆ ಲೋಟಗಳನ್ನೇ ಕೊಟ್ಟು, ಬೆಂಕಿ ಹಾಕಿ ಶುದ್ಧಿಮಾಡಿಕೊಳ್ಳದೇ ಹಾಗೆಯೇ ನೀರಲ್ಲದ್ದಿ ಒಳಕ್ಕೆ ತೆಗೆದುಕೊಳ್ಳುತ್ತಾನೆಂದು ಸುದ್ದಿ ಹುಟ್ಟಿಸಿದನು. ಅದಕ್ಕೆ ನಾಲ್ಕಾರುಜನ 'ಉತ್ತಮ' ಜಾತಿಯವರೂ, ನಾಲ್ಕಾರು ಜನ 'ಕೀಳು'ಜಾತಿಯವರೂ ಸಾಕ್ಷಿ ಹೇಳಲು ಸಿದ್ಧರಾದರು. ಉತ್ತಮ ಜಾತಿಯವರು ಅವನ ಹೋಟೆಲಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟರು. ಶಂಭುಗೌಡರೂ ವಿಪರೀತವಾಗಿ ವಿಭೂತಿಯನ್ನು ಬಳಸುತ್ತಿದ್ದವರಾದುದರಿಂದ ಬಹಿರಂಗವಾಗಿ ಮಾಂತದೇವರ ಬೆಂಬಲಕ್ಕೆ ನಿಲ್ಲಲಾರದೇ ಹೋದರು. ಎರಡೇ ತಿಂಗಳಲ್ಲಿ ಮಾಂತದೇವರು ಹೋಟೆಲನ್ನು ಮುಚ್ಚಬೇಕಾದ ಸ್ಥಿತಿ ಬಂದಿತು. ಅವನ ಸಂಸಾರವನ್ನೆಲ್ಲಾ ಶಂಭುಗೌಡರು ನಿರ್ವಹಿಸುವುದುಂಟೆ?

ಮಾದೇವೂ ಹೆಂಡತಿಯ ಮನೆಯನ್ನು ಸೇರಿಕೊಂಡಮೇಲೂ ಮೂರಕ್ಕೆ ಆರಕ್ಕೆ ಗುಜ್ಜಗೆರೆಗೆ ಬರುತ್ತಲೇ ಇದ್ದನು. ಅಲ್ಲಿ ನಡೆದ ಮಾಂತದೇವರ ಕತೆಯನ್ನು ಪುಟ್ಟತಾಯಿಗೆ ಹೇಳಿದನು. ಮಾಂತದೇವರು ತನ್ನ ಬೆಂಚು, ಕುರ್ಚಿ, ಲೋಟ ಬಟ್ಟಲು ಸಹಿತ ತನ್ನ ಮನೆಯನ್ನು ಮಾರಿಕೊಂಡು ತಳಸಕ್ಕೆ ಹೊರಟು ಹೋಗುವೆನೆಂದಿದ್ದದ್ದು ನಿಜ. ಪುಟ್ಟತಾಯಿ ನಗುನಗುತ್ತಾ ಗಂಡನಲ್ಲಿ ಒಂದು ಮಾತನ್ನಾಡಿದಳು. 'ನೀವಾದರೂ ಅದನ್ನ ಮಾಡ್ಕಳ್ಳಿ ಸುಲಬದಲ್ಲಿ ಬಿದ್ರೆ. ನಿಮ್ಗೇನು ತಿಂಡಿ ಕಾಪಿ ಮಾಡಕ್ಕೆ ಸೊಗಸಾಗಿ ಬತ್ತದಲ್ಲ!' ನಗೆಪಾಟಲಿಗೆಂದು ಆಡಿದ್ದ ಅವಳ ಮಾತು ನಿಜವಾಗಿಯೇ ಪರಿಣಮಿಸಿತು. ಮಾದೇವೂ ಹೋಗಿ ಮಾಂತದೇವರ ಹತ್ತಿರ ಖರೀದಿಯನ್ನೇ ಮಾತನಾಡಿದನು. ನಾನೂರೈವತ್ತಕ್ಕೆ ವ್ಯಾಪಾರ ಬಂದು ನಿಂತಿತು. ಎಂಜಲು ಲೋಟದ ಪ್ರಸಂಗದಲ್ಲಿ ತನ್ನ ಕಡೆ ನಿಂತುಕೊಳ್ಳಲಾರದೇ ಹೋದ ಶಂಭುಗೌಡರ ಮೇಲೆ ಮಾಂತದೇವರಿಗೂ ಸಿಟ್ಟು ಬಂದಿದ್ದುದೇ ಇದನ್ನು ಅವರಿಗೆ ತಿಳಿಸದಿದ್ದುದರ ಕಾರಣ. ಏನಾದರೂ ಮಾಡಿ

ಗುಜ್ಜಗೆರೆಯಲ್ಲೇ ತಾನು ಪುನಃ ಒಬ್ಬ ಮನುಷ್ಯನಾಗಿ ಬಾಳಬೇಕೆಂದಿದ್ದ ಮಾದೇವೂಗೆ ಈ ದಾರಿ ಬಿಟ್ಟರೆ ಇನ್ನಿಲ್ಲವೆನ್ನಿಸಿತು. ದೇವರು ತನ್ನ ಹೆಂಡತಿಯ ಮೂಲಕ ಈ ಸಲಹೆ ಕೊಟ್ಟಿದ್ದಾನೆ ಎಂದು ತೀರ್ಮಾನಿಸಿ ಕೊಂಡನು.

ಅವನ ಕೈಯಲ್ಲಿ ಐವತ್ತು ರೂಪಾಯಿಗಳು ಮಾತ್ರ ಇದ್ದದ್ದು. ಹಾಲಿನ ಬಟ್ಟಮ್ಮನ ನೂರು ರೂಪಾಯಿಗಳನ್ನು ಕೇಳಿದನು. ಅವಳು 'ನೂರು ರೂಪಾಯಿನ ಗಂಟ್ನ ನನಗೆ ಒಟ್ಗೇ ಕೊಡಕ್ಕಾಗದಿಲ್ಲ. ಎಂಗಿದ್ದರೂ ಓಟಲು ಮಡಗ್ತೀನಿ ಅಂತೀಯೆ. ನಾನು ನಿನಗೆ ರೂಪಾಯ್ಕೆ ಐದ್ಸೇರ್ನಂಗೆ ಆಲು ಬುಟ್ಕೊಡ್ತೀನಿ. ಅಂಗೇ ತೀರಸ್ಕೋ' ಎಂದಳು. ಮಾದೇವೂ ಅದೂ ಸರಿಯೆ ಎಂದುಕೊಂಡನು. ಆದರೂ ದುಡ್ಡಿಗೇನಾದರೂ ಮಾಡಲೇ ಬೇಕಲ್ಲ. ಸ್ವಲ್ಪ ತಡಮಾಡಿದರೂ ಶಂಭುಗೌಡರ ಕಡೆಯಿಂದ ಆ ಸ್ವತ್ತು ತನ್ನ ಕೈತಪ್ಪಿ ಹೋಗಬಹುದೆಂಬ ಆತುರ ಬೇರೆ.

ಪುನಃ ಮಾದೇವೂ ಗುಟ್ಟಾಗಿ ಚಿಕ್ಕಲಿಂಗಪ್ಪನವರ ಬಳಿಗೇ ಹೋಗ ಬೇಕಾಯಿತು. ಅವರು ಒಂದು ದಿನವೆಲ್ಲ ಯೋಚಿಸಿ ನಾನೂರೈವತ್ತು ರೂಪಾಯಿಗಳನ್ನು ಕೊಡಲು ಒಪ್ಪಿದರು. ಅವನ ತೋಟವನ್ನು ಹೊಡೆದು ಕೊಂಡ ಅಪಖ್ಯಾತಿ ತಪ್ಪುವುದೊಂದು, ಮಾಂತದೇವರು ಊರು ಬಿಟ್ಟು ಹೋಗುವಾಗ ತನ್ನ ಕಡೆಯವನಿಗೆ ಮನೆಮಾರಿ ಹೋಗುತ್ತಿರುವನೆಂಬ ದೊಡ್ಡಸ್ತಿಕೆಯೊಂದು. ಕೊನೆಯದಾಗಿ ಮಾದೇವೂ ಒಪ್ಪಿಕೊಂಡಿದ್ದ ರೂಪಾಯಿ ಬಡ್ಡಿಯ ಆಸೆಯೊಂದು.

ಪುಟ್ಟತಾಯಿಯ ಬುದ್ಧಿಗೆ ಅವನು ಹೋಟಲಿಡುವ ಆಲೋಚನೆ ಬಂದದ್ದೇ ಶುಭ ಮುಹೂರ್ತದಲ್ಲೆಂದು ಕಾಣುತ್ತದೆ. ಸೋಮವಾರದ ದಿನ, ಸ್ವಾಮಿಗಳನ್ನು ಕರೆಸಿ ನಾಲ್ಕು ಜನರಿಗೆ ಊಟ ಮಾಡಿಸಿ ಮಾದೇವೂ ತನ್ನ 'ಕಾಫೀ ಕ್ಲಬ್' ಅನ್ನು ತೆರೆದ.

ಅವನ ಕೈಯಿನ ಉಪ್ಪಿಟ್ಟು ಟೀಗಳ ರುಚಿನೋಡಿದ್ದವರೆಲ್ಲ ಅವನು ಹೋಟಲಿಂದ ಸಾವಿರಾರು ರೂಪಾಯಿ ಗಳಿಸಿಬಿಡುತ್ತಾನೆಂದು ಊರೂರು ಗಳಲ್ಲೆಲ್ಲಾ ಡಂಗೂರ ಹಾಕಿಕೊಂಡು ಬಂದರು. ಅದು ಸುಳ್ಳೋ ನಿಜವೋ

ಎಂದು ಜನರೆಲ್ಲರೂ ಮಾದೇವೂ ಬಳಿಗೆ ಬಂದು ಪರೀಕ್ಷೆ ಮಾಡಿ ಹೋಗು ತ್ತಿದ್ದರು. ದೇವರು ಮಾದೇವೂವಿನ ಅಭ್ಯುದಯವನ್ನು ನಿಜವಾಗಿ ಅವನ ಪಾಕಪ್ರೌಢಿಮೆಯಲ್ಲಿಟ್ಟಿದ್ದನು. ಅವನು ಸಂಪಾದಿಸುತ್ತಿದ್ದ ದುಡ್ಡೆಲ್ಲಾ ಪುಟ್ಟತಾಯಿಯನ್ನು ತಲುಪಿಕೊಳ್ಳುತ್ತಿತ್ತು. ಕಾಸಿನ ಸರ ಬಂದಿತು. ಎರಡು ರೇಶ್ಮೆಸೀರೆಗಳು ಬಂದವು. ಹೋಟಲಿನ ಚಾವಣಿಯ ಹುಲ್ಲು ಹೋಗಿ ಹೆಂಚು ಬಂದಿತು. ಗೋಡೆಗಳೆಲ್ಲಾ ಬೆಳ್ಳಗಾದವು. ಕುಂಟುತ್ತಿದ್ದ ಬೆಂಚು ಕುರ್ಚಿಗಳಿಗೆ ಬದಲಾಗಿ ಗಟ್ಟಿಮುಟ್ಟೆಯಾದವು ಬಂದವು. ಪುಟ್ಟ ತಾಯಿ ಕಿರೀಕಾಟಿಯನ್ನು ಬಿಟ್ಟು ಎರಡನೇ ಬಾರಿ ಗುಜ್ಜುಗೆರೆಗೆ ಬಂದದ್ದೂ ಆಯಿತು.

ಮಾಂತದೇವರ ಸಂಸಾರ ಇದ್ದದ್ದೂ ಅವನ ಹೋಟಲಿನ ಒತ್ತಿಗಿದ್ದ ಎರಡು ಅಂಕಣದಲ್ಲಿ. ಅದರಂತೆ ಪುಟ್ಟತಾಯಿಯೂ ಅಲ್ಲಿಗೆ ಸಂಸಾರಕ್ಕೆ ಬಂದಳು. ಮಾದೇವೂ ಪಾಲಿಗೆ ಪುಟ್ಟತಾಯಿ ಈಗ ಲಕ್ಷ್ಮಿ. ಅವಳ ಮಾತು ಅವನಿಗೆ ದೇವರ ಮಾತು. ಅವಳ ಅಭೀಷ್ಟವನ್ನು ನೆರವೇರಿಸು ವುದು ಅವನ ಅತ್ಯುತ್ಸಾಹದ ಚಪಲವಾಗಿತ್ತು. ಯಾವ ಸಲಹೆಯನ್ನೂ ಅವಳಲ್ಲಿ ಕೇಳಲು ಅವನಿಗೆ ನಾಚಿಕೆಯಾಗುತ್ತಿರಲಿಲ್ಲ ಮೇಜುವಿನಲ್ಲಿ ಚಿಲ್ಲರೆಗಳು ಹೆಚ್ಚಿ ಹೆಚ್ಚಿ ಅವು ಒಂದೆರಡು ನೋಟುಗಳಾಗಿ ಪರಿವರ್ತಿತವಾದ ಕೂಡಲೇ ಆ ನೋಟುಗಳನ್ನು ಮಾದೇವೂ ಹೆಂಡತಿಯ ಕೈಗೆ ಸಾಗಿಸಿ ಬಿಡುತ್ತಿದ್ದನು. ಇದನ್ನು ಗಮನಿಸಿಕೊಳ್ಳುತ್ತಿದ್ದ ಕೆಲವು ಸ್ನೇಹಿತರು ಅವನನ್ನು ಹಾಸ್ಯಮಾಡುತ್ತಿದ್ದುದೂ ಉಂಟು. ಅವನು ಆ ಹಾಸ್ಯಕ್ಕೆ ತಲೆ ಕೊಟ್ಟು ನಕ್ಕುಬಿಡುತ್ತಿದ್ದನೇ ಹೊರತು, ಆ ದುಡ್ಡನ್ನು ಹೆಚ್ಚು ಹೊತ್ತು ತನ್ನ ಜವಾಬ್ದಾರಿಯಲ್ಲಿಟ್ಟುಕೊಳ್ಳುವ ಹವ್ಯಾಸಕ್ಕೆ ಹೋಗುತ್ತಿರಲಿಲ್ಲ. ಅವನು ಮದುವೆಯಾದ ಕಾಲದ ಪುಟ್ಟತಾಯಿಯೇ ಬೇರೆ ಈಗಿನ ಪುಟ್ಟತಾಯಿಯೇ ಬೇರೆ ಎನ್ನಬಹುದಾಗಿತ್ತು. ಸಂತೋಷದಿಂದ ಅವಳು ಎರಡು ಸುತ್ತು ತುಂಬಿಕೊಂಡಿದ್ದಳಂತೆ. ಅವಳ ಕಣ್ಣುಗಳ ಆಳ ತುಂಬ ಹೆಚ್ಚಿದ್ದು, ಅವಳ ಧ್ವನಿಗೆ ಬಲು ತೂಕ ಬಂದಿತ್ತಂತೆ. ಅದನ್ನು ಮಾದೇವೂಗೆ ತಿಳಿಸಿದುದು ತೆಂಕಳ್ಳಿ ಪಂಡಿತಪ್ಪ.

ನರಿಯಾಲದ ಸಂತೆಯಲ್ಲಿ ದನಕರುಗಳನ್ನು ಕೊಂಡ ತೆಂಕಳ್ಳಿಯವರು ಗುಜ್ಜಗೆರೆಯ ಮೇಲೆಯೇ ಹೋಗಬೇಕಾಗಿತ್ತು. ತಮ್ಮನೆಯಲ್ಲೇ ಹುಟ್ಟಿದ ಹೋರಿಗರುವಿನೊಡನೆ ಜೊತೆಯಾಗಲು ಒಂದು ಕರುವನ್ನು ತೆಗೆದುಕೊಂಡು ಪಂಡಿತಪ್ಪ ಆ ಮಾರ್ಗವಾಗಿಯೇ ಬಂದನು. ಮಾಂತದೇವರ ಹೋಟಲಿನಲ್ಲಿ ಮಾದೇವೂ 'ದರ್ಬಾರು' ನಡೆಸುತ್ತಿದ್ದುದು ಅವರಿಗೆ ತಿಳಿಯದಿದ್ದ ವಿಷಯ. ಅವರಿಗೆ ಬಹಳ ಸಂತೋಷವಾಗಿ ಹೋಟಲಿನ ಚಪ್ಪರದಕಾಲಿಗೆ ಕರುವನ್ನು ಕಟ್ಟಿಹಾಕಿ ಒಳಕ್ಕೆ ನುಗ್ಗಿದರು. ಮಾದೇವೂ ಅವರನ್ನುಕಂಡು ಎದ್ದುನಿಲ್ಲಬೇಕೆನ್ನಿಸಿತು. ಎದ್ದುನಿಂತು ಅವರನ್ನು ಬರಮಾಡಿಕೊಂಡು "ತಲೆ ತಿರುಗುವಂತೆ" ಒಂದುಕಪ್ಪು ಟೀ ಮಾಡಿಕೊಟ್ಟನು. ಅವರು ಅದನ್ನು ಕುಡಿಯುವುದರೊಳಗಾಗಿ ಅವರನ್ನು ಕೊನೆಯ ಬಾರಿ ನೋಡಿದ ಲಾಗಾಯ್ತು ಅಂದಿನವರೆಗೆ ನಡೆದುದನ್ನೆಲ್ಲಾ ವಿಸ್ತರಿಸಿದನು. ಅವರು ಟೀಗೆ ದುಡ್ಡುಕೊಡಲು ಹೋದರು. ಮಾದೇವೂ ತುಂಬಾ ಆಕ್ಷೇಪಿಸಿದನು ಅದರ ಬಗ್ಗೆ ಹೋರಾಟ ನಡೆಯುತ್ತಿದ್ದಂತೆ ಇದೇನೆಂದು ಪುಟ್ಟತಾಯಿಇಣಿಕಿ ನೋಡಿರಬೇಕು. ಅವಳಿಗೆ ಪಂಡಿತಪ್ಪನನ್ನು ತಮ್ಮ ಮನೆಯಲ್ಲಿ ಕಂಡು ಬಲು ಹರ್ಷವಾಯಿತು. ಬಾಗಿಲುಮರೆಯಿಂದಲೇ ಸಂಪ್ರದಾಯವನ್ನು ಬಿಟ್ಟು 'ಇದ್ಯಾರಪ್ಪ ಅಂತಿದ್ದಿ! ಮಾವಾ ಬನ್ನಿ ಮಾವ ಅಟ್ಟಿಗೆ!' ಎಂದು ಕೂಗಿಕೊಂಡಳು.

ಅವಳ ಬಾಯಿಂದ ಎರಡು ಬಾರಿ ಹೊರಬಿದ್ದ 'ಮಾವ' ಎಂಬ ಪದ ಪಂಡಿತಪ್ಪನಿಗೆ ಬಹಳ ಇಂಪಾಗಿ ಕೇಳಿಸಿತು. 'ಓ ನಮ್ಮ ಪುಟ್ಟತಾಯೂ ಇಲ್ಲಿಗೇ ಬಂದ್ಬುಟ್ಟವಳೆ. ಎಂದುಕೊಂಡು ಪಂಡಿತಪ್ಪ ಮನೆಯೊಳಕ್ಕೆ ಹೋದನು. ಆಗಲೇ ಅವನಿಗೆ ಪುಟ್ಟತಾಯಿಯಲ್ಲಿ ಅಷ್ಟೊಂದು ಬದಲಾವಣೆ ಗಳು ಕಂಡದ್ದು. ಆವಳು ತೋರಿಸಿದ ಮರ್ಯಾದೆ, ಸಂತೋಷಗಳನ್ನು ಕಂಡು ಆ ದಿನವೆಲ್ಲಾ ತನ್ನನ್ನು ಊರಿಗೆ ಬಿಟ್ಟುಕೊಡುವುದಿಲ್ಲವೇನೋ ಎನಿಸಿತು ಪಂಡಿತಪ್ಪನಿಗೆ. "ತೆಂಕಳ್ಳಿಗೇನಾ, ರಾತ್ರೇಒತ್ನಲ್ಲಾದರೂ ಒಂಟೋಗಬೋದು. ತಿಂಗಳ ಬೆಳಕಿರ್‍ತದೆ" ಎಂದರು ಗಂಡಹೆಂಡಿರಿಬ್ಬರೂ ರಾತ್ರಿಯ ಊಟಕ್ಕೆ ಸಕ್ಕರೆಪಾಕದಲ್ಲಿ ತೋಯಿಸಿದ ಪೂರಿಯನ್ನು ಬಡಿಸಿ

ಪುಟ್ಟತಾಯಿ "ಹೆಂಗದೆ" ಎಂದು ಕೇಳಿದಳು. ಪಂಡಿತಪ್ಪ "ಸೊಗಸಾಗದೆ ನಮ್ಮನೇ ಐಕಳಿಗೆಲ್ಲಾ ಇದನ್ನ ಕಂಡರೆ ಬಲೇಪ್ರೀತಿ. ಅದರಲ್ಲೂ ನಮ್ಮ ಚಂದ್ರನಿಗೆ ಪ್ರಾಣ" ಎನ್ನುತ್ತಾ ಹೊಡೆದರು. ಮಾದೇವೂಗೆ ಚಂದ್ರಮ್ಮ ನನ್ನು ಕಂಡರೆ ಏನೋ ಒಂದು ರೀತಿಯ ವಿಶ್ವಾಸವಿತ್ತು, ಅದು ಪುಟ್ಟ ತಾಯಿಗೂ ಗೊತ್ತಿತ್ತು. ಪಂಡಿತಪ್ಪ ಊರಿಗೆ ಹೊರಟುನಿಂತಾಗ ಆರು ಪೂರಿಗಳನ್ನು ಕಾಗದದಲ್ಲಿ ಕಟ್ಟಿ ಪುಟ್ಟತಾಯಿ ಅವರ ಕೈಗೆ ತಂದುಕೊಟ್ಟು "ಐಕಳಿಗೆ" ಎಂದಳು. ಪಂಡಿತಪ್ಪನಿಗೆ ತಾನು ಅದನ್ನು ಹಾಗೆ ಹೊಗಳ ಬಾರದಾಗಿತ್ತೆನಿಸಿತು. ಹೋಗುತ್ತಾ "ಈದಿನ ನನಗೆ ಕಣ್ಣಲ್ಲಿ ನೀರು ಬರೋ ಅಷ್ಟು ಸಂತೋಷ ಕೊಡ್ತು" ಎಂದು ಹೋದನು. ಗಂಡಹೆಂಡಿರಿಬ್ಬರೂ ತಮ್ಮ ಈ ಅಭ್ಯುದಯಕ್ಕೆ ಕಾರಣನಾದ ಆ ಮನುಷ್ಯನ ಸುಳಿವು ಕಣ್ಮರೆ ಯಾಗುವರೆಗೂ ನೋಡುತ್ತ ನಿಂತಿದ್ದರು. ಮಾದೇವೂ ಮನಸ್ಸಿನಲ್ಲಿ ಆ ದಿನ ಮತ್ತೇನೋ ಒಂದು ಹೊಸ ಆಲೋಚನೆ ಹುಟ್ಟಿದಂತಿತ್ತು.

ಪಂಡಿತಪ್ಪ ಹೋಟಲಿನೊಳಗಿದ್ದಾಗಲೇ ಅವನನ್ನು ಮನೆಯೊಳಗಿ ನಿಂದ ಕೂಗಿ ಕರೆದ ಪುಟ್ಟತಾಯಿಗೆ ಆ ನಿಮಿಷದಿಂದ ಹಾಗೆ ಕರೆದುದು ಸರಿ ಯಲ್ಲವೆನಿಸಿತ್ತು. ಆದರೆ ಪಂಡಿತಪ್ಪನು ತಮ್ಮ ಹೊಸ ಸಂಸಾರಕ್ಕೆ ಭೇಟಿ ಕೊಟ್ಟಿದ್ದ ಉದ್ವೇಗದಲ್ಲಿ ಕೂಗಿಕೊಂಡು ಬಿಟ್ಟಿದ್ದಳು. ಹೋಟಲಿನಲ್ಲಿ ಎಷ್ಟು ಜನ ಕುಳಿತಿದ್ದರೋ ಏನೋ ಅವರೆಲ್ಲ ತನ್ನ ಬಾಯಿಯನ್ನು ಕಂಡು ಎಷ್ಟು ಬೇಜಾರುಪಟ್ಟುಕೊಂಡರೋ ಏನೋ ಎಂದುಕೊಂಡಳು ಪುಟ್ಟತಾಯಿ. ಹೋಟಲಿನ ಪಕ್ಕದಲ್ಲಿ ಸಂಸಾರ ಹೂಡಿಕೊಂಡಿರುವುದು ತನಗೆ ಸರಿಬೀಳು ವುದಿಲ್ಲವೆಂದುಕೊಂಡಳು. ಮಾದೇವೂ ಆಬಾರಿ ಚಿಕ್ಕಲಿಂಗಪ್ಪನವರ ಬಾಕಿ ಮುನ್ನೂರೈವತ್ತು ರೂಪಾಯಿಗಳನ್ನೂ ತೀರಿಸಿಬಿಡಬೇಕೆಂದಿದ್ದನು. ಅದನ್ನು ನಿಲ್ಲಿಸಿಕೊಂಡು ಬೇರೆ ಮನೆಯೊಂದನ್ನು ಮಾಡಿದರಾಯಿತೆಂದೂ ಪಕ್ಕದ ಎರಡಂಕಣವನ್ನೂ ಹೋಟಲಿಗೇ ಉಪಯೋಗಿಸಿಕೊಂಡರೆ ಮತ್ತೂ ಒಳ್ಳೆಯ ದೆಂದೂ ಮಾದೇವೂ ಅಭಿಪ್ರಾಯಪಟ್ಟನು.

ಸರಿ. ಗುಜ್ಜಗೆರೆಯ ಡಂಗುರದವಳಾದ ಹಾಲಿನ ಬಟ್ಟಮ್ಮನಕಿವಿಗೆ ಈ ವಾರ್ತೆ ಬಿದ್ದಿತು. "ಮಾದೇವಪ್ಪನಿಗೆ ಒಂದಟ್ಟೆ ಬೇಕಂತೆ" ಎಂಬ

ಮಾತು ಬೇಕಾದಷ್ಟು ಜನರಿಗೆ ತಿಳಿದುಹೋಯಿತು. ಮಾದೇವೂ ಏಳು ನೂರೈವತ್ತು ರೂಪಾಯಿಯವರೆಗೂ ತಯಾರಾಗಿದ್ದನು. ಜೂಜುಗಾರ ಸಣ್ಣಪ್ಪನಿಗೆ ಇದರಿಂದ ಲಾಭವಾಗುವ ಸನ್ನಿವೇಶ ಒದಗಿತು. ಶಂಭುಗೌಡರು ಸಣ್ಣಪ್ಪನ ಮನೆಯನ್ನು ಕೊಂಡುಕೊಂಡು ಅದನ್ನು ತಮ್ಮ ತಂಗಿಗೆ ಕೊಡ ಬೇಕೆಂದು ಬಹಳ ದಿನಗಳಿಂದ ಆಸೆಯಿಟ್ಟುಕೊಂಡಿದ್ದರು. ಜೂಜುಗಾರನ ಮನೆಗೆ ಐನೂರು ರೂಪಾಯಿಗಳ ಬೆಲೆಯೇ ವಿಪರೀತವೆಂದು ಅಲ್ಲಿಗೆ ವ್ಯಾಪಾರವನ್ನು ನಿಲ್ಲಿಸಿಕೊಂಡಿದ್ದರು. ಮಾದೇವೂವಿನ ಅಗತ್ಯವನ್ನು ಕಂಡು ತಾವಾಗಿಯೇ ಅವರು ಅದನ್ನು ಆರುನೂರಕ್ಕೇರಿಸಿದರು. ಚಿಕ್ಕಲಿಂಗಪ್ಪನ ವರು ಮಾದೇವೂಗೆ ಬೆಂಬಲರಾಗಿ ನಿಂತು "ಏಳುನೂರೂನ್ನು" ಎಂದಿದ್ದರು. ಗೌಡರು ಎಂಟುನೂರಕ್ಕೆ ಬಂದು ಕಿಡಿಕಿಡಿಯಾಗಿದ್ದರು. ಚಿಕ್ಕಲಿಂಗಪ್ಪ ನವರಿಗೆ ಇನ್ನು ಹೆಚ್ಚಿಸುವುದಕ್ಕೆ ಮನಸ್ಸಾಗಲಿಲ್ಲ. ಅಷ್ಟರಲ್ಲೇ ಮನೆಯ ವಿಷಯ ತೀರ್ಮಾನವಾಯಿತು—ಶಂಭುಗೌಡರಿಗೆ!

ತಾಯಕ್ಕ ಮಗನನ್ನು ಊರಲ್ಲಿ ಬಿಟ್ಟು ಮಗಳಿಗೆ ಆ ಸುದ್ದಿಯನ್ನು ಹೇಳಲು ಬಂದಿದ್ದಳು. ಬಂದಿದ್ದಾಗ ಮನೆಯ ಈಹರಾಜು ನಡೆಯುತ್ತಿತ್ತು. ಮಾದೇವೂ ದೊಡ್ಡಣ್ಣಿ, ತಾಯಕ್ಕ ತಮ್ಮ ಮನೆಗೆ ಬಂದಿದ್ದಾಗ ಎಲ್ಲವನ್ನೂ ವಿಶದವಾಗಿ ಹೇಳಿದನು. ಮಾದೇವೂ ಪಾಲಿನ ಮನೆಯನ್ನು ಅವನು ಕೊಟ್ಟದ್ದ ಖರೀದಿಗೇ ಹಿಂದಿರುಗಿಸುವುದಾಗಿಯೂ ಹೇಳಿದನು. ಶಂಭು ಗೌಡರನ್ನು ಎದುರುಹಾಕಿಕೊಳ್ಳಬಾರದೆಂದೂ ಅವರು ಸಮಯದಲ್ಲಿ ಪ್ರಾಣ ತೆಗೆಯಿಸುವುದಕ್ಕೂ ಹೇಸುವುದಿಲ್ಲವೆಂದೂ ತಾಯಕ್ಕನಿಗೆ ಎಚ್ಚರಕೊಟ್ಟಿ ದ್ದನು. ತಾಯಕ್ಕನಿಗೆ ಏಕಕಾಲದಲ್ಲಿ ಭಯ ಸಂತೋಷಗಳುಂಟಾದವು.

ತಮ್ಮ ಪಾಲಿನ ಮನೆಯನ್ನು ಹಿಂದಿರುಗಿಸಲು ತನ್ನ ಭಾವ ಸಿದ್ಧವಾ ಗಿರುವುದನ್ನು ಕೇಳಿ ಪುಟ್ಟತಾಯಿಗೆ ಬಲು ಆನಂದವಾಯಿತು. ಅವಳಿಗೆ ಶಂಭು ಗೌಡರ 'ಹಲಗೆ ಸೇರುವೆ' ತೊಟ್ಟೀ ಮನೆಗಿಂತ ತಮ್ಮ ಪಾಲಿನ ಮನೆ ಬೆಲೆಯುಳ್ಳದ್ದಾಗಿ ಕಂಡಿತು. ಹೆಂಡತಿ ಹೇಳಿದ ಮೇಲೆ ಬದಲು ಮಾ ತೆಲ್ಲಿ? ಪೈಪೋಟಿಗಾಗಿ ಇನ್ನೂರು ಮುನ್ನೂರು ರೂಪಾಯಿಗಳ ದಂಡ ಕೊಟ್ಟು, ಗೌಡರ ನಿಷ್ಠೂರವನ್ನು ಕಟ್ಟಿಕೊಳ್ಳುವುದಕ್ಕಿಂತ ತನ್ನಹೆಂಡತಿಯ

ಇಷ್ಟಪ್ರಕಾರ ನಡೆಯುವುದೇ ಲಾಭವೆಂದು ಮಾದೇವ್ನೂಗೂ ತೋರಿತು. ತಾಯಕ್ಕ ಅದಕ್ಕಾಗಿಯೇ ಒಂದು ದಿನ ನಿಂತು ಮಗಳ ಸಂಸಾರವನು ಹಳೆಯ ಮನೆಗೆ ಉಳಿಸಿಕೊಳ್ಳಬೇಕೆಂಬ ಆಸೆಯಿದ್ದರೂ ಮಲ್ಲೇಶ ಊರಿನಲ್ಲಿ ಒಬ್ಬನೇ ಇರುವನೆಂಬ ಕಾರಣದಿಂದ ತಾಯಿಯನ್ನು ಹೋಗಗೊಡಬೇಕಾಗಿ ಬಂದಿತು. ಹಾಗೂ ಕೇಳಿದಳು.

" ಅದ್ಯಾಕವ್ವಾ ? ಅವನ್ನೂ ಇಲ್ಲೀಗೆ ಕರಕಂಡೇ ಬಂದಿದ್ದರೆ, ಏಡು ಜಿನ ಇದ್ದು ಹೋಗೋನು "

" ಅವನು ಅದ್ಯಾಕೋ ಎಲ್ಲಿಗೂ ಬರಕಿಲ್ಲ ಅಂತಾನೆ ಪುಟ್ಟಿ. ಹೆಚ್ಚು ಕಮ್ಮಿ ಅವನು ಮನೇಬುಟ್ಟೇ ಈಚಗೆ ಬರಕ್ಕಿಲ್ಲ "

" ಅವನಿಗೆ ಬುದ್ಧಿಯಿಲ್ಲ. ಓಕ್ಕಳ್ಳಿ....ಈಗೇನೂ ಕೆಟ್ಟಗಿಟ್ಟ ಮಾತ್ಲಾಡಕ್ಕಿಲ್ಲ ತಾನೇ ? "

" ಮಾತೇ ಆಡಕ್ಕಿಲ್ಲ, ಸದಾ ಏನೋ ಯೋಚ್ನೆ ಅವನಿಗೆ ? "

" ಅವ್ವಾ....ಮದುವೆ ಗಿದವೆ ಮಾಡಕ್ಕಿಲ್ವವ್ವಾ ಅವನಿಗೆ ? "

" ಹ್ಞೂ....ನಾನೇನು ಮಾಡದು ? ನೀನೇ ಮಾಡು.... ನನ್ದೆಲ್ಲಾ ಮುಗ್ದೋಯ್ತು. ಇನ್ನೆಲ್ಲಾ —ನಿಮ್ದೆ "

" ಓ ಅದಕ್ಕೇನಾ ?–ಹೆಣ್ಣುನೋಡು ಮತ್ತೆ ಈವರ್ಸವೇ ಸೈ "

" ನಾನೆಲ್ಲಿ ನೋಡಕ್ಹೋಗ್ಲಿ ? ಮದುವೆ ಮಾಡೋಳ್ಗೆ ಹೆಣ್ನೋಡದೊಂದು ದೊಡ್ಡದಾ ? "

" ಆಗ್ಲೇಳು. ಅದ್ನೂ ನಮಗೇ ಬುಡು. ನೋಡ್ದಾಕ್ಯ ಮರತೇ ಬುಟ್ಟದ್ದಿ. ನಮ್ದಾವೇ ಒಂದು ಎಣ್ಣದೆ. "

" ಯಾವುದು ಪುಟ್ಟಿ ? ಯಾವುದು ? ನಿನ್ನ ವಾರಗಿತ್ತಿಮಗಳು ಚಿನ್ನ ಅಲ್ವಲ್ಲ ?"

" ಐ. ಅದಾದ್ದ. ಇನ್ನೂ ಎಂಟೊರಸದ ಕೂಸು. ಅದಲ್ಲ ಬೇರೇ ಅದೆ. ನಮ್ಮ ಅಟ್ಟೆಯೋರ್ಗೂ ಬಲುಪ್ರೀತಿ "

" ನನ್ಗೊಗಿ ಏಳ್ಕೊಡು ಪುಟ್ಟಿ. ಯಾವುದಾ ? "

" ತೆಂಕಳ್ಳಿಯದು. ಪಂಡಿತಪ್ಪನ ಮೂರನೇ ಉಡುಗಿ. ಚಂದ್ರಮ್ಮ ಅಂತ. ನಾನೋಡಿಲ್ಲ. ಭಾಳ ಚಂದಾಗದಂತೆ."

" ಔನ್ಹಾದು. ಚನ್ನಾಗದೆ ತಾನೆ! ನಾನೂ ನೋಡಿನ್ನಿ !"

ಮಲ್ಲೇಶನ ಮದುವೆಯ ಕಾರ್ಯ ಹೀಗೆ ಮೊದಲಾಯಿತು. ತಾಯಕ್ಕನೂ ಈಚೆಗೆ ಅದೇ ಯೋಚನೆಯಲ್ಲಿದ್ದಳು. ಸದಾ ಮಂಕಾಗಿರುತ್ತಿದ್ದ ಮಲ್ಲೇಶನಿಗೆ ಮದುವೆಯೇ ಪರಿಣಾಮಕಾರಿಯಾಗಬಲ್ಲ ಔಷಧವೆಂಬುದನ್ನ ವಳೂ ಬಲ್ಲಳು. ಆದರೆ, ಹೆಣ್ಣು ಅವಳ ಮನಸ್ಸಿಗೆ ಬರುವಂತಹುದು ಯಾವುದೂ ಇರಲಿಲ್ಲ. ಆ ದಾರಿಯಲ್ಲಿ ಪುಟ್ಟತಾಯಿಯ ಮಾತು ಬೆಳಕಾಯಿತು.

ತಾಯಿಯು ಬಂದು ಮೈಸೂರಿನ ಸಾಲಸೋಲಗಳನ್ನೆಲ್ಲಾ ವಹಿಸಿಕೊಂಡು ಅದಕ್ಕೆ ಕೆಂಪಣ್ಣನನ್ನು ಜವಾಬ್ದಾರನನ್ನಾಗಿ ಮಾಡಿ ತನ್ನನ್ನು ಊರಿಗೆ ಕರೆದುಕೊಂಡು ಬಂದಲಾಗಾಯ್ತು ಮಲ್ಲೇಶನೂ ತನ್ನ ಎಲ್ಲಾ ವಿಧವಾದ ಮೈಸೂರು ಚಟುವಟಿಕೆಗಳಿಗೂ ತಿಲಾಂಜಲಿ ಕೊಟ್ಟುಬಿಟ್ಟಿದ್ದನು. ಅವನು ಕಿರೀಕಾಟಿಗೆ ಹಿಂದಿರುಗಲು ಕಾಲ ಹಣ್ಣಾಗಿದ್ದಾಗಲೇ ತಾಯಕ್ಕ ಅವನ ಕಣ್ಣಿಗೆ ಬಿದ್ದಿದ್ದುದು. ಮಲ್ಲೇಶನಿಗೆ ಮಾನ ಉಳಿಯಿತು. ಗತಿಯಿಲ್ಲದೇ ಊರಿಗೆ ಹಿಂದಿರುಗಿದನೆಂಬ ಮಾತು ತಪ್ಪಿತು.

ಊರಿಗೆ ಬಂದು ಬಹಳ ದಿನಗಳಾದರೂ ಅವನು ಊರುಬಿಟ್ಟು ಎಲ್ಲಿಗೂ ಹೋಗಿರಲಿಲ್ಲ. ಮನೆಯಾಯಿತು, ತಪ್ಪಿದರೆ ಹೊಲಗಳಾಯಿತು. ಅವನ ಮನಸ್ಸಿನ ತುಂಬಾ ತಾನೊಬ್ಬ ಸ್ವತಂತ್ರ ಮನುಷ್ಯನಾಗುವ ಬಯಕೆ. ಕನಸಿನತುಂಬಾ ತನ್ನ ಕೈಹಿಡಿಯಲು ಬರುವ ಹುಡುಗಿಯ ರೂಪ. ಜಲಜೆ, ಶಾಂತಿ, ' ಪಚ್ಚಿ ' ಯರನ್ನುಮೀರಿಸಿ ಮೆರೆಯುವ ಸೌಂದರ್ಯ. ಮದುವೆಯ ಅಗತ್ಯ ಮಲ್ಲೇಶ, ತಾಯಕ್ಕ ಇಬ್ಬರಿಗೂ ಇದ್ದರೂ ಏನೂ ಪ್ರಯೋಜನವಿರಲಿಲ್ಲ. ಅದನ್ನು ಹೇಗೆ ಮೊದಲುಮಾಡಬೇಕೆನ್ನುವುದೇ ತಾಯಕ್ಕನಿಗೆ ತಿಳಿದಿರಲಿಲ್ಲ. ಪುಟ್ಟತಾಯಿ ಅದನ್ನು ಬಗೆಹರಿಸಿದಳು.

ಪುಟ್ಟತಾಯಿ ತನ್ನ ಗಂಡನ ಸಮೇತ ಒಳ್ಳೆಯ ದಿನದಲ್ಲಿ ಪಂಡಿತಪ್ಪನ ಮನೆಗೆ ಹೋದರು. ಸಂತೋಷದ ಮಾತುಗಳ ಮಧ್ಯೆ ಮಲ್ಲೇಶ–ಚಂದ್ರಮ್ಮ

ಗಳ ಜೋಡಿಕಟ್ಟಿ ಮಾತನಾಡಿಬಂದರು. ಪಂಡಿತಪ್ಪನ ಮನೆಯವರೂ ಕಿರೀಕಾಟಿಯ ಮಲ್ಲೇಶನ ಮನೆಗೆ ಬರುವುದಾಗಿ ಒಪ್ಪಿಕೊಂಡಿದ್ದರು. ಅದ ರಂತೆ ಅವರು ಬಂದಿದ್ದಾಗ, ತಾಯಕ್ಕ ಮುಂದಿನ ಬೀಗರನ್ನು ಶಕ್ತಿಮೀರಿ ಉಪಚರಿಸಿ ಕಳುಹಿಸಿದಳು. ಮಲ್ಲೇಶನನ್ನು ತೆಂಕಳ್ಳಿಗೆ ಕಳುಹಿಸಬೇಕೆಂದು ಕೋರಿ ಬೀಗರು ಊರಿಗೆ ಹೋಗಿದ್ದರು.

ತೆಂಕಳ್ಳಿಯವರು ತಮ್ಮಮನೆಗೆ ಬಂದಿದ್ದಾಗ ಮಲ್ಲೇಶನಿಗೆ ಮದುವೆ ಸೂಕ್ಷ್ಮ ತಿಳಿದದ್ದು. ಹೆಣ್ಣು ತೆಂಕಳ್ಳಿಯದೆಂದಾಗಲೇ ಅವನ ಮನಸ್ಸು ಒಪ್ಪಿತ್ತು. ಹೀಗೆಯೇ ಇರಬಾರದೇಕೆ ಎಂದುಕೊಂಡೇ ತೆಂಕಳ್ಳಿಗೆ ಹೋಗಿ ದ್ದನು. ಜೊತೆಗೆ ಹುಚ್ಚನೂ ಇದ್ದನು. ಅಳಿಯಗಿಳಿಯರಿಗೆ ಹದಿನೈದು ದಿವಸಗಳು ಬಾಳಿಕೆ ಬರುವಂತಹ ಉಪಚಾರ ನಡೆಯಿತು. ಗಂಡು, ಹೆಣ್ಣನ್ನು ಎದುರಿಗೆ ಕುಳ್ಳಿರಿಸಿಕೊಂಡು ನೋಡದಿದ್ದರೂ ತಿಳಿದುಹೋಯಿತು ಚಂದ್ರಮ್ಮ ಮಲ್ಲೇಶ ಊಹಿಸಿದ್ದ ಹೆಣ್ಣೇ ಆಗಿದ್ದಳು. ತಾಯಕ್ಕನೊಡನೆ ಮಲ್ಲೇಶ, ಮೊದಲನೇಬಾರಿ ಮೈಸೂರಿಗೆ ಹೊರಟು ಬೂರುಗದ ಕಟ್ಟೆಯ ಬಳಿಯಿದ್ದಾಗ ಕಂಡಿದ್ದ ಹೆಣ್ಣೇ ಚಂದ್ರಮ್ಮ. ಚಂದ್ರಮ್ಮನನ್ನು ಮಲ್ಲೇಶ ಸಂತೋಷದಿಂದ ಒಪ್ಪಿಕೊಂಡು ತನ್ನ ಸಮ್ಮತಿಯನ್ನು ಹುಚ್ಚನಿಗೆ ಸೂಚಿಸಿ ದನು. ಹುಚ್ಚ, ಪಂಡಿತಪ್ಪ, ತಾಯಕ್ಕ, ಮುಂತಾದವರಿಗೆಲ್ಲಾ ಆ ಸಮ್ಮ ತಿಯ ಡಂಗುರವನ್ನು ಸಾರಿ ಸಂತೋಷಗೊಳಿಸಿದನು.

ಪುಟ್ಟತಾಯಿ ಒಪ್ಪಿಕೊಂಡಿದ್ದಂತೆ ಆ ವರ್ಷವೇ ಮದುವೆ ಏರ್ಪಾ ಡಾಯಿತು. ತಾಯಕ್ಕ ಮಗನ ಮದುವೆಯನ್ನು ಸಾಧ್ಯವಾದಷ್ಟು ವಿಜೃಂ ಭಣೆಯಿಂದಲೇ ಮಾಡಬೇಕೆಂದು ನಿರ್ಧರಿಸಿದ್ದಳು. ಹೇಗಿದ್ದರೂ ಸಾಲ ಮಾಡಿಯೇ ಮಾಡಬೇಕಾಗಿದ್ದುದರಿಂದಲೂ, ಪುನಃ ಚಿಕ್ಕಲಿಂಗಪ್ಪನವರ ಬಳಿಯಲ್ಲೇ ಮಾಡಬೇಕಾಗಿದ್ದುದರಿಂದಲೂ ತಾಯಿ-ಮಕ್ಕಳಿಬ್ಬರೂ ಮಾತ ನಾಡಿಕೊಂಡು ಒಂದು ದೊಡ್ಡ ಕೆಲಸಕ್ಕೆ ನಿಂತರು. ಚಿಕ್ಕಲಿಂಗಪ್ಪನವರಿಗೆ ಮೊದಲಿನಿಂದಲೂ ಒಡೆಯನ ಹೊಲದಮೇಲೆ ಕಣ್ಣಿತ್ತು. ಅದನ್ನು ತಾಯಕ್ಕ ಮಲ್ಲೇಶರು ಖರೀದಿ ಕಟ್ಟಿಸಿದರು. ನಾಲ್ಕುಗುಂಟೆ ಕಡಿಮೆ ಹನ್ನೆರಡು

ಏರುಳವಿದ್ದ ಒಡೆಯನ ಹೊಲ ತಾಯಕ್ಕನ ಕಾಲಕ್ಕೆ ಸ್ವಲ್ಪಸ್ವಲ್ಪವಾಗಿ ಗರಿಕೆಯ ಪಾಲಾಗುತ್ತಿದ್ದುದರಿಂದ ಕಿರೀಕಾಟಿಯವರು ಸಾವಿರದೆಂಟು ನೂರಕ್ಕೆ ಬಂದು ನಿಂತರು. ತಾಯಕ್ಕ ಮಲ್ಲೇಶರು, ಸಾವಿರ ರೂಪಾಯಿಗಳನ್ನು ಸಾಲಕ್ಕೆ ತೆಗೆದುಕೊಂಡು ಇನ್ನು ಎಂಟುನೂರು ರೂಪಾಯಿಗಳನ್ನು ಕೊಟ್ಟರೆ ಒಡೆಯನ ಹೊಲವನ್ನು ಬರೆದುಕೊಡುವುದಾಗಿ ಚಿಕ್ಕಲಿಂಗಪ್ಪನವರಿಗೆ ತಿಳಿಸಿದರು. ಆ ಮಾತನ್ನು ಅವರಿಗೆ ತಿಳಿಸಿದವನು ಮಾದೇವೂ. ಮಾದೇವೂ ಆದುದರಿಂದ ಚಿಕ್ಕಲಿಂಗಪ್ಪನವರು ಒಪ್ಪಬೇಕಾಯಿತು. ಪತ್ರ 'ರಿಜಿಸ್ಟರ್' ಆದ ಮೇಲೆಯೇ ಮದುವೆಗೆ ಪ್ರಾರಂಭವಾದದ್ದು.

ತಾಯಕ್ಕ ಹೇಳಿದ ಎಲ್ಲಾ ನೆಂಟರನ್ನೂ ಕರೆಯಲು ಪುಟ್ಟತಾಯಿಯೇ ನಿಂತಿದ್ದಳು. ಅವಳು ನಗುನಗುತ್ತಾ ಬಸವಣ್ಣನ ಮನೆಯೊಳಕ್ಕೆ ಕಾಲಿರಿಸಿದಾಗಲೇ ಬಸವಣ್ಣ-ದಂಪತಿಗಳಿಗೆ ಇದ್ದ ಮನಸ್ತಾಪದಲ್ಲಿ ಕಾಲುಭಾಗ ಕಳೆದುಹೋದಂತಾಗಿತ್ತು ಬಸವಣ್ಣ-ದಂಪತಿಗಳನ್ನು ಖಂಡಿತ ಕರೆಸಿಕೊಳ್ಳಬೇಕೆಂದಿದ್ದ ತಾಯಕ್ಕ ಪುಟ್ಟತಾಯಿಗೆ ರಹಸ್ಯವನ್ನು ಹೇಳಿಕೊಟ್ಟಿದ್ದಳು. ನೆಂಟರುಗಳಿಗೆ ಉಡಿಸಬೇಕಾದ ಸೀರೆಗಳ ಮಾತನ್ನು ಪುಟ್ಟತಾಯಿ ಚನ್ನೂರಮ್ಮನಲ್ಲಿ ವಿಶದವಾಗಿ ಆಡಿದ್ದಳು. ಚನ್ನೂರಮ್ಮನಲ್ಲಿ ಉಳಿದಿದ್ದ ಮನಸ್ತಾಪವೂ ಒಂದೇ ಬಾರಿಗೆ ತೊಳೆದುಹೋದಂತಾಯಿತು. ಪುಟ್ಟತಾಯಿ ಬಂದು ಕರೆದಿರುವಾಗ ಬರದೇ ಉದಾಸೀನ ಮಾಡುವಹಾಗಿರಲಿಲ್ಲ. ಅವಳು ಹಿಂದಿನ ಪುಟ್ಟತಾಯಿ ಆಗಿರಲಿಲ್ಲ.

ಹೀಗೆ ಪುಟ್ಟತಾಯಿ ಈ ಕೆಲಸಕ್ಕೆ ನಿಂತಮೇಲೆ ಬರಬೇಕಾದ ನೆಂಟರೆಲ್ಲ ತಪ್ಪಿಸಿಕೊಳ್ಳದೇ ಸಕಾಲಕ್ಕೆ ಕಿರೀಕಾಟಿಗೆ ಬಂದು ಸೇರಿದರು. ಪಂಡಿತಪ್ಪಕೂಡ ನೆಂಟರ ಸಂಖ್ಯೆಗೆ ಹೆದರುವ ಮನುಷ್ಯನಾಗಿರಲಿಲ್ಲ. ಅವನಿಗೂ ತುಂಬಿದಮನೆಗೆ ಹೆಣ್ಣನ್ನು ಕೊಟ್ಟ ಜಂಭ ಬೇಕಾಗಿಯೇ ಇತ್ತು. ಅವನಿಗಿದ್ದದ್ದು ಒಂದೇ ಒಂದು ಸಣ್ಣ ಅಸಮಾಧಾನ. ಒಡೆಯನ ಹೊಲವನ್ನು ಸಂಪೂರ್ಣವಾಗಿ ಖರೀದಿಗೆ ಕೊಟ್ಟುಬಿಟ್ಟದ್ದು. ಅದೊಂದನ್ನು ಬಿಟ್ಟು ಇನ್ನು ಯಾವ ರೀತಿಯ ದುಗುಡಕ್ಕೂ ಕಾರಣವಿರಲಿಲ್ಲ. ಮಲ್ಲೇಶ ಯಾವ ವಿಧದಲ್ಲಿಯೂ ಚಂದ್ರಮ್ಮನಿಗೆ ಅನರ್ಹನಾಗಿರಲಿಲ್ಲ.

ತಾಯಕ್ಕನೂ ಸೊಸೆಗೇನೂ ಕಡಿಮೆ ಮಾಡಿರಲಿಲ್ಲ. ಕಾಸಿನ ಸರ, ದೊಡ್ಡ ಸೀರೆ, ಬೆಳ್ಳಿಯ ಡಾಬು, ಚೈನು ಎಲ್ಲವನ್ನೂ ಮಾಡಿಸಿದ್ದಳು. ಪಂಡಿತಪ್ಪ ಅಳಿಯನಿಗೆ ಒಂದು ಕೋಟು ಒಂದು ಜೊತೆ ಶರಟು, ಪಂಚೆ, ಒಂದು ವಲ್ಲಿ ತೆಗೆದಿದ್ದನು. ತೆಂಕಳ್ಳಿಯಲ್ಲಿ ಮದುವೆ ಚೆನ್ನಾಗಿ ನಡೆಯಿತು. ಮುಹೂರ್ತಕ್ಕೆ ಸರಿಯಾಗಿ ಧಾರೆಗೆ ಪ್ರಾರಂಭಿಸಿ 'ಲಗ್ನ ಸಾಧಿಸಿದೆ' ಎಂದು ಸ್ವಾಮಿಗಳು ಒಂದರ ಬದಲು ಎರಡು ಚಿಟಿಕಿ ನಶ್ಯವನ್ನು ಒಟ್ಟಿಗೆ ಹಾಕಿಕೊಂಡರು. ಹೆಣ್ಣಿನ ಕಡೆಯ ದಂಪತಿಗಳೆಲ್ಲರೂ ಬಂದು ಧಾರೆ ಎರೆದಾದ ಮೇಲೆ ಪಂಡಿತಪ್ಪನ ಸೋದರತ್ತೆ ಬಂದಿತು. ಆ ಮುದುಕಿಗೆ ತುಂಬಾ ಹುಷಾರಿರಲಿಲ್ಲವಂತೆ. ಆದರೂ ಕಷ್ಟಪಟ್ಟುಕೊಂಡು ಒಂದಿಬ್ಬರು ಬೇಡವೆಂದರೂ ಧಾರೆಯೆರೆಯಲು ಬಂದಿತು. ಅದು ನಡೆದುಕೊಂಡು ಬಂದದ್ದು ಎಲ್ಲರಿಗೂ ತೆವಳಿಕೊಂಡು ಬಂದಷ್ಟು ಕಷ್ಟಕರವಾಗಿ ಕಂಡಿತ್ತು.

ಮುದುಕಿ ಧಾರೆಯೆರೆಯುತ್ತಾ ಹೇಳಿತು. 'ಮಲ್ಲಪ್ಪಾ....ನಿಮ್ಮಕ್ಕನ ಲಗ್ನದಲ್ಲೇನಾಯ್ತು ನೆಪ್ಪಯ್ತಾ ಕೂಸು. ಇದೇ ಚಂದ್ರಮ್ಮನ ಜೊತೇಲಲ್ಲವಾ ನೀನು ನಿಮ್ಮಕ್ಕನ್ಗೆ ದಾರೆ ಎರ್ದದು?' ಎಂದು ಆ ಮುದುಕಮ್ಮನ ಮಾತಿನಿಂದ ಮಲ್ಲೇಶನಿಗೆ ಆ ದಿನದ ನೆನಪು ಬಂತು. ಎದುರಿಗೆ ಕುಳಿತಿದ್ದ ಹೆಂಡತಿಯ ತಗ್ಗಿಸಿದ ಮುಖವನ್ನು ನೋಡಿದನು. ಹೌದು.... ಗುಲಾಬಿ ಲಂಗದ ಹುಡುಗಿಯ ಮುಖವೇ! ಈಗಿನಷ್ಟು ಬೆಳೆದಿರಲಿಲ್ಲ. 'ಏನೀ ಋಣಾನುಬಂಧ!' ಎಂದುಕೊಂಡನು. ಒಂದು ಘಳಿಗೆ ತನ್ನ ಮದುವೆಯು ಯಾವುದೋ ಕತೆಯಂತೆ ತೋರಿತು.

ಮದುವೆ ಸಾಂಗವಾಗಿ ನೆರವೇರಿದ ಮೇಲೆ ಮಲ್ಲೇಶನೊಬ್ಬನನ್ನುಳಿದು ಗಂಡಿನ ಕಡೆಯವರೆಲ್ಲರೂ ಕಿರೀಕಾಟಿಗೆ ಬಂದರು. ತಾಯಕ್ಕ ಚನ್ನೂರಮ್ಮನಿಗೆ ಒಳ್ಳೆಯ ಸೀರೆಯೊಂದನ್ನುಡಿಸಿ ಕಳುಹಿಸಬೇಕೆಂದಿದ್ದುದರಿಂದ ಮುಖ್ಯವಾದ ನೆಂಟತಿಯರೆಲ್ಲರಿಗೂ ಸೀರೆಗಳನ್ನು ತರಿಸಿಡಬೇಕಾಗಿತ್ತು. ಚನ್ನೂರಮ್ಮ, ಪುಟ್ಟತಾಯಿಯರಿಬ್ಬರಿಗೂ ಒಂದೇ ದರ್ಜೆಯ ಸೀರೆಯನ್ನು ತರಲಾಗಿತ್ತು. ಆ ಸೀರೆಯಿಂದ ಚನ್ನೂರಮ್ಮನಿಗೆ ಸಂತೋಷವೇನೋ ಬೇಕಾದಷ್ಟಾಯಿತು. ಆದರೂ ಮದುವೆಯ ಓಡಾಟದಲ್ಲಿ ತನಗೆ ಪ್ರಾಮುಖ್ಯತೆ

ಕೊಡದೆ ಮಾರೇಗೌಡನ ಹುಂಡಿಯವಳಿಗೂ ಪುಟ್ಟತಾಯಿಗೂ ಮುಂದಾಳತ್ವ ಕೊಟ್ಟಿದ್ದುದು ಅವಳಿಗೆ ಸಹಿಸಿರಲಿಲ್ಲ. ಕಿರೀಕಾಟಿಗೆ ಹೆಣ್ಣುಗಂಡು ಬಂದ ಮಾರನೆಯ ದಿವಸ ಚನ್ನೂರಮ್ಮ ತನ್ನೂರಿಗೆ ಹೊರಟುಹೋದಳು. ಅವಳಿಗೂ ಚಂದ್ರಮ್ಮನಿಗೂ ಅದೇಕೋ ಸ್ವಲ್ಪ ಹೆಚ್ಚು ವಿಶ್ವಾಸ ಕಂಡುಬರುತ್ತಿತ್ತು.

ನೆಂಟರುಗಳೆಲ್ಲಾ ಅವರವರ ಊರುಗಳಿಗೆ ತಲಪಿಕೊಂಡಮೇಲೆ ಕಿರೀಕಾಟಿಯಲ್ಲಿ ಮಲ್ಲೇಶನಿಗೆ ಹೆಂಡತಿಯೊಡನೆ ಆಡಿಕೊಂಡಿರಲು ಬೇಕಾದಷ್ಟು ಅವಕಾಶವಿರುತ್ತಿತ್ತು. ತಾಯಕ್ಕ ಅದಕ್ಕೆ ಸಾಕಾದಷ್ಟು ಆಸ್ಪದವನ್ನು ಕೊಟ್ಟು ಕೊಂಡಿದ್ದಳು. ಸೊಸೆಯ 'ಬೇಕು-ಬೇಡ'ಗಳನ್ನು ಬಹಳವಾಗಿ ವಿಚಾರಿಸಿ ಕೊಳ್ಳುತ್ತಿದ್ದಳು. ಅದು ತುಂಬ ತೋರಿಕೆಯ ವಿಶ್ವಾಸವಾಗುವುದೇನೋ ಎಂದು ಆಗಾಗ್ಗೆ ಹಾಗೆ ಮಾಡಬಾರದು, ಹೀಗೆ ಆಡಬಾರದು ಎಂದೂ ಹೇಳುತ್ತಿದ್ದಳು.

ಒಂದು ದಿನ ಮಧ್ಯಾಹ್ನ ತಾಯಿ ಮನೆಯಲ್ಲಿಲ್ಲದೇ ಆಟವಾಡುತ್ತಿದ್ದಾಗ ಮಲ್ಲೇಶ ಹೆಂಡತಿಯನ್ನು ಕೇಳಿದನು. 'ಚಂದೀ, ನಾಳಿದ್ದು ನಿಮ್ಮೂರಿಗೆ ಹೊರಟ್ಹೋಗ್ತೀಯಲ್ಲ. ನನಗೆ ಭಾಳ ಬೇಜಾರಾಗತ್ತಲ್ಲ ಏನು ಮಾಡೋದು ?' ಅದಕ್ಕೆ ಚಂದ್ರಮ್ಮ 'ನೀವೂ ನನ್ನ ಜೊತೇಲೇ ಬಂದು ತಿಂಕಳ್ಳೀಲೇ ಇದ್ದುಬುಡಿ' ಎಂದಳು. 'ನಮ್ಮವ್ವನ್ನಒಬ್ಳನ್ನೇ ಇಲ್ಲಿ ಬುಟ್ಟು ಬುಟ್ಟು ?' ಎಂದಿದ್ದಕ್ಕೆ 'ನೀವು ಮೈಸೂರ್ಲಿದ್ದಾಗ ಅವರೊಬ್ರೇ ಇರ್ಲಿಲ್ವ ?' ಎಂದಳು. 'ಅವಳ್ನೂ ಕರಕಂಡು ಬಂದ್ರೇ ಆಗೊಲ್ವಾ ಚಂದಿ ?' ಎಂದಾಗ ಅವಳ ಮುಖ ನೀರಸವಾಯಿತು. 'ನನಗ್ಯಾಕೋ ಅವರ್ನ ಕಂಡರೆ ಒಂತರಾ ಅಂಜಿಕೆ. ಆ ಜಿನ .... ನಾನು ತಾಳೇ ಊವು ಕೊಟ್ಟೋತ್ಗೆ ರೇಕ್ಕಂಡ್ರು ನೋಡಿ ಬಸನ್ನಾವು? ಆವತ್ನಿಂದಲೇ ನನಗೆ ಆ ಹೆದರಿಕೆಯಾಗಿರದು'ಎಂದಳು ಚಂದ್ರಮ್ಮ. ಹಾಗೆ ಹೆದರಿಸಿದ ತಾಯಕ್ಕ ಅತ್ತೆಯೇ ಆಗಬೇಕಾಗಿತ್ತೆ ? ಅದು ತಾಯಕ್ಕನ ದುರದೃಷ್ಟ. ಚಂದ್ರಮ್ಮ ಅವಳ ಸೊಸೆಯಾದದ್ದು ಮಲ್ಲೇಶ ತನ್ನ ಅದೃಷ್ಟವೆಂದುಕೊಂಡಿದ್ದನು.

ರೂಪದಲ್ಲೇನು ? ಅದೃಷ್ಟದಲ್ಲೂ ಚಂದ್ರಮ್ಮ ಉತ್ತಮಳಾಗಿದ್ದಳು. ಅವಳನ್ನು ಪಡೆದ ಸಂಭ್ರಮದಲ್ಲಿ, ಹಳೆಯ ನೋವುಗಳ ಅನುಭವದ ಪ್ರೇರ

ಣೆಯಿಂದ ಮಲ್ಲೇಶ ತನ್ನ ಮನೆಯ ಅಭಿವೃದ್ಧಿಯ ಕಡೆಗೆ ತೀವ್ರ ಗಮನ ಕೊಡತೊಡಗಿದ್ದನು. ಚಿಕ್ಕಲಿಂಗಪ್ಪನವರ ಸಾಲ ಇನ್ನು ಎಂಟನೂರೈವತ್ತು ರೂಪಾಯಿಗಳಿದ್ದವು. ಅದನ್ನು ತೀರಿಸಿಬಿಡಲು ತನ್ನ ಮೊದಲ ಗಮನವನ್ನು ಕೊಟ್ಟು ದುಡಿಯುತೊಡಗಿದ್ದನು. ಹೆಂಡತಿ ತೌರಿಗೆ ಹೋದಮೇಲೆ ರೇಷ್ಮೆ ವ್ಯವಸಾಯವನ್ನು ಕೈಗೊಂಡನು. ತಾಯಕ್ಕನೂ ತನ್ನ ಕೈಲಾಗುವ ಒತ್ತಾಸೆಗೆ ನಿಂತಳು. ಲಕ್ಕೀ ಹೊಲವ ತುಂಬ ಹಿಪ್ಪೆನೇರಳೆಯನ್ನೇ ಏಳಿಸಿದನು. ಸಾಲ ತೀರುವವರೆಗೂ ಜೋಳ ರಾಗಿಯನ್ನು ಕೊಂಡು ತಿಂದರೂ ಸರಿಯೆ ಎಂದು ರೇಷ್ಮೇ ಹುಳುವನ್ನು ಸಾಕುವುದೇ ಮುಖ್ಯವಾಗಿಟ್ಟುಕೊಂಡನು. ಪಂಡಿತಪ್ಪ ಹಿಪ್ಪನೇರಳೆ ಬೆಳೆಗೆ ಕುಂಟೆಗಿಂಟೆ ಹೊಡೆಯಲು ತಮ್ಮ ಕರುಗಳನ್ನು ಕಳಿಸಿಕೊಟ್ಟಿದ್ದರು. ಹೆಂಡತಿ ತನ್ನ ಸ್ವಾಧೀನಳಾಗುವುದರೊಳಗೆ ಚಿಕ್ಕಲಿಂಗಪ್ಪನವರ ಸಾಲವನ್ನು ಇಲ್ಲದಂತೆ ಮಾಡಿರಬೇಕೆಂದು ಹಟ ತೊಟ್ಟು ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಹಗಲೂರಾತ್ರಿ ದುಡಿಯಹತ್ತಿದನು. ಹಿಪ್ಪನೇರಳೆ ಸೊಪ್ಪಿನೊಡನೆ ಆಸುವುದು ತಾಯಕ್ಕನಿಗೆ ಸಾಧ್ಯವಿಲ್ಲದ ಮಾತಾಗಿತ್ತು. ಅದು ಮಹಾ ಉಷ್ಣಕಾರಿಯಾದದ್ದು. ಅದರಿಂದ ತಾಯಕ್ಕನಿಗೆ ಹೊಟ್ಟೇ ನೋವಿನ ಸೂಚನೆ ಕಾಣಿಸಿಕೊಳ್ಳಲಾರಂಭಿಸಿತು. ಆದರೆ ಮಗನ ಉತ್ಸಾಹದೊಂದಿಗೆ ದುಡಿದಳು. ಚಂದ್ರಮ್ಮನ ಅದೃಷ್ಟವಿರಬೇಕು. ರೇಷ್ಮೆಗೂಡಿನ ಧಾರಣೆ ಮಣಕ್ಕೆ ನಲವತ್ತೈದು, ಐವತ್ತೆಂದು ಏರುತ್ತಲೇ ನಡೆಯಿತು. ಚಿಕ್ಕಲಿಂಗಪ್ಪನವರಿಗೂ ಯಾವುದೋ ಕೋರ್ಟಿನ ವ್ಯವಹಾರ ಸಿಕ್ಕಿಹಾಕಿಕೊಂಡಿದ್ದಂತಿತ್ತು. ಅವರು ಮಲ್ಲೇಶ ಚಿಲ್ಲರೆ ಚಿಲ್ಲರೆಯಾಗಿ ಕೊಡುತ್ತಿದ್ದ ಹಣವನ್ನು ತೆಗೆದುಕೊಂಡು ಮಾತಾಡದೆ ವಸೂಲು ಕಟ್ಟಿಕೊಳ್ಳುತ್ತಿದ್ದರು. ಮಲ್ಲೇಶನ ಶಪಥ ನೆರವೇರಿತು. ಹುಚ್ಚ ಮಲ್ಲೇಶನ ಮೈಮೇಲೆ ಓಕುಳಿ ಎರಚಿದ ದಿನಕ್ಕೆ ಒಂದು ತಿಂಗಳ ಹಿಂದೆಯೇ ಚಿಕ್ಕಲಿಂಗಪ್ಪನವರ ಋಣದಿಂದ ಮಲ್ಲೇಶ ಮುಕ್ತನಾದನು.

ಇದರಿಂದ ಕಿರೀಕಾಟಿಯಲ್ಲೇ ಅಲ್ಲದೇ ತೆಂಕಳ್ಳಿ, ಗುಜ್ಜಗೆರೆಗಳಲ್ಲೂ ಅವನ ಬೆಲೆ ಹೆಚ್ಚಿತು. ಪಂಡಿತಪ್ಪ ಮಾದೇವು ಇಬ್ಬರೂ ಮಲ್ಲೇಶನ ದೊಡ್ಡಸ್ತಿಕೆಯ ಪ್ರಚಾರಕ್ಕೆ ನಿಂತವರಂತಿದ್ದರು. ಮಾವನ ಸಹಾಯದಿಂದ

ಅವನು ಮನೆಯ 'ರಿಪೇರಿ' ಮಾಡಿಸಿಕೊಂಡರೆ ಮಾದೇವೂಗೆ ಹೊಟ್ಟೆಕಿಚ್ಚು ಬಂದು, ಲಕ್ಕೀ ಹೊಲದಲ್ಲಿದ್ದ ಗರಿಕೆಯನ್ನಗೆಸಲು ತಾನಾಗಿ ಮುಂದೆ ಬಂದು ಸಹಾಯಮಾಡಿದ್ದನು. ಇಬ್ಬರ ಸಹಾಯವನ್ನೂ ಮಲ್ಲೇಶ ಉಳಿಸಿ ಕೊಳ್ಳದೇ ಹಿಂದಿರುಗಿಸಿಯೂ ಬಿಡುತ್ತಿದ್ದನು. ಹೀಗಾಗಿ ಎಂಟೇ ಎಂಟು ತಿಂಗಳಲ್ಲಿ ಹುಡುಗ ಮಲ್ಲೇಶನನ್ನು ಊರಿನ ನ್ಯಾಯಗಳಿಗೆ ಆಹ್ವಾನಿಸು ವಂತಾಯಿತು. ಇಂತಹ ಗೌರವಗಳು ಸಿಕ್ಕುತ್ತ ಸಿಕ್ಕುತ್ತ ಅವನ ಉತ್ಸಾಹ ಹೆಚ್ಚುತ್ತ ಬಂದು, ಸಂಪಾದನೆಯ ಮಧ್ಯೆ ಹೊತ್ತು ಹುಡುಕಿಕೊಂಡು ಇನ್ನೊ ಬ್ಬರ ಸಹಾಯಕ್ಕೂ ನಿಲ್ಲುತ್ತಿದ್ದನು.

ಕೊದಲಯ್ಯ ದರಖಾಸ್ತಿನಲ್ಲಿ ಕೊಂಡಿದ್ದ ಪಾಳುಭೂಮಿಗೆ ಹಣ ಕಟ್ಟಿ ದ್ದರೂ ಸರ್ಕಾರದವರು ಸಾಗುವಳಿಗೇ ಕೊಟ್ಟಿರಲಿಲ್ಲ. ಅದು ಆರುವರ್ಷದಿಂದ ಹಾಗೆಯೇ ಬಿದ್ದಿತ್ತು. ಆ ಕಾಗದಪತ್ರಗಳು ಮೈಸೂರು ಡೆಪ್ಯುಟೀ ಕಮೀ ಷನರ ಕಛೇರಿಯಲ್ಲಿ ಸತ್ತುಬಿದ್ದಿದ್ದವು. ಅದನ್ನು ಹುಡುಕಿಸಿ, ಓಡಾಡಿಸಿ, ಜಮೀನು ಸಾಗುವಳಿಗೆ ಕೊಡಿಸಿದವನು ಮಲ್ಲೇಶನೇ. ನಾಲ್ಕು ವರ್ಷದಿಂದ ಕೋರ್ಟಿನಲ್ಲಿ ಕಚ್ಚಾಡುತ್ತಿದ್ದ ಯೀರಣ್ಣನಿಗೂ ತಾಣ್ಯದ ಕುರೀನಂಜನಿಗೂ ಹೆದರಿಕೆ ಹುಟ್ಟಿಸಿ ರಾಜಿಮಾಡಿಸಿದವನೂ ಮಲ್ಲೇಶನೇ. ಕಿರೀಕಾಟಿಗೆ ಹೆಸರಿಗೆ ಮಾತ್ರ ಗೌಡನಾಗಿದ್ದ ಸುಬ್ಬಣ್ಣನನ್ನು ಕಟ್ಟಿಕೊಂಡು ಓಡಾಡಿಸಿ, ಪಂಚಾ ಯಿತಿಯ ಸಂಬಳದಲ್ಲಿ ಗ್ರಾಮಕ್ಕೊಬ್ಬ ಝಾಡಮಾಲಿಯನ್ನು ನೇಮಿಸಿ ಕೊಳ್ಳಲು ಆರ್ಡರ್‌ಮಾಡಿಸಿದವನೂ ಮಲ್ಲೇಶನೇ. ಕಿರೀಕಾಟಿಯ ಸ್ಕೂಲಿಗೆ ಒಬ್ಬರಜೊತೆಗೆ ಮತ್ತೊಬ್ಬ 'ಮೇಷ್ಟ್ರ' ಬಂದದ್ದೂ ಅವನ ಪ್ರಭಾವದಿಂದಲೆ. ಎಲ್ಲಕ್ಕಿಂತ ಮುಖ್ಯವಾಗಿ ಅರವತ್ತು ವರ್ಷಗಳಿಂದ ಹೂತುಹೋಗಿದ್ದ, ಕಿರೀ ಕಾಟಿ, ನರಿಯಾಲದ ಮಧ್ಯೆ ಇದ್ದ ರಂಗೋಲೆಕಟ್ಟೆಯನ್ನು ದುರಸ್ತು ಮಾಡಿ ಸುವ ಯೋಚನೆಯನ್ನು ಊರಿನವರ ತಲೆಯಲ್ಲಿ ಹಾಕಿ, ಅದು ಸತ್ತುಹೋಗ ದಂತೆ ಊಸಿರು ತುಂಬುತ್ತಲೇ ಇದ್ದು ಸಾಮೂಹಿಕ ವಾಣಿಯಲ್ಲಿ ಅದನ್ನು ದಿವಾನರವರೆಗೂ ಮುಟ್ಟಿಸಿ ಸರ್ಕಾರದಿಂದ ಅರ್ಧ ಹಣ ದೊರೆಯುವಂತೆ ಏರ್ಪಾಡುಮಾಡಿದ ಕೀರ್ತಿ ಮಲ್ಲೇಶನಿಗೆ ದೊರೆಯಿತು. ಆಬಗ್ಗೆ ಊರಿನ ನಾಲ್ಕಾರುಜನ ಹಿರಿಯರು ಅವನನ್ನು ಹೊಗಳಿದಾಗ ಮಲ್ಲೇಶ " ಅಯ್ಯೋ

ನಾನು ಕಷ್ಟಪಟ್ಟು, ಮುಂದುಮುಂದಕ್ಕೆ ಓದಬಾರದಾಗಿತ್ತೆ? "ಎಂದು ಕೈಕೈ ಹಿಸುಕಿಕೊಂಡನು.

ಮಗ ಏನಾದರೇನು? ತಾಯಕ್ಕನಿಗೆ ಅವನಮೇಲೆ ಹೇಳಿಕೊಳ್ಳಬೇಕಾಗಿದ್ದ ದೂರುಗಳು ಬೇಕಾದಷ್ಟಿದ್ದವು. ಮಲ್ಲೇಶನ ಬೆಲೆ ಹೆಚ್ಚುತ್ತ ಹೋದಂತೆ ಅವಳ ಬೆಲೆ ಮನೆಯಲ್ಲಿ ತಗ್ಗುತ್ತ ನಡೆದಿತ್ತು. ಮಲ್ಲೇಶ ಯಾವಯಾವ ಮಹಾಕಾರ್ಯಗಳನ್ನು ಮಾಡುತ್ತಿದ್ದಾನೆಂಬುದು ಅವಳಿಗೆ ಸ್ವಲ್ಪವೂ ತಿಳಿಯುತ್ತಿರಲಿಲ್ಲ. ಅದನ್ನೂ ಊರಿನ ಅವರಿವರು ಅವಳಿಗೆ ಹೇಳಿಕೊಡಬೇಕಾಗಿತ್ತು. ಸೊಸೆ ಚಂದ್ರಮ್ಮ ಏಕೋ ಅತ್ತೆಯೊಡನೆ ಹೆಚ್ಚಾಗಿ ಮಾತನಾಡುತ್ತಲೇ ಇರಲಿಲ್ಲ. ಮೈಮೇಲೆ ಬಿದ್ದು ಮಾತನಾಡಿಸಿದರೂ ಒಂದೇ ಪದದ ಉತ್ತರಗಳನ್ನು ಕೊಟ್ಟು ಸುಮ್ಮನಾಗುತ್ತಿದ್ದಳು. ಉಡುವ ಸೀರೆ, ಉಣ್ಣುವ ಮುದ್ದೆಗೆ ಆತಂಕವಿರಲಿಲ್ಲ. ಆದರೆ ಮಗ-ಸೊಸೆಯರ ಮೌನ ಅವಳನ್ನು ಬಲವಾಗಿ ಹಿಂಸಿಸುತ್ತಿತ್ತು.

ಅದಕ್ಕೆ ಕಾರಣಗಳು ಹೀಗಿದ್ದವು. ಮಲ್ಲೇಶ ತನ್ನ ತಾಯಿ ತನ್ನ ವಿದ್ಯಾಭ್ಯಾಸವನ್ನು ಸರಿಯಾದ ದಾರಿಯಲ್ಲಿ ಮಾಡಿಸಲಿಲ್ಲವೆಂದೂ, ವೃಥಾ ಖರ್ಚುಗಳನ್ನು ಮಾಡಿ, ಸಾಲಮಾಡಿ, ಆಸ್ತಿಯನ್ನು ಪೋಲುಮಾಡಿಬಿಟ್ಟಳೆಂದೂ ನಿರ್ಧರಿಸಿಕೊಂಡಿದ್ದನು. ಇಬ್ಬರ ಮಕ್ಕಳ ಮದುವೆಯೂ ತುಂಬಾ ದುಂದುಗಾರಿಕೆಯಲ್ಲಿ ನಡೆಯಿತೆಂದು ಅವನ ಅಭಿಮತ. ತನ್ನ ಮದುವೆಯಲ್ಲಿ ನೆಂಟತಿಯರಿಗೆ ಉಡಿಸಿ ಕಳುಹಿಸಿದ ಸೀರೆಗಳ ಲೆಕ್ಕವನ್ನು ಅವನು ಕೊನೆಯವರೆಗೂ ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ. ಹೀಗೆ ಸಣ್ಣಪುಟ್ಟ ಕಾರಣಗಳನ್ನೆಲ್ಲಾ ಅವನು ಸಿದ್ಧಪಡಿಸಿಕೊಂಡಿದ್ದನು. ಇವೆಲ್ಲಾ ಸಮಯಬಂದರೆ ಅವರಿವರ ಎದುರಿನಲ್ಲಿ ಒಪ್ಪಿಸುವುದಕ್ಕೆ ಅಳವಡಿಸಿಕೊಂಡಿದ್ದವು. ಆದರೆ ಯಾರಿಗೂ ಹೇಳಿಕೊಳ್ಳಲಾರದ, ಆದರೆ ಅತಿ ಮುಖ್ಯವಾದ ಕಾರಣ ಒಂದೇ ಒಂದು. ಬಾಲ್ಯದಲ್ಲಿ ತಾನು ಕಣ್ಣಾರೆ ಕಂಡಿದ್ದ ಒಂದು ದೃಶ್ಯ. ಸೆತ್ತೆಯೊಡನೆ ತನ್ನ ತಾಯಿಯ ಸಂಬಂಧವನ್ನು ಪ್ರಕಟಪಡಿಸಿದ, ಆ ರಾತ್ರಿಯ ದೃಶ್ಯ.

ಚಂದ್ರಮ್ಮನಿಗೂ ಈ ವಿಷ ಪ್ರಯೋಗವಾಗಿತ್ತು–ಚನ್ನೂರಮ್ಮನಿಂದ! ಚಂದ್ರಮ್ಮ ಅದರ ಸತ್ಯಾಸತ್ಯಗಳನ್ನು ಗಂಡನಲ್ಲಿಯೇ ವಿಚಾರಿಸಿದ್ದಳು.

ಯಾರು ಹೇಳಿದರೆಂದು ಕೇಳಿದರೆ, ಸರಿಯಾಗಿ ಗೊತ್ತಿಲ್ಲವೆಂದು ಹೇಳುತ್ತಿದ್ದಳು. ಗಂಡನು ತನ್ನ ಪ್ರಶ್ನೆಗೆ ಧೈರ್ಯವಾಗಿ ಉತ್ತರ ಹೇಳುತ್ತಿರಲಿಲ್ಲವಾದುದರಿಂದ ಅವಳಿಗೂ ಆ ವರ್ತಮಾನವು ಖಚಿತವಾಗಿಯೇ ಇತ್ತು. ಇದಲ್ಲದೇ ತಾಯಕ್ಕನ ಬೆದರಿಕೆಯಿಂದ ಮೊದಲನೋಟದಲ್ಲಿಯೇ ಉಂಟಾಗಿದ್ದ ಭೀತಿ ಬೇರೆ ಬೆಳೆಯುತ್ತಲೇ ಇದ್ದಿತು.

ಅಂತೂ ತಾಯಕ್ಕ ಮಗ ಸೊಸೆಯರ ಮನಸ್ಸಿನಿಂದ ದಿನದಿನಕ್ಕೆ ದೂರವಾಗತೊಡಗಿದಳು. ಅಂತೆಯೇ ಅವಳ ತಾಳ್ಮೆಯೂ ಕ್ರಮೇಣ ಕೆಡುತ್ತ ಬಂದು ಗೊಣಗಲು ಪ್ರಾರಂಭಿಸಿದಳು. ಅವಳ ಗೊಣಗನ್ನು ಕೇಳಲಾರದೇ ಮಗ ಸೊಸೆಯರು ಗಟ್ಟಿಯಾಗಿ ಒಂದೆರಡು ಮಾತುಗಳನ್ನಾಡುತ್ತಿದ್ದರು. ಅದನ್ನು ತಾಯಕ್ಕ ರಣರಂಪ ಮಾಡುತ್ತಿದ್ದಳು. ಕಣ್ಣೀರಿನಲ್ಲಿ ಕೈತೊಳೆಯುತ್ತಿದ್ದಳು. ಬೇಕುಬೇಕೆಂದೇ ಊಟ ಮಾಡದೇ ಹೊಟ್ಟೆನೋವೆಂದು ಮಲಗಿಬಿಡುತ್ತಿದ್ದಳು. ಹೊಟ್ಟೆನೋವಿಲ್ಲದಿದ್ದಾಗ ಒಂದೆರಡು ದಿನಗಳಲ್ಲಿ ಮಲ್ಲೇಶನ ಯಾವ ಬಲವಂತದ ಉಪಚಾರಕ್ಕೂ ಒಳಗಾಗದೆ ಇರುತ್ತಿದ್ದ ತಾಯಕ್ಕ ನಿಜವಾದ ಹೊಟ್ಟೆನೋವಿನ ದಿನಗಳಲ್ಲಿ ಉಪಚಾರವಿಲ್ಲದೇ ನರಳಬೇಕಾಗಿತ್ತು.

ಈ ಹೊಟ್ಟೆಯುರಿಯನ್ನೆಲ್ಲಾ ತಾಯಕ್ಕ ಊರಿನ ಒಬ್ಬಿಬ್ಬರೆದುರಿನಲ್ಲಿ ತೋಡಿಕೊಳ್ಳುತ್ತಿದ್ದುದುಂಟು. ಕೆಲವರು ಅವಳಿಗೆ ಮುಖಭಂಗವಾಗಬಾರದೆಂದು “ಅಯ್ಯೋ ಪಾಪ, ಹಂಗಾ ?” ಎಂದು ತಲೆಯಾಡಿಸುತ್ತಿದ್ದರು. ಕೆಲವರು ಎದುರಿಗೇ “ಎದ್ದೋಗಮ್ಮೋ ನಿನಗಿನ್ಯಾನ ಕೆಲಸ? ನೀನು ಅಂತಾ ಮಗಾಸೊಸೆ ಪಡೆಯಕ್ಕೆ ಹಿಂದಿನ ಜಲ್ಮದಲ್ಲಿ ಕೋಟಿಲಿಂಗಪೂಜೆ ಮಾಡಿದ್ದೆ” ಎಂದು ಕಳಿಸುತ್ತಿದ್ದರು. ಅದೇ ಮಾತನ್ನು ಮಲ್ಲೇಶನ ಮದುವೆಯ ದಿನಗಳಲ್ಲಿ ಯಾರ ಬಾಯಲ್ಲಿಯೋ ಕೇಳಿದ್ದ ತಾಯಕ್ಕ ಆನಂದಪಟ್ಟಿದ್ದಳು. ಈಗ ಅದೇ ಮಾತಿಗೆ ದುಃಖಪಡುತ್ತಿದ್ದಳು.

ಮಗ ಸೊಸೆಯರಮೇಲೆ ಅವಳು ಹೇಳುತ್ತಿದ್ದ ಚಾಡೀಮಾತುಗಳನ್ನು ಪ್ರಪಂಚ ನಂಬುತ್ತಿರಲಿಲ್ಲ. ಆದರೆ ಅವಳು ಹೇಳಿಕೊಳ್ಳುವುದನ್ನು ಮಾತ್ರ

ಬಿಡುತ್ತಿರಲಿಲ್ಲ. ಏಕೆಂದರೆ ಅವಳ ಮಾತನ್ನು ನಂಬುವವಳು ಆ ಪ್ರಪಂಚದಲ್ಲಿ ಒಬ್ಬಳಿದ್ದಳು. ಅವಳೇ ಕಾಳಕ್ಕ! ಕಾಳಕ್ಕನ ನಂಬುವಿಕೆಯಿಂದ ತಾಯಕ್ಕನಿಗಾಗುತ್ತಿದ್ದ ಪ್ರಯೋಜನವೇನೂ ಇರದಿದ್ದರೂ ತಾಯಕ್ಕನ ಮನಸ್ಸು ಹಗುರವಾಗುತ್ತಿತ್ತಂತೆ. ಹಾಗೆ ಹಗುರವಾದಾಗ ತಾಯಕ್ಕ ಹೇಳುತ್ತಿದ್ದಳು. "ಕಾಳಕ್ಕ, ಈ ಬಡಾಯ್ಕ್ಯಾರ ಮೂದೇವಿಗಳು ನನಗೆ ಧರ್ಮಕ್ಕೆ ಹಿಟ್ಟೊಟ್ಟಿ ಕೊಡ್ತಾ ಇರೋ ಅಂಗೆ ಆಡ್ತವೆ. ಈಗ್ಲೂ ನಾನು ನನ್ನ ಹೊಟ್ಟೆಬಟ್ಟೆ ಸಾಕ್ಕಬಲ್ಲೆ ಗೊತ್ತಾ? ಮೈಸೂರು ಕೆಂಪದೇವಿ ಏಳ್ತಿದ್ಳು. ಅಲ್ಲಿ ಅರಸ್ಗಳ ಮನೇಲಿ, ಒಟ್ಟೆಬಟ್ಟೆ ಅಲ್ಲದೆ ತಿಂಗಳಿಗೆ ಎರಡೆರಡು ರೂಪಾಯಿ ಸಂಬಳಾನೂ ಕೊಡ್ತಾರಂತೆ ಗೊತ್ತಾ? ನಾನು ಯಾವಾಗಲೂ ಅದಕ್ಕೆ ಸಿದ್ಧವಾಗಿದ್ದೇ ಇನ್ನಿ" ಎನ್ನುತ್ತಿದ್ದ ತಾಯಕ್ಕನ ಮಾತನ್ನು ಬೆಳೆಯಗೊಡುತ್ತಿರಲಿಲ್ಲ ಕಾಳಕ್ಕ. ತಾಯಕ್ಕನ ಹೊಟ್ಟೆಯನೋವಿನ ಹಿರಿಮೆ ಕಾಳಕ್ಕನಿಗೆಸಂಪೂರ್ಣವಾಗಿ ತಿಳಿದಿತ್ತು. ತನ್ನ ಗೆಳತಿ ಸಾಯುವ ಕಡೆಗಾಲದಲ್ಲಿ ಎಲ್ಲೆಲ್ಲಿಯೋ ಬಿದ್ದಿದ್ದು ಸಾಯಬಾರದೆಂಬುದೇ ಅವಳ ಬಯಕೆ. ಈ ತಾಯಿಮಕ್ಕಳ ಜಗಳದಲ್ಲಿ ಮಗನು ಸ್ವಲ್ಪ ತಗ್ಗಬೇಕಾಗಿದೆಯೆಂಬುದು ಕಾಳಕ್ಕನ ವೈಯುಕ್ತಿಕ ತೀರ್ಪಾಗಿದ್ದರೂ ಅವಳು ತಾಯಕ್ಕನಿಗೇ ತಗ್ಗಿಬಾಳಲು ಉಪದೇಶ ಮಾಡುತ್ತಿದ್ದಳು.

ಇಷ್ಟರಲ್ಲಿ ತಾಯಕ್ಕನ ಅಪರಾಧವೇ ದಿನದಿನಕ್ಕೆ ಹೆಚ್ಚುತ್ತಿತ್ತು. ಅವಳ ಹಿಂದಿನ ತೂಕವಾದ ಮಾತುಗಳು ಕ್ರಮೇಣ ಹಗುರವಾಗುತ್ತಾ ಬಂದು ಈಚೆಗೆ ತುಂಬಾ ನೀಚತನಕ್ಕಿಳಿದು ನಿಂತಿತ್ತು. ವಯಸ್ಸಾಗುತ್ತ ಬಂದಂತೆ ಅವಳ ಸಿಡುಕು ದುಸ್ಸಹವಾಗುತ್ತ ಬಂದಿತ್ತು. ಅವಳ ಹೇಸಿಗೆಯ ಮಾತುಗಳಿಗೆ ಹೇಸಿಗೆಯ ಉತ್ತರವೇ ಮಲ್ಲೇಶನ ಬಾಯಿಂದ ಬಂದುಬಿಡುತ್ತಿತ್ತು. ಕಾಳಕ್ಕ ಎಷ್ಟು ಪ್ರಯತ್ನಪಟ್ಟರೂ ತಾಯಿಮಕ್ಕಳ ನಡುವಿನ ಕಂದಕವನ್ನು ಮುಚ್ಚಲಸಾಧ್ಯವಾಗಿತ್ತು. ನಾಲ್ಕು ದಿನಕ್ಕೊಮ್ಮೆ ಹೊಟ್ಟೆ ಬೇನೆಯಿಂದ ನರಳುತ್ತಿದ್ದ ತಾಯಕ್ಕನನ್ನು ತನ್ನ ಮನೆಗೆ ಕರೆದುಕೊಂಡು ಉಪಚಾರ ಮಾಡುವುದೂ ಅಷ್ಟೇ ಅಲೌಕಿಕವಾಗಿತ್ತು ಕಾಳಕ್ಕನಿಗೆ. ಆಗ ಅಂದುಕೊಳ್ಳುತ್ತಿದ್ದಳವಳು. "ಈ ಪ್ರಾಣೀನಾ ಆ ಆಳು ಹೊಟ್ಟೇನೋವು ಸಾಯಸಾದರೂ ಆಕಬಾರ್ದ!"

ನರಳುತ್ತಲೇ ಒಟಿಗುಟ್ಟುತ್ತ ಬಿದ್ದಿರುತ್ತಿದ್ದಳು ತಾಯಕ್ಕ. ತಲೆ ಬಾಗಿಲಿನ ಬಲಕ್ಕೆ ರಾಗೀಕಲ್ಲು ಹೂತಿದ್ದ ಕಡೆ ಒಂದು ಚಾಪೆ ಹಾಸಿ ಬಿಳಿಯ ಕಂಬಳಿ ಕೊಟ್ಟು ಅವಳನ್ನು ಮಲಗಿಸಲಾಗಿತ್ತು. ಅವಳು ಹೊಟ್ಟೆಗೆ ಏನನ್ನೂ ಸರಿಯಾಗಿ ತೆಗೆದುಕೊಳ್ಳದೇ ನೊಣಮುತ್ತಿಸಿಕೊಂಡು ಹೊರಳುತ್ತಿದ್ದಳು. ಐದಾರು ದಿನಗಳವರೆಗೂ ಈ ದೃಶ್ಯವನ್ನು ನೋಡಿ ನೋಡಿ ಸಾಕಾಗಿ ಮಲ್ಲೇಶ ತಾಲ್ಲೋಕಿನಿಂದ ಡಾಕ್ಟರನ್ನು ಕರೆತಂದ. ತಾನು ಹಾಗೆಯೇ ಒದ್ದಾಡಿಸತ್ತರೂ ಡಾಕ್ಟರ ಕೈಯಲ್ಲಿ ಮುಟ್ಟಿಸಿಕೊಳ್ಳುವುದಿಲ್ಲವೆಂದೂ ಅವರು ಕೊಡುವ ಔಷಧವನ್ನು ತೆಗೆದುಕೊಳ್ಳುವುದಿಲ್ಲವೆಂದೂ ಹಟ ಹಿಡಿದು, ಬೋರಲಾಗಿ ಬಿದ್ದವಳು ಯಾವ ಬಲಾತ್ಕಾರಕ್ಕೂ ಬಗ್ಗಲಿಲ್ಲ. ಕಾಳಕ್ಕ ಚಂದ್ರಮ್ಮನ ಮಾವನ ಕೈಯ್ಯಿನ ಶಂಖಭಸ್ಮದಿಂದ ಅವಳಿಗೆ ಖಂಡಿತ ಗುಣ ವಾಗುತ್ತದೆಂದು ಸಲಹೆಕೊಟ್ಟಳು. ಮಾರನೆಯ ದಿನವೇ ಶಂಖಭಸ್ಮ ಹಾಜರಾಯಿತು.

ಚಂದ್ರಮ್ಮನೇ ನಿಂತು ಕಾಳಕ್ಕನ ಕೈಲಿ ಶಂಖಭಸ್ಮವನ್ನೂ ಬಿಸಿ ನೀರನ್ನೂ ಕೊಟ್ಟು ಅತ್ತೆಗೆ ಕೊಡಿಸಿದಳು. ಅದು ಪಂಡಿತಪ್ಪನ ಶಂಖಭಸ್ಮ ವೆಂದು ತಿಳಿದಕೂಡಲೇ ತಾಯಕ್ಕ ಕೈಗೆ ತೆಗೆದುಕೊಂಡಿದ್ದ ಔಷಧವನ್ನು ತೊಟ್ಟಿಗೆ ಎಸೆದುಬಿಟ್ಟಳು. "ಥೂ........ ಇವಳಪ್ಪನ ಔಷ್ತೀಯಾ........ ಇವರು ಅವನ ಕೈಲಿ ನನಗೆ ವಿಷ ಆಕಕ್ಕೆ ಹೇಸೀರಾ ?.... ಜೀವ ಹೋದ್ರೂ ಸತಿ.... ನಾ ತಕಳಕ್ಕಿಲ್ಲ" ಎಂದು ಬಿದ್ದುಕೊಂಡಳು. ಚಂದ್ರಮ್ಮ ಕಿಡಿಕಿಡಿ ಯಾದಳು.

"ನೋಡಿದ್ರಾ ಕಾಳಕ್ಕ ಮಾತ ? ಇವಳಿಗೆ ವಿಷ ಹಾಕಿಬುಟ್ಟು ನಾವು ಇವಳ ಮೈಮೇಲಿರೋ ಮಣಗಟ್ಲೇ ಚಿನ್ನ ಗೋರ್ಕಳ್ಬೇಕಾಗಿತ್ತು ಅಲ್ವಾ ? ನಮ್ಮಪ್ಪ ವಿಷ ಹಾಕ್ತನಂತೆ ?"

"ನೋಡ್ದ್ಯಾ ಕಾಳಕ್ಕ ಚಿನಾಲೀನ! ನೀನು ತಾನು ಅಂದದ್ದ ಕೇಳ್ದ್ಯೋ ಇಲ್ಲವೋ? ಇನ್ನು ನಾನು ಈ ಭೂಮೀಮೇಲಿದ್ದರೇನು ಸತ್ತರೇನು ಕಾಳಕ್ಕ ?"

" ಚಿನಾಲಿ ಗಿನಾಲಿ ಅಂದರೆ ನೋಡು ನಿನ್ನ ಸುಮ್ನೆ ಬುಡಕ್ಕಿಲ್ಲ!—ಚಂದ್ರಮ್ಮ ಸಿಡಿದುಬಿದ್ದಳು.

" ಏನ್ಮಾಡ್ಬಲ್ಯೇ ನೀನು ? ಬೆಳೀ ಮೂದೇವಿ ? ನಿನ್ನ ಗಂಡ ಹಾರಸ್ಬುಟ್ಟನಾ ನನ್ನ ? " ತಾಯಕ್ಕ ರೋಷದಿಂದ ಹೇಳಿದಳು.

" ನಿನ್ನಂತಾ ಗರತಿ ಒಂದ್ಗೂ ಮಾತಾಡದಾ— ಅತ್ತಾಗೆ ಬಿದ್ಕಂಡು ಸಾಯಿ " ಎಂದು ಚಂದ್ರಮ್ಮ ಅಲ್ಲಿ ನಿಲ್ಲದೇ ಹೊರಟುಹೋದಳು. ಅವಳಿಗೆ ತನ್ನ ಅಪ್ಪನಮೇಲೆ ಬಂದ ಮಾತಿನಿಂದಾಗಿ ಅಸಾಧ್ಯ ದುಃಖವಾಗಿತ್ತು. ಒತ್ತರಿಸಿ ಬರುತ್ತಿದ್ದ ಕಣ್ಣೀರೆಲ್ಲವನ್ನೂ ಗಂಡನ ಇದಿರಿನಲ್ಲಿ ಹರಿಸಲು ತಡೆದಿದ್ದಂತಿತ್ತು. ಸ್ವಲ್ಪ ಹೊತ್ತಿನ ಹಿಂದೆ ಸಂತೋಷದಿಂದ ಸರ್ವೇ ಸೂಪರಿಂಟೆಂಡೆಂಟರೊಡನೆ ಮಾತಾಡಿಕೊಂಡು ಗೆಲುವಾಗಿ ಮನೆಗೆ ಬಂದ ಮಲ್ಲೇಶನೆದುರಿನಲ್ಲಿ ಚಂದ್ರಮ್ಮನ ಕಣ್ಣುಗಳಿಂದ ಜಲಪ್ರಳಯವಾಯಿತು.

ಮಲ್ಲೇಶ ತಾಯಿಯ ಬಳಿಗೆ ಓಡಿಬಂದು ಒರಟಾಗಿ ಅವಳನ್ನೆತ್ತಿ ಕೂಡಿಸಿ " ಹಾಳಾಗೋದವಳೇ, ನಾವ್ಹೇಳ್ದಂಗೆ ಕೇಳ್ಕಂಡು ಬಿದ್ದಿರ್ತೀಯೋ—ಇಲ್ದೇಹೋದ್ರೆ ಎಲ್ಲಾದರೂ ಕಣ್ಣಿಗೆ ಮರೆಯಾಗಿ ಹಾಳಾಗೋಗ್ತೀಯೋ ಹೇಳು " ಎಂದನು. ತಾಯಕ್ಕ ಬೆಕ್ಕಸಬೆರಗಾಗಿಹೋದಳು.

ಬೆಳಿಗ್ಗೆ ತಾಯಕ್ಕ, ಬಿಳಿಯ ಕಂಬಳಿ, ಎರಡೂ ಕಾಣಿಸಿಗಲಿಲ್ಲ.



## ೧೫

ಇನ್ನು ಶಂಭುಗೌಡರ ತಾಳ್ಮೆ ಹೆಚ್ಚು ದಿನಗಳಿರುವಂತೆ ತೋರಲಿಲ್ಲ. ಚಿಕ್ಕಲಿಂಗಪ್ಪನವರು ಶಂಭು ಗೌಡರ ವಂಶದ ಸುಳಿಯನ್ನೇ ಕೈಗೆ ತೆಗೆದು ಕೊಂಡಿದ್ದರು. ಅದನ್ನವರು ಚಿವುಚಿಹಾಕುವುದರೊಳಗೆ ಶಂಭುಗೌಡರು ಅದಕ್ಕೆ ತಕ್ಕ ಪ್ರತಿಬಂಧಕವನ್ನು ಮಾಡಿಕೊಳ್ಳಬೇಕಾಗಿತ್ತು. ಶಂಭು ಗೌಡರ ಇಬ್ಬರು ಮಕ್ಕಳ ಪೈಕಿ ದೊಡ್ಡವನಿಗೆ ಎರಡು ಕಣ್ಣುಗಳೂ ಇರಲಿಲ್ಲ. ಅವನು ಸದಾ ಜಗಲಿಯ ಕೊಠಡಿಯಲ್ಲಿದ್ದುಕೊಂಡು 'ತತ್ತ್ವ'ಗಳನ್ನು ಹೇಳಿಕೊಳ್ಳು ತ್ತಿದ್ದವನು. ಎರಡನೆಯಮಗ ನೀಲಕಂಠುವಿಗೆ ಸುಮಾರು ಹದಿನೆಂಟು ವರ್ಷ ವಿರಬೇಕು. ಗೌಡರು ಅವನನ್ನು ಚೆನ್ನಾಗಿ ಸಾಕಿದ್ದರು. ಅವನೂ ಅಣ್ಣನ ನೆರೆಯಲ್ಲಿದ್ದುಕೊಂಡು ಹಾಡುವುದನ್ನು ಕಲಿತಿದ್ದನು. ನೀಲಕಂಠನಿಗೆ ಚೆನ್ನಾಗಿ ಹಾಡಲು ಬರುತ್ತದೆಂದು ಸೆತ್ತೆಯೇ ಬಹಳದಿನಗಳಿಂದ ಹೊಗಳುತ್ತ ಬಂದಿದ್ದನು. ಅದನ್ನು ಪ್ರಕಾಶಗೊಳಿಸಲು ಗುಜ್ಜಗೆರೆಯಲ್ಲಿ ಒಂದು ನಾಟಕದ ಏರ್ಪಾಡಾಗಬೇಕಾಗಿತ್ತು. ಅದನ್ನು ಚಿಕ್ಕಲಿಂಗಪ್ಪನವರು ಬಹಳ ಆಳವಾಗಿ ಆಲೋಚಿಸಿ ಪ್ರಾರಂಭಿಸಿಬಿಟ್ಟಿದ್ದರು. ನೀಲಕಂಠು ತಾನಾಗಿಯೇ ಬಂದು ಆ ಬಲೆಗೆ ಸಿಕ್ಕಿಹಾಕಿಕೊಂಡನು. 'ಗಯ ಚರಿತ್ರೆ'ಯನ್ನು ಕಲಿಯಬೇಕೆಂದು ಸೂಚಿಸಿದ ನೀಲಕಂಠುವಿನ ಮಾತನ್ನು ಚಿಕ್ಕಲಿಂಗಪ್ಪನವರು ತೆಗೆದು ಹಾಕಲಿಲ್ಲ. ಆದರೆ ಸೆತ್ತೆ ನಿಂಗಪ್ಪನು 'ಹಾರ್ಮ್ಮೋನಿ ಮೇಷ್ಟ್ರು'ಗುವುದನ್ನು ವಿರೋಧಿಸಿದರು. ಮೈಸೂರಿಂದಲೇ ಸ್ವಂತ 'ಲೆಗ್ ಹಾರ್ಮೋನಿ'ಯಿರುವ 'ಮಾಧು'ವನ್ನು ಕರೆಸುತ್ತೇನೆಂದು ಪಟೇಲರು ಹೇಳಿದರು. 'ಮಾಧು' ಹೇಳಿ ದರೆ ದೊಡ್ಡದೊಡ್ಡ ಪಾರ್ಟನ್ನು ಮಾಡುವ ಚಿಕ್ಕಚಿಕ್ಕ ವಯಸ್ಸಿನ ಹೆಂಗಸರು ಬಂದು ಗುಜ್ಜಗೆರೆಯ ನಾಟಕದಲ್ಲಿ ಪಾತ್ರ ವಹಿಸುತ್ತಾರೆಂದು ಹೇಳಿದ್ದರು. ಬೇಕಾದರೆ ಕರೆಸುವ ಏರ್ಪಾಡನ್ನೂ ತಮ್ಮ ಸ್ವಂತ ಖರ್ಚಿನಿಂದ ಮಾಡುವು ದಾಗಿ ಪಟೇಲರು ಮಾತುಕೊಟ್ಟಮೇಲೆ. ಅಂಥಹ ಹೆಂಗಸರೆದುರಿನಲ್ಲಿ ಹಾಡಿ 'ಸೈ' ಎನ್ನಿಸಿಕೊಳ್ಳಬೇಕೆಂಬ ನೀಲಕಂಠುವಿನ ಆಸೆಯ ಎದುರಿಗೆ 'ಸೆತ್ತೆ' ಸೆತ್ತೆಯೇ ಆಗಿಹೋದನು.

ಸೆತ್ತೆಯ ಕ್ರೋಧ ಇದರಿಂದ ಚಿಕ್ಕಲಿಂಗಪ್ಪನವರ ಮೇಲೆ ಬೆಳೆದು ಹೆಮ್ಮರವಾಯಿತು. ಇವರು ನಾಟಕವನ್ನು ಹೇಗೆ ಮಾಡುವರೋ ನೋಡೋ ಣವೆಂದು, ಕೆಲಸವಿಲ್ಲದಿದ್ದರೂ ಗುಜ್ಜಗೆರೆಯಲ್ಲಿಯೇ ಠಿಕಾಣಿ ಹೂಡಿದ್ದ. 'ಮಾಥು' ಬಂದು ತನ್ನ ಬಿಡಾರವನ್ನು ಅಟ್ಟಹಾಸದಲ್ಲಿ ಪಟೇಲರ ಏರ್ಪಾಡಿ ನಂತೆ ಖಾಲಿಯಾಗಿದ್ದ ಸಾಹೇಬರ ಮಳಿಗೆಯೊಂದರಲ್ಲಿ ಬೀಡು ಬಿಟ್ಟನು. ಮಾಥು, ಸೆತ್ತೆ ಇಬ್ಬರೂ ಮಾದೇವೂವಿನ ಹೊಟೇಲಿನಲ್ಲಿ ಆಗಾಗ್ಗೆ ಸೇರುತ್ತಿ ದ್ದರು. ಇಬ್ಬರಿಗೂ ಒಬ್ಬರ ವಿಷಯ ಇನ್ನೊಬ್ಬರಿಗೆ ಗೊತ್ತಿತ್ತು. ಆದರೆ 'ಮಾಥು'ವಿನ ಎತ್ತಿದ ಹುಬ್ಬನ್ನು ಕಂಡರೆ ಸೆತ್ತೆಗೆ ಸಿಗಿದುಹಾಕಿಬಿಡುವಷ್ಟು ಕೋಪ ಬರುತ್ತಿತ್ತು. ಅದರೇನು ? ಸೆತ್ತೆಗೆ ಬಿಡಾರ ಚಾವಡಿಯಲ್ಲಿ ಎಂಬು ದರಿಂದಲೇ ಅವನಿಗೆ ಗುಜ್ಜಗೆರೆಯಲ್ಲಿ ಒಂದು ಪ್ರಾಣಿಯ ಬೆಂಬಲವೂ ಇಲ್ಲ ವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಮಾದೇವೂ ಹಿಂದಿನಷ್ಟು ಬಡವನಾಗಿದ್ದಿದ್ದರೆ ಅವನನ್ನು ತನ್ನ ಹೊಟಲಿಗೆ ಸೇರಿಸುವ ಧೈರ್ಯವೂ ಇರುತ್ತಿತ್ತೋ ಇಲ್ಲವೋ ತಿಳಿಯದು.

ಮಾದೇವೂ ಆಯೋಚನೆ ಮಾಡಿದಾಗಲೆಲ್ಲ ಹೆದರಿಕೆಯಾಗುತ್ತಿತ್ತು. ತನಗೆ ಇಷ್ಟು ಧೈರ್ಯ ಬಂದದ್ದು ತನ್ನ ಅನುಕೂಲತೆಯಿಂದ. ಚಿಕ್ಕಲಿಂಗಪ್ಪನ ವರೇ ಆಗಲಿ, ಗೌಡರೇ ಆಗಲಿ ಯಾರೊಬ್ಬರೂ ಅವನನ್ನು ಮೇಲೆ ಹಾಕಿ ಕೊಳ್ಳಲು ಸಿದ್ಧರಾಗಿರಲಿಲ್ಲ. ಮಾದೇವೂಗೆ ಕೂಡ ಹಳ್ಳಿಯ ರಾಜಕೀಯದಲ್ಲಿ ಪ್ರವೇಶಿಸಲು ಆಸೆಯೇನಿರಿಲಿಲ್ಲ. ಆದುದರಿಂದ ಊರಿನ ಎರಡು ಪಾರ್ಟಿ ಗಳಿಗೂ ಸೇರಿದಂತೆ—ಅಥವಾ ಸೇರದಂತೆ ಇರಬಹುದಾದ ಸ್ಥಿತಿಯನ್ನವನು ಗಳಿಸಿಕೊಂಡಿದ್ದನು. ಅದೂ ತನ್ನ ಹೆಂಡತಿಯ ಪುಣ್ಯದಿಂದಲೇ ಎಂಬುದವನ ನಂಬಿಕೆ.

ಹಳ್ಳಿಯ ಈ ರಾಜಕೀಯವನ್ನೆಲ್ಲಾ ಹೆಂಡತಿಗೆ ಆಗಾಗ್ಗೆ ವರ್ಣಿಸಿ ದಾಗ 'ಅಯ್ಯೋ ನಂಗದ್ನೆಲ್ಲಾ ಏಳಬೇಡಿ- ನನಗೆ ಯಾಕೋ ಎದರಿಕೆಯಾ ಗ್ತದೆ' ಎನ್ನುತ್ತಿದ್ದಳು. ಈ ನಾಟಕದಿಂದಾಗಿ ಗುಜ್ಜಗೆರೆಯಲ್ಲಿ ಪಾರ್ಟಿ ಏರ್ಪಟ್ಟು ಎಂದಾದರೂ ಒಂದು ದಿನ ಮಚ್ಚು-ದೊಣ್ಣೆಗಳು ಹಾರಾಡಬಹು ದೆಂದು ಮಾದೇವೂ ಕೂಡ ಆಲೋಚಿಸಿಯೇ ಇದ್ದನು. ಅದರಂತೆ ತನ್ನ

ಹೆಂಡತಿಯೂ ಯೋಚಿಸಿಕೊಂಡು ಹಾಗೆ ಹೇಳುವಳೆಂದು ತಿಳಿದುಕೊಂಡು ಮಾದೇವೂ ಸುಮ್ಮನಾಗುತ್ತಿದ್ದನು. ಆದರೆ ಕೆಲವು ದಿನಗಳ ಅನುಭವದಲ್ಲಿ ಅವನಿಗೆ ತನ್ನ ಹೆಂಡತಿಯು ತನ್ನ ಎಲ್ಲಾ ಮಾತುಗಳಿಗೂ ಅಷ್ಟೇ ನಿರಾಸಕ್ತಿ ಯನ್ನು ತೋರಿಸುತ್ತಿರುವಳೆಂಬುದು ತಿಳಿಯಿತು. ಪುಟ್ಟತಾಯಿ ಮಾತನ್ನು ಕಡಿಮೆ ಮಾಡಿಬಿಟ್ಟಿದ್ದಳು. ಸದಾ ಯಾವುದೋ ಧ್ಯಾನದಲ್ಲಿರುವವಳಂತಿ ದ್ದಳು. ಮಾತನಾಡಿಸುತ್ತಿದ್ದಷ್ಟು ಕಾಲವೂ ಬಲವಂತವಾಗಿ ಮಾತನಾಡು ತ್ತಿದ್ದು ಅನಂತರ ಥಟ್ಟನೆ ಸುಮ್ಮನಾಗಿಬಿಡುತ್ತಿದ್ದಳು.

ಹೆಂಡತಿಯ ನಗುವನ್ನೇ ದಿನದ ತುಂಬಾ ಕಾಯುತ್ತ– ಅದಕ್ಕಾಗಿಯೇ ದುಡಿಯುತ್ತಿದ್ದ ಮಾದೇವೂಗೆ ಇದರಿಂದ ಬಲು ದುಃಖವಾಯಿತು. ಒಂದು ರಾತ್ರಿ ಪುಟ್ಟತಾಯಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ತಲೆ ಸವರುತ್ತಾ ಕೇಳಿದನು.

"ಇದ್ಯಾಕೆ ಪುಟ್ಟಾ ನೀನು ದಿನದಿನಕ್ಕೆ ಸಪ್ಪಗಾಯ್ತಾ ಬತ್ತಾ ಇದೀಯಲ್ಲ ? "

"ಅಂಗಾ ? ಇಲ್ಲವಲ್ಲ.... ನೀವಂಗಂದರೆ ಮೊಕ ಸಪ್ಪಗಾಗೇ ಆಯ್ತದೆ, ಅಷ್ಟೆ ! "

"ಇಲ್ಲ- ಪುಟ್ಟ ನಿನ್ನ ಮನಸ್ಗೆ ಏನೋ ಒಂದು ಯೋಚನೆ ಹತ್ಕಂಡದೆ. ನನಗೆ ಚನ್ನಾಗ್ಗೊತ್ತು. ಸುಮ್ಮನೆ ಒಳಗೇ ಮಡಿಕಂಡಿದ್ರೇನಾದ್ದು ಪುಟ್ಟಾ ಯಾವತ್ತಿದ್ರೂ ನನ್ನ ಅತ್ರ ಏಳ್ಲೇಬೇಕಲ್ಲ. ಇವತ್ತು ಏಳಿಬುಡು ಕೂಸು"

"ಏನೇಳ್ಲೀ ? ಇಲ್ಲ ಅಂದರೆ ನೀವು ಕೇಳಕ್ಕಿಲ್ಲ. ಈಗ ಥಟ್ಟಂತಾ ಏಳಕ್ಕೆ ಯಾವದ್ನೂ ಯೋಚ್ನೇನೂ ಮಾಡ್ಕಂಡಿಲ್ಲ ಏಳ್ಲೀ ಬೇಕೂಂದ್ರೆ ಎರಡು ಮೂರು ದಿನ ವಾಯಿದೆ ಕೊಡಿ. ಏನಾದ್ರೂ ಒಂದು ಹೇಳ್ಕೊಟ್ಟೇನು"

"ಮಾತು ಮರೀಸೋ ಮಾತಾಡ್ಬೇಡ ಪುಟ್ಟ. ನಿನ್ನ ಮನಸ್ನಲ್ಲೇನದೆ ಏಳು. ನನ್ನ ಕೈಲಾದದ್ನೆಲ್ಲಾ ಮಾಡಿ ನಡಿಸ್ಕೊಡ್ತೀನಿ. ನೀನು ಸಪ್ಪಗಿದ್ದರೆ ಓಟಲ ತಿಂಡಿ, ಟೀಯೆಲ್ಲಾ ಕೆಟ್ಹೋಯ್ತದೆ ಪುಟ್ಟ"

—ತನ್ನ ಬೇಸರದ ಮುಖದಿಂದ ಹೊಟೆಲಿನ ತಿಂಡಿಗಳ ರುಚಿ ಕೆಡು ತ್ತವೆ ಎಂಬ ಮಾತನ್ನು ಕೇಳಿ ಪುಟ್ಟತಾಯಿಯ ಶುಷ್ಕ ನಗುವಿನಲ್ಲಿ ಸ್ವಲ್ಪ

ರಸ ಕಾಣಿಸಿತು. ಮಾದೇವೂಗೆ ಆ ನಗು ಬೇರೆಯ ಸೂಚನೆಯೊಂದನ್ನು ಕೊಟ್ಟಿತು. ಅವನೇ ಮುಂದುವರಿಸಿದ.

"ಓ ಗೊತ್ತಾಯ್ತು. ನನಗೆ ಗೊತ್ತಾಯ್ತು"

"ಏನು ಗೊತ್ತಾಯ್ತು ? "

"ನಿನ್ನ ಮನಸ್ಸು. ನಿನ್ನ ಸೇಯಿತಗಾತಿ ಪದ್ಮಾವತಮ್ಮನಿಗೆ ಗಂಡು ಮೊಗ ಆದಾಗ್ಲಿಂದ್ಲೂ ನೀನೊಸಿ ಪೆಚ್ಚು ಅಲ್ವಾ !

"ಯಾವ ಪದ್ಮಾವತಮ್ಮ !"

"ಅದೇ ಶಾಂತರಾಜಯ್ಯನ ಸೊಸೆ........"

"ಅವಳ್ಗಿಸರೇನಾ ? ಪದ್ಮಾವತಮ್ಮನಾ ನನಗೆ ಗೊತ್ತಿಲ್ಲಾ.... ನಾವು ಕೂಗದು ಪತ್ತಮ್ಮ.... ಪತ್ತೀಂತ"

"ಸರಿ. ನಾಹೇಳಿದ್ದು ಸರಿಯಾ ? "

"ಥೂ.... ಬರೀ ಸುಳ್ಳು."

"ನನ್ನಾಣೆಗೂ ?"

"ನಿಮ್ಮಾಣೆಗೂ ಅದರ ಚಿಂತೆ ಅಸ್ಟಿಲ್ಲ"

"ಹಂಗಾದರೆ ಗೊತ್ತಾಯ್ತು ಬುಡು ಈ ಸತಿ."

"ಏನು ?.... ಅದ್ನೂ ಹೇಳಿ"

"ನಾ ಹೇಳದಿಲ್ಲ."

ಮಾದೇವೂ ಹೇಳಲೇ ಇಲ್ಲ. ಮಾಡಬೇಕಾದ ಕೆಲಸ ಮಾಡಿದಾ ಯಿತೆಂದುಕೊಂಡನು. ಈ ಕೆಲಸವನ್ನು ಆಗಲೇ ಮಾಡಬೇಕೆಂದಿದ್ದದ್ದು. ಗೊತ್ತುಗುರಿ ಸಿಕ್ಕದೇ ಸುಮ್ಮನಿರಬೇಕಾಗಿತ್ತು. ಪುಟ್ಟತಾಯಿಯ ಅಳು ಮುಖ ಅವನನ್ನು ಚುರುಕುಗೊಳಿಸಿದಂತಾಯಿತು. ಯಾರ ಬಳಿಗೆ ಹೋದರೆ ಸರಿಯಾದ ಸಮಾಚಾರ ಸಿಕ್ಕುತ್ತದೆ ಎಂಬುದನ್ನು ಅವನ ಮನಸ್ಸು ಕಂಡುಹಿಡಿಯಿತು. ಅದು ಹೊಳೆದ ಮಾರನೆಯ ದಿನವೇ ನರಿಯಾಲದ ಸಂತೆ. ಸಂತೆಯ ನೆವ ಹೇಳಿ ಅವನು ಹೊರಟದ್ದು ಕಿರೀಕಾಟಿಗೆ.

ಕಿರೀಕಾಟಿ ಕಾಳಕ್ಕ ಮಾದೇವೂ ಜೊತೆಯಲ್ಲಿ ಮಾತನಾಡುತ್ತಾ ಕುಳಿತಿದ್ದಾಗ ಅವಳಿಗೂ ಜ್ಞಾಪಕ ಬಂದಿತು. ಹೀಗಿರಬಹುದೆಂದು ಮಾ

ದೇವೂಗೆ ಹೇಳಿಕೊಟ್ಟಳು. ಅನಂತರ ಮಲ್ಲೇಶನನ್ನು ಕಂಡರೂ ಮಾದೇವೂ ಅವನಿಂದ ವರ್ತಮಾನವನ್ನು ತೆಗೆದುಕೊಂಡನೇ ಹೊರತು ತಾನೇನನ್ನೂ ಹೇಳಲಿಲ್ಲ. ನೆಪಕ್ಕೆ ಸಂತೆಗೂ ಹೋಗಿದ್ದು ಊರು ಸೇರಿಕೊಂಡನು. ಎರಡು ಮೂರು ದಿನಗಳು ಕಳೆದ ಮೇಲೆ ತಾನು 'ಮಾಧು' ಜತೆಯಲ್ಲಿ ಸ್ವಲ್ಪ ಮೈಸೂರಿಗೆ ಹೋಗಿ ಬರುವುದಾಗಿಯೂ, ಮುಂದಿನ ಸಂತೆಗೆ ತಾನು ನಾಲ್ಕು ಮಣ 'ಲಾಡು' ಮಾಡಬೇಕಾಗಿದೆಯೆಂದೂ ಅದಕ್ಕಾಗಿ ಎಣ್ಣೆ, ಕಡಲೇಹಿಟ್ಟುಗಳನ್ನು ತರುವುದಾಗಿಯೂ ಹೆಂಡತಿಗೆ ಹೇಳಿ ಹೋದನು.

ಮಾಧುವಿನ ಜೊತೆಯಲ್ಲಿ ಅವನು ಹೋದುದೂ ನಿಜ. ಬರುವಾಗ ಎಣ್ಣೆ, ಕಡಲೆಹಿಟ್ಟುಗಳನ್ನು ತಂದದ್ದೂ ನಿಜ. ಆದರೆ ತೆಂಕಳ್ಳಿಯಿಂದ ಕಟ್ಟಿಸಿಕೊಂಡು ಬಂದಿದ್ದ ಗಾಡಿಯಿಂದ ಕೇವಲ ಎಣ್ಣೆ ಕಡಲೇಹಿಟ್ಟುಗಳಷ್ಟೇ ಇಳಿಯಲಿಲ್ಲ. ತಾಯಕ್ಕನೂ ಇಳಿದಳು. ಇಲ್ಲ—ಇಳಿಸಿಕೊಳ್ಳಲಾಯಿತು.

ತುಂಡು ಗೋಡೆಯ ಹಜಾರಕ್ಕೆ ಚಂದ್ರಿಕೆಗಳಿಂದ ಮರೆ ಮಾಡಿ ಅಲ್ಲಿ ತಾಯಕ್ಕನನ್ನು ಮಲಗಿಸಲಾಗಿತ್ತು. ಬಿಳಿಯ ಕಂಬಳಿಯು ಮಾತ್ರ ತಾಯಕ್ಕನನ್ನು ಎಡೆಬಿಡದೆ ಜೊತೆಯಲ್ಲೇ ಇದ್ದು ಅವಳನ್ನು ತನ್ನ ಮಡಿಲಿನಲ್ಲಿ ಹಾಕಿಕೊಂಡಿರುತ್ತಿತ್ತು.

ಆದರೂ ಮಾದೇವೂಗೆ ನಿರಾಸೆಯಾಯಿತು. ತಾಯಕ್ಕನನ್ನು ಮನೆಯೊಳಕ್ಕೆ ಇಳಿಸಿಕೊಳ್ಳುತ್ತಿದ್ದಂತೆ ಅವನು ಪುಟ್ಟತಾಯಿಯಲ್ಲಿ ಸಡಗರವನ್ನು ನಿರೀಕ್ಷಿಸುತ್ತಿದ್ದನು. ಇಲ್ಲ— ಕಾಣಬರಲಿಲ್ಲ. ಅವಳಲ್ಲಿ ಯಾವ ವಿಧವಾದ ಬದಲಾವಣೆಯೂ ಆಗಲಿಲ್ಲ. ಯಾವುದೋ ಅರಿಸಿನವರೊಬ್ಬರ ಮನೆಯ ಕುದುರೆ ಲಾಯದಲ್ಲಿ ನರಳುತ್ತಾ ಬಿದ್ದಿದ್ದ ತಾಯಕ್ಕನನ್ನು ಹುಡುಕಲು ತಾನು ಪಟ್ಟ ಪಾಡನ್ನು ಮಾದೇವೂ ಬಹಳ ವಿವರವಾಗಿ ಹೆಂಡತಿಯ ಮುಂದೆ ವರ್ಣಿಸಿದನು. ಉಹ್ಞು—ಪುಟ್ಟತಾಯಿಯು ಸಂತೋಷಪಟ್ಟಂತೆ ತೋರಲಿಲ್ಲ. ತಾನು ಪಟ್ಟ ಶ್ರಮವೆಲ್ಲಾ ಅಸಾರ್ಥಕವಾಯಿತೋ ಏನೋ ಎಂದುಕೊಂಡನು, ಮಾದೇವೂ. ತಾನೇ ಬಲವಂತದಿಂದ ಕರೆದುಕೊಂಡು

ಬಂದಿದ್ದುದರಿಂದ ಅತ್ತೆಯ ಸೇವೆಯಲ್ಲಿ ತನ್ನ ಆಸಕ್ತಿಯನ್ನು ಕಡಿಮೆ ಮಾಡಿ ಕೊಳ್ಳುವಂತಿರಲಿಲ್ಲ.

ಪುಟ್ಟತಾಯಿ, ತನ್ನ ತಾಯಿಯ ಮೇಲೆ ಏಕೋ ಉದಾಸೀನಳಾಗಿ ಯೇ ಇದ್ದಳು, ಮಾದೇವೂ ಮನೆಯಲ್ಲಿದ್ದಾಗ ತಾಯಿಯ ಮೇಲೆ ಸಿಡಿಗುಟ್ಟುತ್ತಲೇ ಇದ್ದಳು- ಆಗ ಮಾದೇವೂ ಹೆಂಡತಿಯನ್ನು ನಿರ್ದಾಕ್ಷಿಣ್ಯವಾಗಿ ಗದರಿಸುತ್ತಿದ್ದನು. ಆಗ ಪುಟ್ಟತಾಯಿ ತಾಯಕ್ಕನಿಗೆ ಕೇಳದಂತೆ ಗುಟ್ಟಾಗಿ ಗಂಡನಿಗೆ ಹೇಳುತ್ತಿದ್ದಳು 'ನಮ್ಮವ್ವೆ ಎಂಥಾವಳು ಅಂತಿದ್ರಿ ? ಅವಳಿಗೆ ಉಪಚಾರ ಮಾಡಕ್ಕೆ ಬದಲು ನಾಯಿಗೆ ಹಾಕಿದರೆ ಎಷ್ಟೋ ಉಪಕಾರ' ಎನ್ನುತ್ತಿದ್ದಳು. ಮಾದೇವೂ ಧ್ವನಿಯನ್ನು ಮತ್ತೂ ತಗ್ಗಿಸಿಕೊಂಡು 'ನನಗೂ ಎಲ್ಲಾ ಗೊತ್ತದೆ ಕಣ್ಸನ್ನಿರೆ. ಎಷ್ಟೇ ಆಗಲಿ ತಾಯಿಯಲ್ವ ? ಅವಳ ಸೇವೆ ಮಾಡಕ್ಕೆ ಪುಣ್ಯ ತಂದಿರಬೇಕು' ಎಂದು ಉಪದೇಶಿಸುತ್ತಿದ್ದನು.

ತಾಯಕ್ಕನಿಗೆ ಇದುಬಲು ವಿಚಿತ್ರವಾಗಿ ತೋರುತ್ತಿತ್ತು. ನ್ಯಾಯವಾಗಿ ತನ್ನನ್ನು ಕಂಡರೆ ಆಸೆಯಾಗಿರಬೇಕಾದ ಮಗಳು ಗೊಣಗುಟ್ಟುತ್ತಲೇ ಇದ್ದಳು. ಮಗಳಿಗಿಂತ ದೂರದವನಾದ ಅಳಿಯ ತನ್ನಲ್ಲಿ ಆದರವಿಟ್ಟು ಕೊಂಡಿದ್ದನು. ಗುಜ್ಜಗೆರೆಗೆ ಅವಳು ಬರಲೊಪ್ಪಿದಾಗ ತನ್ನನ್ನು ಪುಟ್ಟತಾಯಿಯು ಬರಮಾಡಿಕೊಳ್ಳುತ್ತಿದ್ದಾಳೆಂದು ನಂಬಿ ಒಪ್ಪಿಕೊಂಡಿದ್ದಳು. ಆದರೆ ಇಲ್ಲಿ ತದ್ವಿರುದ್ಧವಾಗಿತ್ತು. ರೋಗಿಯಾದ ಹೆಂಗಸಿಗೆ ಹೆಂಗಸಿನ ಸೇವೆಯೇ ಅಗತ್ಯವಾಗಿದ್ದುದರಿಂದ ಪುಟ್ಟತಾಯಿಯೇ ತಾಯಕ್ಕನ ಔಷಧಿ ಪಥ್ಯ ಸ್ನಾನವನ್ನೆಲ್ಲಾ ನೋಡಿಕೊಳ್ಳುತ್ತಿದ್ದುದು. ಆದರೆ ಅವಳು ತನ್ನ ಗಂಡನ ಬಲವಂತಕ್ಕೆ ಮಾಡುವವಳಂತೆ ಮಾಡುತ್ತಿದ್ದಳು. ಪ್ರತಿಯೊಂದನ್ನೂ ಮಾದೇವೂ ಹೇಳಿದಮೇಲೆಯೇ ಪುಟ್ಟತಾಯಿ ಮಾಡುತ್ತಿದ್ದುದು.

ತಾಯಕ್ಕನ ಈ ಬಾರಿಯ ವ್ಯಾಧಿ ಗುಣವಾಗುವ ಮಟ್ಟಿಗೆ ಅವಳಿಗೆ ತೋರಿಬರುತ್ತಿರಲಿಲ್ಲ. ಅರಸಿನವರ ಕುದುರೆಯ ಲಾಯದಲ್ಲಿ ಬಿದ್ದಿದ್ದಾಗ ಅವಳಿಗೆ ಒಂದೊಂದು ಬಾರಿ ತನ್ನವರೆನ್ನುವವರಾರೂ ಇಲ್ಲದಕಡೆ ಸತ್ತುಹೋ

ಗಬೇಕಲ್ಲ ಎಂಬ ಹೆದರಿಕೆಯಾಗಿತ್ತು. ಅದು ಅವಳಾಗಿ ಮಾಡಿಕೊಂಡಿದ್ದ ಕೆಲಸ. ಕೆಂಪಣ್ಣ ಅವಳನ್ನು ಸೇರಿಸಿದ್ದ ಮನೆಯೇ ಬೇರೆ. ಅಲ್ಲಿಗೆ ಬರುತ್ತಿದ್ದವರೊಬ್ಬರ ಮನೆಗೆ ತಾಯಕ್ಕ ಹೊರಟುಹೋಗಿದ್ದಳು. ಮೊದಲನೆಯವರಿಗೆ ಮೋಸ ಮಾಡಲಲ್ಲ. ತನ್ನವರೊಬ್ಬರಿಗೂ ತಿಳಿಯದ ಕಡೆಗೆ ಹೋಗಲೆಂದು. ಆದರೆ ಮಾದೇವೂ ಮೊದಲಿನವರ ಮನೆಯ ಆಳುಗಳನ್ನು ಹಿಡಿದು ಅತ್ತೆಯನ್ನು ಪತ್ತೆ ಹಚ್ಚಿದ್ದನು. ಅಳಿಯನನ್ನು ಕಂಡಾಗ ತಾಯಕ್ಕನಿಗೆ ದೇವರನ್ನೇ ಕಂಡಹಾಗಾಗಿತ್ತು. ಮೇಲೆ ಒಪ್ಪದಿದ್ದರೂ ಒಳಗೆ ಗುಜ್ಜಗೆರೆಗೆ ಬರಲು ಮನಸ್ಸಿದ್ದೇ ಇತ್ತು. ಆಗವಳು ಅಂದುಕೊಂಡಿದ್ದಳು. 'ಹೌದು. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳೇ ತಂದೆತಾಯಿಗಳ ಕಷ್ಟಕ್ಕಾಗೋರು.'

ಆದರೆ ಇಲ್ಲಿ? ಪುಟ್ಟತಾಯಿಯ ನಡೆವಳಿಕೆ ಅವಳ ಭಾವನೆಯನ್ನು ಬರಿದುಮಾಡಿತ್ತು. ಮಾದೇವೂವಿನಲ್ಲಿ ಸ್ವಲ್ಪ ಆಸಕ್ತಿ ಕಡಿಮೆಯಾದುದು ತಾಯಕ್ಕನಿಗೆ ಸೂಕ್ಷ್ಮವಾಗಿ ತಿಳಿದುಬಂದಿದ್ದರೂ ತಾಯಕ್ಕ ಮೆಲ್ಲನೆ ಅರ್ಧರಾತ್ರಿಯಲ್ಲಿ ಬೀದಿಗೆ ಬಂದು ಸೇದುವ ಭಾವಿಗೆ ಬಿದ್ದುಬಿಡಬೇಕೆಂದಿದ್ದಳು. ಆದರೆ ಮಾದೇವೂವಿನಲ್ಲಿ ಲೇಶವೂ ಕಲ್ಮಶವಿರಲಿಲ್ಲ. 'ಮಾರಾಯ. ದೇವರಂತಾ ಅಳಿಯಾ' ಎಂದುಕೊಂಡಳು ತಾಯಕ್ಕ. ಅಂತೆಯೇ ಮಗಳನ್ನು ಕಂಡರೆ ಅಷ್ಟೊ ಅಷ್ಟು ಸಿಟ್ಟು ಬರುತ್ತಿತ್ತು. ತನ್ನ ಮನಸ್ಸಿನಲ್ಲೇ ಕಾಣಸಿಗುತ್ತಿದ್ದ ತನ್ನ ಗಂಡನೊಡನೆ ಹೇಳುತ್ತಿದ್ದಳು. 'ನೋಡಿದ್ರಾ ನಿಮ್ಮ ಪಿರೀತಿ ಪುಟ್ಟಿಯಾ? ಅವ್ವೆ ಕಂಡರೆ ಎಷ್ಟು ಅಕ್ಕರೆ?' ಆ ಮಾತಿಗೆ ಸಿದ್ದಪ್ಪ ಸಣ್ಣಗೆ ನಕ್ಕು ಕಣ್ಮರೆಯಾಗುತ್ತಿದ್ದನು.

ತಾಯಕ್ಕನ ಮನಸ್ಸಿಗೆ ಒಂದೇ ನೆಮ್ಮದಿ. ತನಗೆ ಬೇಕಾದ ವ್ಯಕ್ತಿಯೆಂದು ತನ್ನ ಅಳಿಯನೊಬ್ಬನಾದರೂ ಇರುವನಲ್ಲ ಎಂಬುದು. ಅವಳಿಗೆ ಸಾಯಲೂ ಅದೊಂದೇ ಸಮಾಧಾನವಿದ್ದದ್ದು. ಅವಳಿಗೆ ಯಾವ ಆಸೆಯೂ ಉಳಿದಿರಲಿಲ್ಲ. ಅಥವಾ ಬದುಕುವ ಭ್ರಾಂತಿಯೂ ಇರಲಿಲ್ಲ. ದಿನದಿನಕ್ಕೆ ಕ್ಷೀಣವಾಗುತ್ತಾ ಬರುತಿದ್ದ ತಾಯಕ್ಕನಿಗೆ ಸಾಯಲು ಮತ್ತೂ ಒಂದು

ದೊಡ್ಡ ಸಮಾಧಾನ ಸಿಕ್ಕಿದುದು ಬಹು ಆಶ್ಚರ್ಯ, ಅದನ್ನವಳು ಎಂದೂ ಆಲೋಚಿಸಿರಲಿಲ್ಲ.

ಒಂದು ಮುಚ್ಚಂಜೆಯಲ್ಲಿ ಗುಜ್ಜಗೆರೆಯ... ಗುಜ್ಜಗೆರೆಯಲ್ಲೇ ಕೋಲಾಹಲವೆದ್ದಿತು. ಸಾಯುವುದಕ್ಕೆ ಸಿದ್ಧಳಾಗಿದ್ದ ತಾಯಕ್ಕನನ್ನೂ ಬಡಿದೆಬ್ಬಿಸುವಂತಿದ್ದ ಕೋಲಾಹಲ! 'ಗುಜುಗುಜು' ಗುಂಪು!! ಪುಟ್ಟಿ ತಾಯಿ ಓಡಿಬಂದು ತಾಯಕ್ಕನಿಗೆ ಹೇಳಿದಳು. "ಅವ್ವಾ. ಪೊಂಪಿನಮನೇ ಅತ್ರ ಪಟೇಲರನ್ನ ಆ ನಾಟಕದ ಉಪಾದ್ರು ಸೆತ್ತೆನಿಂಗಪ್ಪ ಒಡದಾಕ್ಬುಟ್ಟಿದ್ದನಂತೆ. ಪಟೇಲರಕಡೇ ಜನಗಳೆಲ್ಲ ಸೆತ್ತೇನಿಂಗಪ್ಪನ್ನ ಚಾವಡೀಲಿ ಇಡಿದು ಕಟ್ಟಾಕ್ಕಂಡವ್ರಂತೆ! ಪಟೇಲರ ಹೆಣ ಅಲ್ಲೇ ಬಿದ್ದದಂತೆ. ಅದ್ಯಾಕೋ ಶಂಭುಗೌಡರು ಊರ್ಲೇ ಇಲ್ವಂತೆ" ಎಂದು ಹೇಳಿದ ಮಗಳ ಮುಖವನ್ನೇ ತಾಯಕ್ಕ ದುರುಗುಟ್ಟಿ ಬಹಳ ಹೊತ್ತು ನೋಡಿದಳು. ಹೊರಟುಹೋಗಲು ಎದ್ದ ಪುಟ್ಟಿ ತಾಯಿಯ ಕೈಹಿಡಿದು ಕುಳ್ಳಿರಿಸಿಕೊಂಡಳು. ಕಣ್ಣಲ್ಲಿ ನೀರು ತುಂಬಿಕೊಂಡು ಹೇಳಿದಳು. "ಅವ್ವಾ.... ನನ್ನ ಕಂಡ್ರೆ ಯಾಕೆ ಪುಟ್ಟಿ ನಿನಗಾಗಕ್ಕಿಲ್ಲ ನೀನೂ ನನ್ನ ಅಂಥವಳೂಂತ್ಲೇ ತಿಳ್ಕಂಡಿದ್ದೆಯಾ ಪುಟ್ಟಿ. ಇವತ್ತು ಆ ಪಿಶಾಚಿಗಳೆರಡೂ ಸತ್ತೋದೋ. ನನ್ನ ಮನಸ್ಸಿಗೆ ಭಾಳ ನೆಮ್ಮದಿ ಸಿಕ್ಕದೆ ಕೂಸು. ನೀನೊಬ್ಬಳು ಬಾಯ್ಬುಟ್ಟು ಹೇಳಿಬುಡು ಕೂಸು. ನಿನಗ್ಯಾಕೆ ನನ್ನ ಕಂಡ್ರಾಗಕ್ಕಿಲ್ಲ ಅನ್ನದು ತಿಳ್ಕಂಡು ಹೊಂಟೋಯ್ತೀನಿ. ಏಳ್ಬುಡು ಕೂಸು" ಎಂದು ಮಗಳನ್ನು ಬೇಡಿಕೊಂಡಳು. ಪುಟ್ಟಿತಾಯಿಗೂ ದುಃಖ ಉಮ್ಮಳಿಸಿಬಂದಿತು.

"........ಇಲ್ಲಾಕಣವ್ವ........ನಿನ್ನ ಕಂಡರೆ ನನಗೆ ಆಸೆಯಿಲ್ಲಾನ್ನ ಬೇಡವ್ವಾ........ಹೊಂಟೋಯ್ತೀನೀ ಅಂತ ಮಾತ್ರ ಅನ್ಬೇಡಕಣವ್ವ........ ನಾನು ನಿನ್ಕಂಡ್ರೆ ಸಿಡಿಸಿಡಿ ಅನ್ನದು ಯಾಕೇ ಹೇಳ್ತೀನಿ ಕೇಳು........ ಎಷ್ಟಾದರೂ ನಾನು ಹೆಣ್ಣು........ಇದು ನನ್ನ ಗಂಡನ ಮನೆ........ಹೆಣ್ಣು ಮಕ್ಕಳು ಗಂಡನ ಮನೇಗೆ ತಾಯೀನ್ಕರಕಂಡುಬಂದು ಉಪಚಾರ ಮಾಡಿದರೆ ಜನ ಏನನ್ಕಂಡಾರವ್ವ....ನಾನು ಮಾಡ್ತಾ ಇರದು ಬರೀ ಮೋಸ.... ಗಂಡನಿಗೆ ಮೋಸ........ಅವ್ವಾ........ನನ್ನವ್ವಾ........ನಾನೇನ್ಮಾಡಲಿ....

ಹೇಳವ್ವ." ಪುಟ್ಟತಾಯಿ ತಾಯಿಯ ಎದೆಯಮೇಲೆ ತಲೆಯೊರಗಿಸಿ ಅತ್ತಳು. ತಾಯಕ್ಕ ಉದ್ವೇಗದಿಂದ ಹೇಳಿದಳು, " ಪುಟ್ಟ.... .. ನೀನು ನನ್ನ ಮಗಳಲ್ಲ.......... ನನ್ನ ತಾಯಿ........ನನ್ನ ತಾಯಿ........ನನ್ನ ಪುಟ್ಟ........ ತಾಯಿ!! ಅಂದಿಗೇ ತಾಯಕ್ಕನ ಜೀವ ಸಂಪೂರ್ಣವಾಗಿ ಕುಗ್ಗಿ ಹೋಯಿತು. ಅವಳು ತೀರ ಕಷ್ಟಪಟ್ಟು ಕಣ್ಣು ತೆರೆದ ದಿನ ಮಲ್ಲೇಶ ಅವಳನ್ನು " ಅವ್ವಾ........ನಿನಗೇನು ಬೇಕವ್ವಾ.........ಏನಾಗಬೇಕವ್ವ ? " ಎಂದು ಕೇಳುತ್ತಿದ್ದನು. ತಾಯಕ್ಕ ತನ್ನ ಕಟ್ಟಕಡೆಯ ಆಸೆಯನ್ನು ಹೇಳಿದಳು, " ಮಲ್ಲೂ, ನಾನು ಪುಟ್ಟತಾಯಿೀಗೆ ಒಂದು ರೇಸ್ಮೇ ದೊಡ್ಡಸೀರೆ ತಕ್ಕೊಡ್ತೀನೀಂತ ಏಳಿದ್ದೆ—ನೀನು ತಕ್ಕೊಟ್ಟುಬುಡು."

ಮಲ್ಲೇಶ, ಕಾರಿನಲ್ಲಿ ಊರಿಗೆ ಸಾಗಿಸಿಕೊಂಡುಹೋದನು—ತಾಯಕ್ಕನನ್ನಲ್ಲ—ಅವಳ ದೇಹವನ್ನು.

———

ನರೇಂದ್ರಬಾಬು ಅವರ ಮುಂದಿನ ಕೈಹೊತ್ತಿಗೆ ಕಾದಂಬರಿ

# ಇವಳೇ ಕಾರಣ

ಸುಮಾರು ೫೦೦ ಪುಟಗಳು

**ಶೀಘ್ರದಲ್ಲೇ ಪ್ರಕಟವಾಗುವುದು**

ಡಿ. ವಿ. ಕೆ. ಮೂರ್ತಿ
ಪ್ರಕಾಶಕರು
ಕೃಷ್ಣಮೂರ್ತಿಪುರಂ
ಮೈಸೂರು.